*Sanctioned as Text book by the D. E. Under*
*No: S-86 - (a) - II - C dated 4-5-1955*

೧೯೫೫ನೆಯ ಇಸ್ವಿಯ ಪ್ರಾಥಮಿಕ, ಮಾಧ್ಯಮಿಕ ಹಾಗೂ ಬೇಸಿಕ್ ಶಾಲೆಗಳ
ಸಂಯುಕ್ತ ಅಭ್ಯಾಸಪತ್ರಿಕೆಗನುಸರಿಸಿ ರಚಿಸಿದ

# ವಿಜಯ ವಾಚನಮಾಲೆ

[ ೬ನೆಯ ತರಗತಿಗೆ ]





ಸಂಪಾದಕ ಮಂಡಲ:

ಶ್ರೀ. ತಟ್ಟಿ ಶಾಮರಾಯರು, ಬಿ. ಎ., ಎಸ್. ಟಿ. ಸಿ.
ಶ್ರೀ. ಎಸ್. ಎಮ್. ಹುಣಶಾಳ, ಎಮ್. ಎ., ಬಿ. ಟಿ.
ಶ್ರೀ. ವರದರಾಜ ಹುಯಿಲಗೋಳ, ಎಮ್. ಎ., ಬಿ. ಟಿ.
ಶ್ರೀ. ಸಿ. ಎಸ್. ಕುಲಕರ್ಣಿ, ಎಮ್. ಎ., ಬಿ. ಟಿ.



ಪ್ರಕಾಶಕರು:

ರಾಮಾಶ್ರಯ ಬುಕ್ ಡಿಪೋ, ಧಾರವಾಡ

ಬೆಲೆ: ೨—೨—೦

ಪ್ರಕಾಶಕರು:

**ಆಯ್. ಆರ್. ಆಕಳವಾಡಿ ಆ್ಯಂಡ ಸನ್ಸ**

ರಾಮಾಶ್ರಯ ಬುಕ್ ಡಿಪೊ,

ಕಾಯಿಪಲ್ಲೆ ಬೀದಿ ::: ಧಾರವಾಡ.

ಮೊದಲ ಮುದ್ರಣ — ೧೯೫೫

ಪ್ರತಿಗಳು : ೩,೦೦೦

ಡಬಲ ಡೆಮಿ ವ್ಹೈಟ ಪ್ರಿಂಟಿಂಗ ೩೬ ಪೌಂಡಿನ
ಕಾಗದದ ಮೇಲೆ ಮುದ್ರಿತವಾದುದು.

ಮುದ್ರಕರು:

( ಪುಟ ೧ ರಿಂದ ೭೨ )

**ಎಮ್. ಜಿ. ಪಾಲೇಕರ,**

ವಸಂತ ಮುದ್ರಣಾಲಯ, ಧಾರವಾಡ

( ಉಳಿದುದು )

**ಎಲ್. ಆಯ್. ಆಕಳವಾಡಿ,**

ಬಿ. ಎ., ಬಿ. ಕಾಮ್

ಮನೋಹರ ಮುದ್ರಣಾಲಯ,

ಮಂಗಳವಾರ ಪೇಟೆ ::: ಧಾರವಾಡ

# ಮೊದಲ ಮಾತು

**ವಿಜಯ ವಾಚನ ಮಾಲೆಯ** ಹೂಗಳನ್ನು ವಿದ್ಯಾರ್ಥಿಗಳಿಗೆ ಅರ್ಪಿಸಲು ಅತೀವ ಆನಂದವಾಗುತ್ತದೆ. ಸುಗಂಧ ಸುಮನಗಳಲ್ಲಿ ಭೃಂಗವೃಂದವು ನಲಿಯುವಂತೆ ವಿದ್ಯಾರ್ಥಿವೃಂದವು ಈ ಹೊತ್ತಿಗೆಗಳನ್ನು ಮೆಚ್ಚಿ ನಲಿದರೆ ನಮ್ಮ ಶ್ರಮವು ಸಾರ್ಥಕವಾದಂತೆ; ನಮ್ಮ ಆಶ ಕೈಗೂಡಿದಂತೆ.

ದೇಶ--ಕಾಲಗಳ ಸ್ಥಿತಿಯು ಬದಲಾದಂತೆ ಮಕ್ಕಳ ಸಾಮಾನ್ಯ ತರಗತಿಯ ಜ್ಞಾನವೂ ಬದಲಾಗಬೇಕಾಗುವುದು. ಮಕ್ಕಳ ಹೊಸ ಜ್ಞಾನಾಭಿಲಾಷೆಗೆ ಪೋಷಕವಾಗುವಂತೆ ಇದರಲ್ಲಿಯ ಪಾಠಗಳನ್ನು ಸಿದ್ಧಪಡಿಸಲಾಗಿದೆ.

ಮುಂಬೈ ಸರಕಾರದವರು ಹೊಸ ಅಭ್ಯಾಸ ಪತ್ರಿಕೆಯಲ್ಲಿ ಕಾಣಿಸಲಾದ ಎಲ್ಲ ವಿಷಯಗಳನ್ನೊಳಗೊಳ್ಳುವಂತೆ ಇಲ್ಲಿಯ ಪಾಠಗಳನ್ನು ಸಿದ್ಧಪಡಿಸಲಾಗಿದೆಯಲ್ಲದೆ ವಿಜ್ಞಾನ, ಕಲೆ, ಇತಿಹಾಸ, ಸಂಶೋಧನೆ, ಉದ್ಯೋಗ, ಯಂತ್ರ ಹೀಗೆ ವಿವಿಧ ವಿಷಯಗಳ ಬಗ್ಗೆ ಹೊಸ ಹೊಸ ವಿಚಾರಗಳು ವಿದ್ಯಾರ್ಥಿಗಳಿಗೆ ಹೊಳೆಯುವಂತೆ ನೋಡಿಕೊಳ್ಳಲಾಗಿದೆ. ಗಡುಚಾದ ವಿಷಯಗಳನ್ನು ಕಳೆದ ಸಿಗುರಿನ ಕಬ್ಬಿನಂತೆ ಸುಲಭ ಮಾಡಲು ಪ್ರಯತ್ನಿಸಿದೆ.

ಕನ್ನಡ ಪಠ್ಯ ಪುಸ್ತಕಗಳಲ್ಲಿ ಮುಖ್ಯವಾಗಿ ಸಾಹಿತ್ಯಾಭಿರುಚಿ ಇರುವುದು ಅವಶ್ಯ. ಕನ್ನಡ ಸಾಹಿತ್ಯ ಇದೀಗ ಹಲವು ವರ್ಷಗಳಲ್ಲಿ ಅನೇಕ ಮುಖವಾಗಿ, ಅನೇಕ ರೀತಿಯಾಗಿ, ಪ್ರಭಾವಯುತವಾಗಿ ಬೆಳೆದಿದೆ. ಕನ್ನಡದೇವಿ ವೈವಿಧ್ಯಪೂರ್ಣವಾದ ಶ್ರೇಷ್ಠ ಸುಮನಗಳಿಂದ ಅಲಂಕೃತಳಾಗಿದ್ದಾಳೆ. ಅವಳೀ ಬೆಡಗು ನಮ್ಮ ವಿದ್ಯಾರ್ಥಿವೃಂದಕ್ಕೆ ತಿಳಿಯುವುದು ಅತ್ಯಂತ ಅವಶ್ಯಕವಾಗಿದೆ. ಈ ದೃಷ್ಟಿಯಿಂದ ವಿಜಯ ವಾಚನ ಮಾಲೆಯ ಪಾಠಗಳು ರಚಿಸಲ್ಪಟ್ಟಿವೆ. ಉತ್ತಮ ಹೊತ್ತಿಗೆಗಳಲ್ಲಿಯ ಉತ್ತಮೋತ್ತಮ ಭಾಗಗಳನ್ನು ಆರಿಸಿಕೊಳ್ಳಲಾಗಿದೆ.

'ಹಳೆಯದು ಹೊಸದಕ್ಕೆ ದಾರಿಕೊಟ್ಟು ಹೋಗುತ್ತದೆ' ಎಂದು ಟೆನಿಸನ್ ಎಂಬ ಆಂಗ್ಲ ಕವಿ ಹೇಳಿದ್ದಾನೆ. ವಿಜಯ ವಾಚನ ಮಾಲೆಯ ಪುಸ್ತಕಗಳಲ್ಲಿ ಹಳೆಯ ಸೊಬಗನ್ನೂ ಕಾಣುವುದಲ್ಲದೆ, ಹೊಸ ಹೊಸ ಲೇಖಕರ ಹೊಸ ಬೆಳಕಿನ ಲೇಖನಗಳನ್ನೂ ಕಾಣಬಹುದು.

ಪತ್ರ, ನಾಟಕ, ಕಥೆ, ದಿನಚರಿ ಈ ಎಲ್ಲ ಸಾಹಿತ್ಯ ಪ್ರಕಾರದ ಪಾಠಗಳನ್ನು ತೆಗೆದುಕೊಳ್ಳಲಾಗಿದೆ. ಈ ವಿವಿಧ ಸಾಹಿತ್ಯ ರೂಪಗಳ ಪರಿಚಯವು ಇಲ್ಲಿ ವಿದ್ಯಾರ್ಥಿಗಳಿಗುಂಟಾಗುವುದು. ತಿಳಿಹಾಸ್ಯದ ಲೇಖನ, ವಿಜ್ಞಾನ ವಿಷಯದ ಮೇಲಿರುವ ಲೇಖನ ಇವುಗಳನ್ನೂ ಇಲ್ಲಿ ಪೋಣಿಸಿದೆ. ವಿಷಯಗಳು ಸ್ಪಷ್ಟವಾಗಿ ತಿಳಿಯಬೇಕೆಂದು ಗದ್ಯ ಮತ್ತು ಪದ್ಯ ಭಾಗಗಳಲ್ಲಿ ಅನೇಕ ಕಡೆಗೆ ಉಪಯುಕ್ತ ಚಿತ್ರಗಳನ್ನು [illegible].

ಕರ್ನಾಟಕದ, ಭಾರತೀಯ ಮತ್ತು ಜಾಗತಿಕ ಸುಪ್ರಸಿದ್ಧ ಆದರ್ಶ ಮಹಿಳೆಯರ ಜೀವನ ಚರಿತ್ರೆಗಳನ್ನು ಸಂಕ್ಷೇಪದಲ್ಲಿ ಕೊಡಲು ಪ್ರತಿಯೊಂದು ಪುಸ್ತಕದಲ್ಲಿ ಒಂದೊಂದು ಪಾಠವನ್ನು ಕೊಡಲಾಗಿದೆ.

ಇದರಂತೆಯೆ 'ದಾರಿಯ ದೀಪ' ಎಂಬ ಪಾಠಗಳಲ್ಲಿ ನೀತಿಯುಳ್ಳ ಕಥೆಗಳನ್ನು, ವಿಚಾರಣೀಯವಾದ ಸಂಗತಿಗಳನ್ನು ಪ್ರಕಟಿಸಿದೆ. ಈ ಪಾಠಗಳಲ್ಲಿಯ ವಿಷಯ 'ಕಿರಿದರೊಳ್ ಪಿರಿದರ್ಥ'ವನ್ನು ತುಂಬಿಕೊಂಡಿರುವಂತಹದು. ಶಿಕ್ಷಕರು ಸ್ವಲ್ಪ ವಿಸ್ತರಿಸಿ ವಿದ್ಯಾರ್ಥಿಗಳಿಗೆ ತಿಳಿಸಿಕೊಟ್ಟರೆ ಅರ್ಥವು ಮನದಟ್ಟಾಗುವದು.

ಪಾಠದ ಮೇಲಿನ ಟಿಪ್ಪಣಿಗಳನ್ನು ಒಂದು ವಿಶಿಷ್ಟ ರೀತಿಯಿಂದ ತೆಗೆಯಲಾಗಿದೆ. ಮುಂಬಯಿ ಸರಕಾರದ ಅಭ್ಯಾಸ ಪತ್ರಿಕೆಯಲ್ಲಿ ತಿಳಿಸಿದಂತೆ ವ್ಯಾಕರಣವನ್ನು ಸರಿಯಾಗಿ ಹೊಂದಿಸಿದೆ. ವ್ಯಾಕರಣದಲ್ಲಿ ಒಂದು ವಿಷಯ ಮುಗಿದ ಕೂಡಲೇ ಅದರ ಮೇಲೆ ಪುನರವಲೋಕನದ ಪ್ರಶ್ನೆಗಳನ್ನು ಕೊಟ್ಟಿದೆ. ಅವನ್ನೆಲ್ಲ ಶಿಕ್ಷಕರು ಗಮನಿಸಬೇಕು.

ಪ್ರಬಂಧ ಪಾಠಗಳಲ್ಲಿ ನಿಬಂಧ, ಪತ್ರಲೇಖನ, ಸಂಭಾಷಣೆ, ಕಥಾರಚನೆ ಮೊದಲಾದವುಗಳ ಬಗ್ಗೆ ವಿವರವಾಗಿ ವಿವೇಚಿಸಿದೆ. ವಿವೇಚನೆಯ ತರುವಾಯ ವಿದ್ಯಾರ್ಥಿಗಳಿಗೆ ಬರೆಯಲು ಅನುಕೂಲವಾಗುವಂತೆ ಬರೆಹಗಳನ್ನು ಕೊಟ್ಟಿದೆ. ಆದಷ್ಟು ಮಟ್ಟಿಗೆ ಪಾಠದ ವಿಷಯಗಳಿಗೆ ಸಂಬಂಧಿಸಿ ಬರೆಹಗಳು ಬಂದಿವೆ.

ವ್ಯಾಕರಣ ಮತ್ತು ಪ್ರಬಂಧಪಾಠಗಳನ್ನು ವಿದ್ಯಾರ್ಥಿಗಳು ಲಕ್ಷಗೊಟ್ಟು ಓದಿ, ಅಲ್ಲಿ ಕೊಟ್ಟಂತೆ ಅಭ್ಯಸನಗಳನ್ನು ಬರೆದರೆ ವಿದ್ಯಾರ್ಥಿಗಳ ಭಾಷೆಯ ಮಟ್ಟ, ಮೇಲ್ಮಟ್ಟದ್ದಾಗುವದೆಂಬುವುದರಲ್ಲಿ ಸಂಶಯವಿಲ್ಲ.

ನಮ್ಮ ಕಾರ್ಯದಲ್ಲಿ ಸುಪ್ರಸಿದ್ಧ ಸಾಹಿತಿಗಳು ನೆರವಾಗಿದ್ದಾರೆ. ವಿಶಿಷ್ಟ ಶಾಸ್ತ್ರೀಯ ವಿಷಯಗಳ ಮೇಲೆ ಪ್ರಭುತ್ವವಿದ್ದವರು ಲೇಖನ ಬರೆಯಲು ತಮ್ಮ ಜ್ಞಾನದ ನೆರವು ನೀಡಿದ್ದಾರೆ. ಕಲಾವಿದರು ಚಿತ್ರಗಳನ್ನು ತೆಗೆದು ಪುಸ್ತಕವನ್ನು ಅಲಂಕರಿಸಿದ್ದಾರೆ. ಹನಿ ಹನಿ ಕೂಡಿದರೆ ಹಳ್ಳವಾಗುತ್ತದೆ. ಅಮೃತದ ಹನಿಗಳು ಕೂಡಿಕೊಂಡು ಈ ಪವಿತ್ರ ಕಾರ್ಯದ ಪ್ರವಾಹ ಹರಿದಿದೆ. ನಮ್ಮ ಕಾರ್ಯದಲ್ಲಿ ಸಹಕರಿಸಿದ ಎಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ.

"ಸರ್ವರಲಿ ಒಂದೊಂದು ನುಡಿಗಲಿತು ವಿದ್ಯೆಯ ಪರ್ವತವೇ ಆದ ಸರ್ವಜ್ಞ" ಎಂದು ಹೇಳಿದೆ. ವಿಜಯ ವಾಚನ ಮಾಲೆಯ ಪಾಠಗಳಲ್ಲಿಯ ನುಡಿಗಲಿತು, ನಮ್ಮ ವಿದ್ಯಾರ್ಥಿಗಳೂ ಸರ್ವಜ್ಞನಂತೆ ವಿದ್ಯೆಯ ಪರ್ವತದ ಶಿಖರವನ್ನೇರಿ, ವಿಜಯ ಸಂಪಾದಿಸುವರೆಂದು ನಂಬಿದ್ದೇವೆ. ಜಯ **ಕರ್ನಾಟಕ! ಜಯ-ಹಿಂದ!**

**—ಸಂಪಾದಕರು**

# ಪ್ರಕಾಶಕರಿಂದ—

೫, ೬, ೭ ಈ ವರ್ಗಗಳಿಗಾಗಿ ಕನ್ನಡ ಪಠ್ಯಪುಸ್ತಕಗಳನ್ನು ಪ್ರಕಟಿಸಬೇಕೆಂಬ ಹಂಬಲ ನಮ್ಮದು ಬಹಳ ದಿನಗಳಿಂದಿತ್ತು. ಈ ವರ್ಷ ನಮ್ಮ ಆಶೆ ಫಲಿಸಿದ್ದಕ್ಕೆ ನಮಗೆ ಅತೀವ ಆನಂದವಾಗುತ್ತಿದೆ.

ಮುಂಬಯಿ ಸರಕಾರದವರು ಪ್ರಕಟಿಸಿದ ಹೊಸ ಅಭ್ಯಾಸ ಪತ್ರಿಕೆಯ ಪ್ರಕಾರ ಈ ಪುಸ್ತಕಗಳಲ್ಲಿ ಪಾಠಗಳಿವೆ. ವಿದ್ಯಾರ್ಥಿಗಳಿಗೆ ಯೋಗ್ಯವಾಗುವಂತೆ ಪಾಠಗಳ ಮಟ್ಟವನ್ನು ಇಡಲಾಗಿದೆ; ಅದಲ್ಲದೆ ಅರ್ಥಸ್ಪಷ್ಟತೆಗಾಗಿ ಬಹಳ ಕಡೆಗೆ ಚಿತ್ರಗಳನ್ನು ಕೊಡಲಾಗಿದೆ.

ನಮ್ಮ ಯೋಜನೆ ಕಾರ್ಯಕಾರಿಯಾಗಿ ಫಲಬಿಡುವಂತಾಗಲು ಬಹಳ ಬರೆಹಗಾರರು ನಮ್ಮೊಡನೆ ಸಹಕರಿಸಿದ್ದಾರೆ. ಅವರ ಉಪಕಾರವನ್ನು ನಾವು ನೆನೆದಷ್ಟೂ ಕಡಿಮೆಯೇ.

ನಮ್ಮದು ಇದು ಮೊದಲನೆಯ ಪ್ರಯತ್ನ. ತಜ್ಞರು ಇವುಗಳಲ್ಲಿಯ ದೋಷಗಳನ್ನು ತಿಳಿಸಿದರೆ, ನಾವು ಅವರಿಗೆ ಕೃತಜ್ಞರಾಗುವೆವು. ಹಾಗೂ ಅವನ್ನು ಮುಂದಿನ ಆವೃತ್ತಿಗಳಲ್ಲಿ ತಿದ್ದಿಕೊಳ್ಳಲು ಅನುಕೂಲವಾಗುವುದು.

ಶಿಕ್ಷಕರೂ ನಮ್ಮ ಈ ಕನ್ನಡ ಹೊತ್ತಗೆಗಳನ್ನು ಆತ್ಮಾದರದಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇವೆ.

# ಪರಿವಿಡಿ

## ಗದ್ಯ ವಿಭಾಗ

## ಪದ್ಯ ವಿಭಾಗ

# ವಿಜಯ ವಾಚನಮಾಲೆ

## [೬ನೆಯ ತರಗತಿಗೆ]



## ೧. ಸವಿ ನೆನಹು

[ಸೃಷ್ಟಿಯ ಚೆಲುವು ಚಿಕ್ಕವರಲ್ಲಿಯೂ ಏನೋ ಒಂದು ವಿಚಿತ್ರ ಪರಿಣಾಮವನ್ನುಂಟು ಮಾಡುತ್ತದೆ. ದೊಡ್ಡವರಾದರೂ ಆ ಸಂಗತಿಗಳ ನೆನಹು ಹಾಗೆಯೇ ಉಳಿಯುತ್ತದೆ. ಪ್ರಸಿದ್ಧ ಸಾಹಿತಿಗಳಾದ ವಿ. ಕೃ. ಗೋಕಾಕ ಅವರು ತಾವು ಬಾಲಕರಿರುವಾಗ ಅನುಭವಿಸಿದ ಕೆಲವು ರಸನಿಮಿಷಗಳನ್ನು ಈ ಪಾಠದಲ್ಲಿ ಬರೆದಿದ್ದಾರೆ.]

★ ★ ★

ನಾನು ಐದಾರು ವರ್ಷದ ಹುಡುಗನಿದ್ದಾಗ ತಾಯಿಯೊಡನೆ ಒಂದು ತಾಣದೆಡೆ ಹೋಗುತ್ತಿದ್ದುದು ನನಗೆ ನೆನಪಿದೆ. ಆಗ ನಾವು ಬಾಳೇಕುಂದ್ರಿಯಲ್ಲಿದ್ದೆವು. ಅದೊಂದು ಚಿಕ್ಕ ಗ್ರಾಮ. ಊರಿನಿಂದ ಸುಮಾರು ಎರಡು ಮೂರು ಕೂಗಳತೆ ದಾಟಿದನಂತರ ಸಂತರ ಸಮಾಧಿಯಿತ್ತು. ಅಲ್ಲಿ ತಾಯಿ ಪೂಜೆಗೆಂದು ಹೋಗಿ ಬರುತ್ತಿದ್ದಳು. ಅವಳನ್ನು ನಾನು ಹಿಂಬಾಲಿಸುತ್ತಿದ್ದೆ. ಊರ ತುದಿಯಿಂದ ಸಮಾಧಿಯ ವರೆಗೆ ಒಂದು ಕಾಲು ದಾರಿ ಜೋಳದ ಪೈರಿನ ನಡುವೆ ಸುಳಿದು ಹೋಗಿತ್ತು. ನಮ್ಮ ನಿತ್ಯದ ಪಯಣ ಆ ಮಾರ್ಗವಾಗಿ. ಹಚ್ಚನ್ನ ಪೈರಿನ ನಡುವೆ, ದೊಡ್ಡವರ ಎದೆಯುದ್ದ ಬೆಳೆದು ನಿಂತ ಪೈರಿನ ನಡುವೆ ಅಚ್ಚಳಿಯದ ಆ ದಾರಿ ಬಿದ್ದು ಕಂಗೊಳಿಸುತ್ತಿತ್ತು. ಮೊದಮೊದಲು ಕಿರಿದಾದ ದೇಟುಗಳು; ಮುಂದಕ್ಕೆ ಹೋಗುತ್ತಿದ್ದ ಹಾಗೆ ಬೆಳೆಯು ನಿಡಿದಾಗುತ್ತಿತ್ತು. ಪೈರನ್ನು ಒಳಸೇರಿ ಹೋಗುವದಕ್ಕಿಂತ ಮೊದಲು ನಮ್ಮ ಬಲಗಡೆಗೆ ಒಂದು ತೋಟದ ಬಾವಿ ಕಾಣುವದು. ಒಂದು ದಿನ ಹೋಗುತ್ತಿದ್ದಾಗ ಹಾಗೆಯೇ ಹಿಂದುಳಿದು ಹೊಲದ ದಂಡೆಯ ಮೇಲೆ ನಿಂತುಕೊಂಡು ನೋಡುತ್ತಿದ್ದೆ. 'ಬಾರೋ!' ಎಂದು ಮುಂದಿನಿಂದ ತಾಯಿ ಕರೆದಳು. ನಿದ್ದೆಯಿಂದೆಚ್ಚತ್ತವನಂತೆ ಗಡಿಬಿಡಿಸಿ ತಾಯಿಯೆಡೆಗೆ ಓಡಿಹೋದೆ. ದೀರ್ಘಕಾಲವಿರ

ಬಹುದಾದ ಆ ರಸಾನುಭವಕ್ಕೆ ತಾಯಿಯ ಕರೆಯಿಂದ ಆಕಸ್ಮಿಕವಾಗಿ ಭಂಗ ಬಂದಿತ್ತು. ರಸಾನುಭವದಲ್ಲಿ ತಲ್ಲೀನವಾದ ನನ್ನ ಮನಸ್ಸು ತಳಮಳಿಸಿದಂತಾಯಿತು. ಅದರಿಂದ ನನ್ನ ಸ್ಮರಣ ಶಕ್ತಿಯು ಒಮ್ಮೆಲೆ ಚಕಿತವಾದ ಕಾರಣ, ಆ ಚಿತ್ರವು ಇನ್ನೂ ನನಗೆ ಅಚ್ಚಳಿಯದೆ ನೆನಪುಳಿದಿರಬೇಕು. ಚಿಕ್ಕಂದಿನಲ್ಲಿ ಇಂಥ ಎಷ್ಟೋ ಅನುಭವಗಳು ಬರುತ್ತವೆ. ಆದರೆ ನಮ್ಮ ಜ್ಞಾಪಕ ಶಕ್ತಿ ಅವನ್ನು ನೆನಪಿಡುವಷ್ಟು ಶಕ್ತಿವಂತವಾಗಿರುವದಿಲ್ಲ. ನಾನು ನಿತ್ಯ ತನ್ನ ಬೆನ್ನುಹತ್ತಿ ಬರುತ್ತಿದ್ದೆನೆಂದು ಹಿಂದುಗಡೆ ತಾಯಿ ಹೇಳಿದಳು. ನನಗೆ ಯಾವುದೂ ನೆನಪಿಲ್ಲ. ಇದೆಲ್ಲ ಸಂಭವಿಸಿದ ದಿವಸ ನಾನು ಮನೆಬಿಟ್ಟು ಬಂದುದೂ ನೆನಪಿಲ್ಲ. ಸಮಾಧಿಯನ್ನು ತಲುಪಿದುದೂ ನೆನಪಿಲ್ಲ. ಆದರೆ ಮೇಲೆ ಬಣ್ಣಿಸಿದ ನೋಟ ಮಾತ್ರ—ಅದರಲ್ಲಿಯ ಆ ನೋಟದ ದಾರಿಯೂ ಸಹ ಇಂದಿಗೂ ನಿಚ್ಚಳವಾಗಿ ನೆನಪಿದೆ. ಅಂದಿನ ರಸಾನುಭವವು ಎಷ್ಟು ಬಲವತ್ತರವಾಗಿರಬೇಕು ! ನೆನೆದಾಗೆಲ್ಲ ಆನಂದದಾಯಕವಾಗುತ್ತದೆ. ತಿರುಗಿ ನಾನು ಎಷ್ಟೋ ಸಲ ಅದೇ ಸ್ಥಳಕ್ಕೆ ಹೋಗಿ ನಿಂತು ನೋಡಿದ್ದೇನೆ. ಹಿಂದಿನ ರಸಾನುಭವದ ನೆನಪಾಗುತ್ತದೆಯೇ ಹೊರತು ಹೊಸದು ಜನಿಸುವದಿಲ್ಲ.

ಒಮ್ಮೆ ನಾವು ಹೊಸೂರಿನಿಂದ ತಿರುಗಿ ಶ್ರಾವಣೂರಿಗೆ ಬರುತ್ತಿದ್ದೆವು. ಬಹಳವಾದರೆ ನಾನು ೧೩–೧೪ ವರುಷದವನಿರಬಹುದು. ನಮ್ಮಕ್ಕನು ಆಗ ಇರುತ್ತಿದ್ದುದು ಹೊಸೂರಿನಲ್ಲಿ. ಹೊಸೂರಿನಿಂದ ಶ್ರಾವಣೂರಿಗೆ ಬರಬೇಕಾದರೆ ೧೫ ಮೈಲು ಚಕ್ಕಡಿಯ ಪ್ರವಾಸ ! ಅದರಲ್ಲಿ ಮೊದಲಿನ ನಾಲ್ಕು ಮೈಲು ಸಿಗ್ಗಾವಿಯ ರಸ್ತೆಯನ್ನು ಕೂಡುವ ತನಕ, ನಾವು ಚಕ್ಕಡಿಯೊಂದನ್ನೇ ಅಲ್ಲ, ಎತ್ತನ್ನೂ ಎಳೆದುಕೊಂಡು ಬರಬೇಕಾಗುವದು !

ಹನುಮನಹಳ್ಳಿಯ ವರೆಗೆ ನಮ್ಮ ಚಕ್ಕಡಿ ಬಂದಿತು. ಅಷ್ಟರಲ್ಲಿ ಜೋರಾಗಿ ಮಳೆ ಸುರಿಯಹತ್ತಿತು. ಸವಾರಿ ಕಿತ್ತು ಹೋಗುವಂತೆ ಗಾಳಿ ಗುಡುಗುಗಳೊಡನೆ ಹೊಯ್ಯು ಒಳಗೆ ನೀರು ಸುರಿಯುವಂತೆ ಮಳೆ ! ಉಪಾಯಗಾಣದೆ [illegible] ಬಂಡಿಯನ್ನು ಹಳ್ಳಿಯ ಹನುಮನ ಗುಡಿಯ ಕಡೆಗೆ ಹೊಡೆದೆವು. ಅಲ್ಲಿ ನಡುಗುತ್ತ ಕುಳಿತುಕೊಂಡೆವು.

ಅದೊಂದು ಅಡ್ಡ ಮಳೆ. ನೆಲವನ್ನೆಲ್ಲ ನೀರು ನೀರು ಮಾಡಿ ಹೇಗೆ ಬಂದ ಹಾಗೆ ಬೀಸಿ ಹೋಗಿಬಿಟ್ಟಿತು. ಮತ್ತೆ ನಾವು ಪ್ರಯಾಣ ಬೆಳೆಸಿದೆವು. ಹವೆಯು ಆಹ್ಲಾದಕರವಾಗಿತ್ತು. ಸಂಜೆಯ ಹೂ ಬಿಸಿಲು ಎಲ್ಲೆಡೆಗೆ ಹಬ್ಬಿಕೊಂಡು ನೆಲದಿಂದ

ಉಗಮಿಸುವ ಕೆಂಪಿಗೆ ಒಂದು ಶೋಭೆಯನ್ನು ಕೊಡುತ್ತಿತ್ತು. ನಾನೂ, ನನ್ನೊಡನೆ ನಮ್ಮೂರಿನಿಂದ ಬಂದ ಇನ್ನಿರ್ವರು ಚಿಕ್ಕ ಗೆಳೆಯರೂ ಬಂಡಿಯಲ್ಲಿ ಕೂಡದೆ ರಸ್ತೆಗುಂಟ ಹಾರಾಡುತ್ತ ಹೊನ್ನಿ ಹೂಗಳನ್ನು ಹರಿಯುತ್ತ ಮುಂದೆ ಸಾಗಿದೆವು. ಅಲ್ಲಿ ಮಳೆಯ ಸೀಮಾರೇಖೆ ಬಿದ್ದಿತ್ತು. ನೋಡಿರಿ! ಒಂದೇ ಸಮನಾಗಿ, ಕುಶಲನಾದ ಇಂದ್ರನೇ ಬಂದು ಥಳಿ ಹೊಡೆದಂತೆ, ನಾವು ತುಳಿಯುತ್ತಿರುವ ರಸ್ತೆ ತೊಯ್ದಂತೆ ಅಲ್ಲಿಯ ರಸ್ತೆಯೂ ತೊಯ್ದು ಹಸಿಯಾಗಿತ್ತು. ಆದರೆ ಕಾಣದ ಒಂದು ಸೀಮಾರೇಖೆಯನ್ನು ದಾಟಿದೊಡನೆ ಮಳೆಯ ಹನಿಯೂ ಸಹ ಇಲ್ಲ. ಮಳೆಯ ಸುದ್ದಿಯೇ ತಿಳಿಯದವರಂತೆ ಆ ಪ್ರದೇಶವೆಲ್ಲ ಕಂಗೊಳಿಸುತ್ತಿತ್ತು. ಆ ಗೆರೆಯ ಹಿಂಬದಿಗೆ ತದ ತದನೆ ತೊಯ್ದ ರಸ್ತೆ, ನೀರಿನಲ್ಲಿ ನಿಂತ ಹೊಲಗಳು, ಅಲ್ಲಿ ಚಲ್ಲಾಟವಾಡುತ್ತಿರುವ ಪಕ್ಷಿಗಳು, ಆಕಾಶದಲ್ಲಿ ಇನ್ನೂ ಅಲೆದಾಡುವ ಮೋಡಗಳು; ಆ ಗೆರೆಯ ಮುಮ್ಮಗ್ಗಲು ಒಂದು ಮಳೆ ಹನಿ ಸಹ ಬೀಳದೆ ಅಂದವಾಗಿದ್ದ ರಸ್ತೆ ಎಂದಿನಂತೆ ನಗುತ್ತಿರುವ ಪ್ರಕೃತಿಯ ಚೆಲುವು, ನಿರಭ್ರವಾದ ಆಕಾಶ, ವಿಸ್ಮಯಕಾರಕವಾಗಿದ್ದಿತು. ಮಳೆ ಬೀಳುವಾಗ ಅನೇಕಸಲ ಮನೆಯಲ್ಲಿ ಕುಳಿತು ನಾನು ವಿಚಾರ ಮಾಡುತ್ತಿದ್ದೆ: ಈ ಮಳೆ ಬೀಳುವದು ಎಲ್ಲಿ ಹೇಗೆ ಮುಗಿಯುವದೋ ನೋಡಬೇಕೆಂದು. ಇಂದು ಮಾತ್ರ ಅದು ಸಾಧಿಸಿತು. ಮಳೆಬಿಲ್ಲು ಬಂದು ಇಲ್ಲಿ ನೆಲವನ್ನು ಮುಟ್ಟುವದೆಂಬುದನ್ನು ಮಾತ್ರ ನಾನು ಇನ್ನೂ ಕಂಡು ಹಿಡಿದಿಲ್ಲ. ಅದಿರಲಿ, ಆ ನೋಟವನ್ನು ನೋಡಿ ಎಲ್ಲರೂ ಹಿಗ್ಗಿದೆವು. ಈಗ ಅದು ಯಾರಿಗೆ ನೆನಪಿದೆಯೋ ನಾನರಿಯೆ. ನನ್ನ ಪ್ರಾಣದ ಕನ್ನಡಿಯಲ್ಲಿ ಮಾತ್ರ ಅದು ನಿಚ್ಚಳವಾಗಿ ಮೂಡಿದೆ. ಪ್ರತಿವರ್ಷವೂ ನನ್ನ ಜೊತೆಯಲ್ಲಿ ನಿರಭ್ರವಾಗಿ ನಿಂತ ರಸಾನುಭವಗಳಲ್ಲಿ ಇದೊಂದು.

ಮತ್ತೆ ನಾನು ೬–೭ ವರ್ಷದವನಿರುವಾಗ ಸಂಭವಿಸಿದ ಇನ್ನೊಂದು ಮಾತು ಹೇಳುತ್ತೇನೆ. ನಾವೆಲ್ಲರೂ ಕಲಘಟಗಿಗೆ ಪ್ರಯಾಣ ಬೆಳೆಸುತ್ತಿದ್ದೆವು. ನಮ್ಮ ಆಪ್ತರಲ್ಲಿ ಒಬ್ಬರ ಲಗ್ನವಾಗುವದಿತ್ತು. ಯಾರ ಲಗ್ನ ಯಾವಾಗ ಎಂಬುದನ್ನು ನಾನು ಹಿಂದಿನಿಂದ ತಿಳಿದುಕೊಂಡೆ. ಬಾಲ್ಯದಿಂದ ನನಗೆ ನೆನಪಿದ್ದ ವಿಷಯವೆಂದರೆ ಇಷ್ಟೆ: ನಾವೆಲ್ಲರೂ ಲಗ್ನಕ್ಕೆ ಹೊರಟಿದ್ದೇವೆ; ಮೂರು ನಾಲ್ಕು ಚಕ್ಕಡಿಗಳು ನಡೆದಿವೆ; ಕಲಘಟಗಿಗೆ ಹೋಗುತ್ತಿದ್ದೇವೆ. ನಾನು ನೋಡದಿರುವ ಊರು; ಮೇಲಾಗಿ ವಿಚಿತ್ರವಾದ ಹೆಸರು, ಅಂತೇ 'ಕಲಘಟಗಿ'ಯು ನನ್ನ ಜ್ಞಾಪಕದಲ್ಲಿರಬೇಕು. ನಮ್ಮ ಬಂಡಿಯು ಉಳಿದವುಗಳಿಗಿಂತ ಮುಂದಿತ್ತು, ನಾನು ಕುಳಿತಿದ್ದ

ಬಂಡಿಯುವನ ಹತ್ತಿರವೆ ! ಅಲ್ಲಿ ಕುಳಿತು ಮುಂದೆ ಕಾಣುವ ದೃಶ್ಯವನ್ನು ನೋಡು
ತ್ತಿದ್ದೆನು. ಒಮ್ಮೆಲೆ ದಾರಿಯು ಹೊರಳಿ ಬಲಗಡೆ ಸಾಗಿತು. ಬಂಡಿಯುವನೂ
ಎತ್ತನ್ನು ತಿರುಗಿಸಿದ. ಎಡಬಲದಲ್ಲಿ ನೀಳವಾಗಿ ತೋಳು ತೋಳಾಗಿ ಬಿಟ್ಟು ಬೆಳೆ
ದಿದ್ದ ಮರಗಳು ಸಾಲುಸಾಲಾಗಿ ನಿಂತಿದ್ದವು. ಮುಗಿಯಿತು ! ಇದೆಲ್ಲಾ ಸ್ಮರ-
ಣೀಯವೇಕಾಯಿತೋ ನಾನು ಹೇಳಲಾರೆ. ಆ ನೋಟದಲ್ಲಿ ಯಾವುದೋ ಒಂದು
ಸೊಬಗನ್ನು ಕಂಡ ಜೀವವು ಅದರಲ್ಲಿ ಬೆರೆತು ಹೋಗಿರಬೇಕು.

ಮುಂದಿನ ಒಂದು ಮಾತೂ ನೆನಪಿದೆ. ಸಂಜೆಗೆ ನಾವು ಮಿತ್ರಿಕೋಟೆಯನ್ನು
ಮುಟ್ಟಿ ರಾತ್ರಿಗಾಗಿ ಅಲ್ಲಿ 'ವಸ್ತಿ' ಮಾಡಿದೆವು. 'ಮಿತ್ರಿಕೋಟೆ' ಯೆಂದರೆ ಹೇಗಿರು
ವುದೋ ಎಂದು ಆ ದಿನವೆಲ್ಲ ನಾನು ಯೋಚಿಸಿದ್ದೆ. ಸಾಧಾರಣವಾಗಿ ಎಲ್ಲ
ಊರುಗಳಿರುವಂತೆಯೇ ಇದ್ದಿತು. ಒಂದುಗುಡಿಯಲ್ಲಿ ಇಳಿದುಕೊಂಡಿದ್ದಾಯಿತು.
ನಮ್ಮ 'ಟೋಳಿ' ಎಲ್ಲ ಕೂಡಿ ನಾವು ಸುಮಾರು ೧೫-೨೦ ಹುಡುಗರಿದ್ದೆವು. ನಮ
ಗೆಂದು ಕಟ್ಟಿ ತಂದಿದ್ದ ಚಪಾತಿ ಚಟ್ನಿಯನ್ನು ಅಡಿಗೆಯಾಗುವ ಪೂರ್ವದಲ್ಲಿ ಅಜ್ಜಿ
ಎಲ್ಲರಿಗೂ ಬಡಿಸಿದಳು. ಇಷ್ಟು ಹೊತ್ತು ಬಂಡಿಯಲ್ಲಿ ಕುಳಿತು ಬಂದುದರಿಂದ
ಉಂಟಾದ ಹಸಿವು, ಸಮವಯಸ್ಕರ ಜೊತೆ, 'ಮಿತ್ರಿಕೋಟೆ' ಯನ್ನು ಮುಟ್ಟಿ
ಮನಸ್ಸಿಗಾದ ಆನಂದ-ಇವೆಲ್ಲ ಕಾರಣಗಳಾಗಿರಬೇಕು. ಅಂತೂ ಅಂದಿನ ಚಪಾತಿ-
ಚಟ್ನಿಯ ರುಚಿಯನ್ನು ನಾಲಗೆಯು ಇಂದಿಗೂ ನೆನೆಸುತ್ತದೆ! ಚಪಾತಿ ಚಟ್ನಿಯ
ರುಚಿಯಲ್ಲಿಯೇ ಮಾಧುರ್ಯವಿರಬಹುದೇನೆಂದು ಬಗೆದು ಅವನ್ನು ನಾನು ಮತ್ತೆ
ಅನೇಕಸಲ ತಿಂದು ನೋಡಿದ್ದೇನೆ. ನನ್ನ ಪ್ರಯೋಗವು ಯಶಸ್ವಿಯಾಗಿಲ್ಲ.

**ಶಬ್ದಾರ್ಥ :**

ನಿಡಿದು-ಉದ್ದ; ರಸಾನುಭವ-ಆನಂದದ ಅನುಭವ; ಸೀಮಾರೇಷೆ-ಗಡಿಯ
ಗೆರೆ; ನಿರಭ್ರ-ಸ್ವಚ್ಛ.

**ಪ್ರಶ್ನೆ :**

೧. ಜೋಳದ ಪೈರಿನ ವರ್ಣನೆ ಹೇಗೆ ಮಾಡಿದೆ ?
೨. ತಾಯಿಯ ಧ್ವನಿ ಕೇಳಿ ಮಗನಿಗೆ ಹೇಗೆ ಅನಿಸಿತು ?
೩. ಮಳೆಯ ವರ್ಣನೆಯಲ್ಲಿಯ ಒಂದು ಸುಂದರವಾದ ಕಲ್ಪನೆಯನ್ನು ಹೇಳಿರಿ.
೪. ಕಲಘಟಗಿಯ ದಾರಿಯ ಸೊಬಗು ಸ್ಮರಣೀಯವಾಗಲು ಕಾರಣವೇನು ?
೫. ಆ ದಿನದ ಚಪಾತಿ ಚಟ್ನಿಗೆ ರುಚಿ ಬರಲು ಕಾರಣಗಳು ಯಾವವು ?

## ವ್ಯಾಕರಣ :

### ವಾಕ್ಯಗಳಲ್ಲಿಯ ಪ್ರಕಾರಗಳು :

ಈಗ ನೀವು 'ವಾಕ್ಯ' ಎಂದರೇನೆಂಬದನ್ನು ಕಲಿತಿರುವಿರಿ. ಇನ್ನು ಮೇಲೆ ವಾಕ್ಯಗಳಲ್ಲಿಯ ಪ್ರಕಾರಗಳನ್ನು ನೀವು ತಿಳಿದುಕೊಳ್ಳುವದು ಅವಶ್ಯವಾಗಿದೆ.

ಎಲ್ಲ ವಾಕ್ಯಗಳನ್ನು ನಾವು ಮುಖ್ಯವಾಗಿ ಎರಡು ದೃಷ್ಟಿಯಿಂದ ವಿಭಾಗಿಸ ಬಹುದು. (೧) ಅರ್ಥ. (೨) ರಚನೆ.

ರಚನೆಯ ದೃಷ್ಟಿಯಿಂದ ವಾಕ್ಯಗಳಲ್ಲಿ ಉಂಟಾಗುವ ಪ್ರಕಾರಗಳನ್ನು ಕಲಿಯುವ ದಕ್ಕಿಂತ ಮೊದಲು ಅರ್ಥದ ದೃಷ್ಟಿಯಿಂದ ವಾಕ್ಯಗಳಲ್ಲಿ ಎಷ್ಟು ಪ್ರಕಾರಗಳು ಉಂಟಾಗುತ್ತವೆ ಎಂಬುದನ್ನು ಕಲಿಯುವದು ಬಹಳ ಅಗತ್ಯವಾಗಿದೆ. ಆದ್ದರಿಂದ ಮೊದಲು ಅರ್ಥದ ದೃಷ್ಟಿಯಿಂದ ವಾಕ್ಯಗಳಲ್ಲಿ ಎಷ್ಟು ಪ್ರಕಾರಗಳಾಗುತ್ತವೆಂಬುದನ್ನು ಕಲಿಯೋಣ.

### ಕೆಳಗಿನ ಈ ವಾಕ್ಯಗಳನ್ನು ನಿರೀಕ್ಷಿಸಿರಿ.

೧. ನಾವು ಆಗ ಬಾಳೇಕುಂದ್ರಿಯಲ್ಲಿದ್ದೆವು.
೨. ಮಗು, ನೀನು ಆ ಜೋಳದ ಪೈರಿನಲ್ಲಿ ಸುಮ್ಮನೇ ಏಕೆ ನಿಂತುಕೊಂಡಿರುವೆ ?
೩. ನನ್ನ ಜೊತೆಗೆ ಈಗಲೇ ಬಾ.
೪. ಆಹಾ ! ಅದೆಂಥ ಸುಂದರ ದೃಶ್ಯವು !

ಇವುಗಳಲ್ಲಿ ಒಂದನೆಯದು ನಿಶ್ಚಯಾರ್ಥಕವಾಕ್ಯವು. ಎರಡನೆಯದು ಪ್ರಶ್ನಾರ್ಥಕ ವಾಕ್ಯವು. ಮೂರನೆಯದು ವಿಧ್ಯರ್ಥಕ ವಾಕ್ಯವು. ನಾಲ್ಕನೆಯದು ಭಾವಬೋಧಕ ವಾಕ್ಯವು.

ಅರ್ಥದ ದೃಷ್ಟಿಯಿಂದ ವಾಕ್ಯಗಳಲ್ಲಿ (೧) ನಿಶ್ಚಯಾರ್ಥಕ (೨) ಪ್ರಶ್ನಾರ್ಥಕ (೩) ವಿಧ್ಯರ್ಥಕ (೪) ಭಾವಬೋಧಕ ಎಂದು ನಾಲ್ಕು ಪ್ರಕಾರಗಳನ್ನು ಮಾಡ ಬಹುದು.



# ೨. ಅಕ್ಷಯ ಪಾತ್ರೆ

[ಪ್ರತಿಯೊಂದು ದೇಶದಲ್ಲಿಯೂ ಜಾನಪದ ಕತೆಗಳು, ದಂತಕತೆಗಳು ಪ್ರಚಾರದಲ್ಲಿರುತ್ತವೆ. ಅದರಂತೆ ಪ್ಯಾಲೆಸ್ಟಾಯಿನ್ ದೇಶದಲ್ಲಿಯೂ ಇವೆ. ಅಲ್ಲಿ ಪ್ರಚಾರದಲ್ಲಿದ್ದ ಒಂದು ಜಾನಪದ ಕತೆ ಇಲ್ಲಿ ಬಂದಿದೆ.]

★ ★ ★

ಫಿಲೋಮನ್‌ನೂ ಅವನ ಹೆಂಡತಿ ಬೋಸಿಸ್ಸಳೂ ಮನೆಯ ಬಾಗಿಲಲ್ಲಿ ಕುಳಿತು ಮಾತಾಡುತ್ತಿದ್ದರು. ಇಬ್ಬರೂ ಮುದುಕರು. ಹಣ್ಣು ಹಣ್ಣು ಮುದುಕರು. ಆದರೂ ಅವರಿಗೆ ಕಣ್ಣೂ ಕಿವಿಯೂ ಚೆನ್ನಾಗಿದ್ದುವು. ದೂರದಲ್ಲಿ ನಾಯಿ ಬೊಗಳಿದ ಸದ್ದು ಕೇಳಿಸಿತು.

“ಸರಿ. ಅಗೋ! ನಾಯಿಗಳ ಸದ್ದು. ಮಕ್ಕಳೂ ಕೂಗಾಡುತ್ತವೆ. ಯಾರೋ ದಾರಿಹೋಕರು ಇತ್ತ ಬಂದರೇನೋ ?”

“ನೀವು ಬೇಕಾದ್ದು ಹೇಳಿ. ನಾವು ಈ ಊರು ಬಿಟ್ಟು ಹೊರಗಿರುವುದು ನಮಗೆಷ್ಟೋ ಕ್ಷೇಮ! ಎಲ್ಲಾದರೂ ಉಂಟೇ? ಯಾರಾದರೂ ಬಂದರೆ ಅವರ ಮೇಲೆ ನಾಯಿ ಬಿಡುವದೇನು? ಊರ ಮಕ್ಕಳೆಲ್ಲಾ ಅವರನ್ನು ಗೇಲಿ ಮಾಡುವುದು ಎಂದರೇನು? ನಿಜವಾಗಿಯೂ ನಮ್ಮೂರಿನವರಿಗೆ ಬುದ್ಧಿಯಿಲ್ಲ.”

“ಅದೆಷ್ಟು ಸಲ ಹೇಳಿದರೂ ಸಾಲದು. ಹೇಳಿ ಹೇಳಿ ನಾನೇಕೆ ಬಾಯಿ ನೋಯಿಸಿಕೊಳ್ಳಬೇಕು? ನೀನು ಏಳು; ಹೋಗಿ ರೊಟ್ಟಿಗಿಟ್ಟಿ ನೋಡು. ಅವರೂ ಇತ್ತ ಕಡೆಯೇ ಬರುವಂತಿದೆ. ಹೋಗಿ ಅವರನ್ನು ಕರೆದುಕೊಂಡು ಬರುತ್ತೇನೆ. ಯಾರೋ ಏನೋ ಪಾಪ!” ಎಂದು ಮುದುಕನು ಎದ್ದು ಹೊರಟನು. ಮುದುಕಿಯು ಮನೆಯೊಳಗೆ ಹೋದಳು.

ಮುದುಕನು ಅಷ್ಟು ದೂರ ಹೋಗುವುದರೊಳಗಾಗಿ ಇಬ್ಬರು ಪ್ರಯಾಣಿಕರು ಎದುರಾಗಿ ಬಂದರು. ಅವರಲ್ಲಿ ಒಬ್ಬನು ಕಿರಿಯನು. ಇನ್ನೊಬ್ಬನು ಹಿರಿಯನು. ಕಿರಿಯನು ಕೈಯಲ್ಲಿದ್ದ ಕೋಲಿನಿಂದ ನಾಯಿಗಳನ್ನು ಓಡಿಸಿದನು. ಇಬ್ಬರೂ ಮುದುಕನ ಮನೆಯಿದ್ದ ದಿಸ್ಸೆಯನ್ನು ಹತ್ತಿ ಬರುತ್ತಿದ್ದರು.

ಮುದುಕನೇ ಮುಂದೆ ಬಂದು ಮಾತನಾಡಿಸಿದನು— “ನೋ[illegible]ದೆ ಈ

ಕಂಡಂತಿಲ್ಲ. ಪಾಪ! ನಮ್ಮ ಊರಿಗೆ ಬಂದು ನೊಂದಿದ್ದೀರಿ. ಸಂಜೆಯೂ ಆಗಿದೆ. ನೀವು ನಿಲ್ಲುವುದಾದರೆ, ನಮ್ಮ ಮನೆಗೆ ಬನ್ನಿ. ಈ ರಾತ್ರಿ ಇಲ್ಲಿಯೇ ತಂಗಿದರೆ ಸಂತೋಷ. ಸಾಧ್ಯವಿಲ್ಲದಿದ್ದರೆ ಏನೋ ಒಂದಿಷ್ಟು ತಿಂದು ಒಂದು ಗಳಿಗೆ ಕುಳಿತಾದರೂ ಮುಂದಕ್ಕೆ ಹೋಗುವಿರಂತೆ ಬನ್ನಿ."

ಹಿರಿಯನು ಕಿರಿಯನ ಮುಖ ನೋಡಿದನು. ಕಿರಿಯನು ಮಾತನಾಡಿದನು. "ಏನು! ಯಜಮಾನರೇ! ನಿಮ್ಮ ಊರಿನವರು ಮಕ್ಕಳಿಗೆ ಒಳ್ಳೆಯ ಬುದ್ಧಿ ಕಲಿಸಿದ್ದಾರೆ! ಹೊರಗಿನಿಂದ ಯಾರಾದರೂ ಬಂದರೆ, ಅವರ ಕಷ್ಟ ಸುಖ ವಿಚಾರಿಸುವುದು ಬಿಟ್ಟು ಅವರ ಮೇಲೆ ನಾಯಿ ಬಿಟ್ಟು ಕಳ್ಳಿಸೆಯುವುದೇ?"

"ದೇವರೂ, ಅವರು ಕೆಟ್ಟವರು. ಅವರ ಮಾತೇಕೆ? ಸದ್ಯಕ್ಕೆ ಅವರು ಹಾಗೆ ಮಾಡಿದ್ದರಿಂದಲೇ, ತಾವು ದೇವರ ಹಾಗೆ ನಮ್ಮ ಬಾಗಿಲವರೆಗೂ ಬಂದಿರಿ. ಇಲ್ಲದಿದ್ದರೆ ತಾವೇಕೆ ಇಲ್ಲಿಗೆ ಬರುತ್ತಿದ್ದಿರಿ? ಮುಖ್ಯ ನಮಗೆ ತಮ್ಮ ಉಪಚಾರ ಮಾಡುವ ಭಾಗ್ಯವಿತ್ತು. ಅದರಿಂದ ದೇವರು ಅವರಿಗೆ ಆ ಬುದ್ಧಿ ಕೊಟ್ಟ" ಎಂದು ಏನೇನೋ ಒಳ್ಳೆಯ ಮಾತನಾಡಿಕೊಂಡು ಮನೆಗೆ ಕರೆದುಕೊಂಡು ಬಂದನು. ಹೋಣಿಸ್ನಳು ಬಿಸಿನೀರು ಕಾಲಿಗೆರೆದು, ಒರೆಸಿಕೊಳ್ಳುವದಕ್ಕೆ ಚೌಕ ಕೊಟ್ಟು, ಉಪಚರಿಸಿದಳು. ಗಂಡನನ್ನು ಕರೆದು ಪಿಸುಮಾತಿನಲ್ಲಿ "ಯಾರಿವರು?" ಎಂದು ಕೇಳಿದಳು. "ನಾನು ದಾರಿಯುದ್ದಕ್ಕೂ ಕೇಳಿದೆ. ಆತನು ಅವರೂರಿನ ಯಜಮಾನನಂತೆ. ಇವನು ಆತನ ಆಳಂತೆ. ಇನ್ನೇನೂ ಹೇಳಲಿಲ್ಲ." ಎಂದನು. ಅವರು ಹೀಗೆ ಮಾತನಾಡುತ್ತಿರುವಾಗಲೇ, ಆ ಕಿರಿಯನ ಕೈಯಲ್ಲಿದ್ದ ಕೋಲು ಪುಟಪುಟನೆ ಹಾರಿ ಮೆಟ್ಟಲುಹತ್ತಿ ಹೋಗಿ ಮೂಲೆಯಲ್ಲಿ ನಿಂತಿತು. ಎರಡು ಹಾವು ಹೊಸೆದಿದ್ದ ಹಾಗೆ ಕಾಣುತ್ತಿದ್ದ ಕೋಲು. ಅದಕ್ಕೆ ತಲೆಯ ಮೇಲೆ ಎರಡು ರೆಕ್ಕೆ. ರೆಕ್ಕೆಗಳೂ ಅಲುಗಾಡಿದ ಹಾಗೆ ಕಾಣಿಸಿತು. ಅದನ್ನು ಕಂಡು ಹೆಂಡತಿಯು ಗಂಡನಿಗೆ ತೋರಿಸಿದಳು. ಇಬ್ಬರೂ ಅದನ್ನು ಕಂಡು ಆಶ್ಚರ್ಯಪಡುತ್ತಿದ್ದರೆ, ಕಿರಿಯನು, "ಹಾದು! ಹಾದು! ಈ ಕೋಲು ಆಗಾಗ ಹೀಗೆ ವಿಚಿತ್ರ ಮಾಡುವದುಂಟು" ಎಂದು ನಕ್ಕನು. ಮುದುಕರು ಮುಂದೆ ವಿಚಾರಿಸಲಿಲ್ಲ.

ಎಲ್ಲರೂ ಊಟಕ್ಕೆ ಕುಳಿತರು. ಅದಕ್ಕೋ ಮನೆಯಲ್ಲಿ ಎಲ್ಲವೂ ತೀರಿ ಹೋಗಿದೆ. ಹಾಲು ಕೂಡ ಒಂದೇ ಲೋಟ ಇದೆ. ಅವರೇನು ಮಾಡುವರು! ಪಾಪ! ಕೊನೆಗೆ ಮುದುಕಿಯು ಇದ್ದ ಎರಡು ರೊಟ್ಟಿ ಮುರಿದು ನಾಲ್ಕು ಜನರಿಗೂ

ಇಟ್ಟಳು. ತನ್ನ ಗಿಡದಲ್ಲಿ ಬಿಟ್ಟಿದ್ದ ಸಣ್ಣ ಗೊಂಚಲು ದ್ರಾಕ್ಷಿಯ ಹಣ್ಣು ಒಂದು ತಟ್ಟೆಯಲ್ಲಿ ಇಟ್ಟಳು. ಇದ್ದಷ್ಟು ಹಾಲಿನಲ್ಲಿ ತಾವಿಬ್ಬರೂ ಒಂದೊಂದು ತೊಟ್ಟು ಇಟ್ಟುಕೊಂಡು ಮಿಕ್ಕದ್ದನ್ನು ಅವರಿಬ್ಬರಿಗೂ ಕೊಟ್ಟಳು.

ಮುದುಕನು, "ಸ್ವಾಮಿ! ಬಡವರ ಮನೆಗೆ ಭಾಗ್ಯಲಕ್ಷ್ಮಿಯ ಹಾಗೆ ಬಂದಿದ್ದೀರಿ. ಇದ್ದುದರಲ್ಲಿ ತೃಪ್ತಿಪಟ್ಟುಕೊಳ್ಳಿ" ಎಂದು ಉಪಚಾರ ಹೇಳಿದನು. ಹಿರಿಯನು, "ಚೆನ್ನಾಯಿತು, ಚೆನ್ನಾಯಿತು. ನಾವು ಇದು ವರೆಗೆ ಇಂಥಹ ರೊಟ್ಟಿಯನ್ನೇ ತಿಂದಿರಲಿಲ್ಲ. ರೊಟ್ಟಿ ಬಲು ಪಸಂದಾಗಿದೆ, ಇನ್ನಷ್ಟು ಇದೆಯೇ? ಈ ಹೊತ್ತು ಬಲು ದೂರ ತಿರುಗಿ ಹೊಟ್ಟೆ ಚುರುಕಾಗಿದೆ" ಎಂದನು. ಹೆಂಡತಿಯು ಗಂಡನ ಮೊಗ ನೋಡಿ ತನಗೆ ಇಟ್ಟುಕೊಂಡಿದ್ದ ರೊಟ್ಟಿಯನ್ನೇ ತಂದು ಬಡಿಸಿದಳು.

ಕಿರಿಯನು, "ಈ ಹಾಲಂತೂ ಅಮೃತವಿದ್ದ ಹಾಗೆ ಇದೆ. ಇನ್ನಷ್ಟು ಕೊಡುವಿರಾ?" ಎಂದನು. ಮುದುಕಿಯು ತನ್ನ ಪಾಲಿನ ಹಾಲನ್ನೂ ತಂದು ಬಡಿಸಿದಳು. ಹಿರಿಯನು "ಏನಯ್ಯಾ ನನಗೂ ಅಷ್ಟು ಕೊಡು" ಎಂದನು. ಮುದುಕಿಯು ಏನು ಮಾಡಿಯಾಳು? ಹಾಲಿನ ಪಾತ್ರೆ ಬರಿದಾಗಿದೆ. ಬಲು ನೊಂದುಕೊಂಡಳು. ಕಿರಿಯನು "ಏಕೆ ಅಜ್ಜೀ! ಯೋಚಿಸುತ್ತೀರಿ, ಹಾಲಿನ ಪಾತ್ರೆ ಇಲ್ಲಿ ಕೊಡಿ. ಅದರಲ್ಲಿ ಇನ್ನೂ ಇದೆ ಎನ್ನುವಹಾಗಿದೆ" ಎಂದು ಹಾಲಿನ ಪಾತ್ರೆಯನ್ನು



ತಾನೇ ಈಸಿಕೊಂಡು ಬಗ್ಗಿಸಿದನು. ಅದರಿಂದ ಶು[illegible] [illegible]ಲು ಹೊಸಹೊಸ[illegible]ಯಾಗಿ ಆಗ ತಾನೇ ಕರೆದ ಹಾಗೆ ಸುರಿಯಿತು.

ಮುದುಕಿಯು "ಎಲ್ಲೋ ನನಗೆ ಭ್ರಾಂತಿ. ತಪಲ್ಲಿತ್ತೋ ಏನೋ ನನ್ನ ಕಣ್ಣಿಗೆ ಕಾಣಿಸಲಿಲ್ಲ" ಎಂದುಕೊಂಡಳು.

ಹಿರಿಯನು "ಹೌದಯ್ಯಾ! ಹಾಲು ಅಮೃತದ ಹಾಗಿದೆ. ಇನ್ನಷ್ಟು ಬೇಕಯ್ಯಾ!" ಎಂದು ತನ್ನ ಬಟ್ಟಲನ್ನು ಮುಂದೆ ಚಾಚಿದನು. "ಇನ್ನಷ್ಟು ಎಂದು ಸಂಕೋಚವೇಕೆ? ಬೇಕಾದರೆ ಒಂದು ಬಿಂದಿಗಿಯಷ್ಟಿದೆ" ಎಂದು ಕಿರಿಯನು ಇನ್ನೂ ಒಂದು ಬಟ್ಟಲು ಹೊಯ್ದು ತನ್ನ ಬಟ್ಟಲಿಗೂ ಹೊಯ್ದುಕೊಂಡನು.

ಅಲ್ಲಿಯ ವರೆಗೂ ಗಂಡಹೆಂಡಿರು ಸುಮ್ಮನೆ ಒಬ್ಬರ ಮುಖ ಒಬ್ಬರು ನೋಡಿಕೊಳ್ಳುತ್ತಿದ್ದವರು, "ಇದೇನೋ ವಿಚಿತ್ರ! ನಿಜವಾಗಿಯೂ ಇವರು ಯಾರೋ ಮಹಿಮಾಶಾಲಿಗಳು" ಎಂದು ಹೆದರಿ ಮನಸ್ಸಿನಲ್ಲಿಯೇ ನಮಸ್ಕಾರ ಮಾಡಿದರು.

ದ್ರಾಕ್ಷಿಯ ಹಣ್ಣೂ ಹಾಗೆಯೇ ಆಯಿತು. ಹಿರಿಯನು "ಅಯ್ಯಾ! ಇಂತಹ ಹಣ್ಣು ಇದು ವರೆಗೆ ತಿಂದೀಯಾ? ನೋಡು." ಎಂದು ಕಿರಿಯನಿಗೆ ಒಂದೆರಡು ಹಣ್ಣು ಕೊಟ್ಟನು. ಫಿಲೋಮನನಿಗೂ ಒಂದೆರಡು ಹಣ್ಣುಗಳನ್ನು ಕೊಟ್ಟನು. ಫಿಲೋಮನನು ಒಂದು ಹಣ್ಣು ಬಾಯಿಗೆ ಹಾಕಿಕೊಂಡು ಚಪ್ಪರಿಸಿದನು. ನಿಜವಾಗಿಯೂ ಅಮೃತವಿದ್ದ ಹಾಗೆ ಇತ್ತು. ತನ್ನಲ್ಲಿದ್ದ ಇನ್ನೊಂದು ಹಣ್ಣು ಹೆಂಡತಿಯ ಕೈಗೆ ಕೊಟ್ಟನು. ಅವಳೂ ಬಾಯಿಗೆ ಹಾಕಿಕೊಂಡಳು! ಚಪ್ಪರಿಸಿದಳು. ಅವಳಿಗೂ ಆಶ್ಚರ್ಯವಾಯಿತು. ತನ್ನ ಗಂಡನೇ ಹೋಗಿ ಕೈಯಾರ ಕೊಯ್ದು ತಂದಿದ್ದ ಹಣ್ಣು ದಿನದಿನವೂ ತಾವು ಹಣ್ಣು ತರುತ್ತಿದ್ದ ಗಿಡದ್ದೇ ಹಣ್ಣು. ಅವಳು ನಂಬಲಾರದೆ ಹೋದಳು.

ಮರುದಿನ ಬೆಳಗಾಯಿತು. ಬೆಳಗು ಹರಿಯುತ್ತಿದ್ದ ಹಾಗೆಯೇ ಆ ಇಬ್ಬರು ಹೊಸಬರು ಗಂಡಹೆಂಡಿರನ್ನು ಕರೆದು "ಬನ್ನಿ. ನಮ್ಮನ್ನಷ್ಟು ದೂರ ಬಿಟ್ಟು ಬರುವಿರಂತೆ!" ಎಂದು ಹೇಳಿ ಕರೆದುಕೊಂಡು ಹೊರಟರು. ಅವರೊಡನೆ ಆ ಮಾತು ಈ ಮಾತು ಆಡುತ್ತಾ ಮಗ್ಗುಲಲ್ಲಿದ್ದ ಬೆಟ್ಟದ ಮೇಲಿನ ವರೆಗೂ ಕರೆದುಕೊಂಡು ಹೋದರು. ಅಲ್ಲಿ ನಿಂತುಕೊಂಡು ಮಾತನಾಡುತ್ತಾ "ನಿಮ್ಮ ಊರು ಎಲ್ಲಿ ನೋಡಿ" ಎಂದರು. ಮುದುಕರು ನೋಡುತ್ತಾರೆ. ನಿನ್ನೆಯ ಸಂಜೆ ಕಳಕಳಿಸುತ್ತಿದ್ದ ಊರು ಮಾಯವಾಗಿ ಅದು ಇದ್ದೆಡೆ ಒಂದು ಸರೋವರವಿದೆ.

ಮುದುಕರು ಅವರ ಕಾಲಿಗೆ ಬಿದ್ದರು. ಹೊಸಬರು "ಅಯ್ಯಾ! ನಿಮ್ಮ ಉಪಕಾರಕ್ಕೆ ಮೆಚ್ಚಿಕೊಂಡೆವು. ನಾವು ದೇವತೆಗಳು. ಮನುಷ್ಯರನ್ನು ಪರೀಕ್ಷಿಸಲು

ವ್ಯಾಕರಣ :

## ನಿಶ್ಚಯಾರ್ಥಕ ವಾಕ್ಯಗಳು

(ಅ) ವಾಕ್ಯಗಳಲ್ಲಿಯ ಪ್ರಕಾರಗಳನ್ನು ನೀವು ಈಗ ತಿಳಿದುಕೊಂಡಿರುವಿರಿ. ಅವುಗಳಲ್ಲಿ ನಿಶ್ಚಯಾರ್ಥಕ ವಾಕ್ಯಗಳ ಬಗ್ಗೆ ಈಗ ತಿಳಿದುಕೊಳ್ಳೋಣ.

ಒಂದು ನಿಶ್ಚಿತವಾದ ಸಂಗತಿಯನ್ನು ಹೇಳುವ ಅಥವಾ ತಿಳಿಸುವ ವಾಕ್ಯಗಳಿಗೆ **ನಿಶ್ಚಯಾರ್ಥಕ** ವಾಕ್ಯಗಳೆಂದು ಹೆಸರು.

ಕೆಳಗೆ ಕೊಟ್ಟ ವಾಕ್ಯಗಳೆಲ್ಲ ನಿಶ್ಚಯಾರ್ಥಕ ವಾಕ್ಯಗಳೇ ಆಗಿವೆ.

೧. ದೂರದಲ್ಲಿ ನಾಯಿ ಬೊಗಳಿದ ಸದ್ದು ಕೇಳಿಸಿತು.

೨. ಮುದುಕನು ಎದ್ದು ಹೊರಟನು.

೩. ಎಲ್ಲರೂ ಊಟಕ್ಕೆ ಕುಳಿತರು.

೪. ಮತ್ತೆ ತಲೆಯೆತ್ತಿ ನೋಡುವಾಗ್ಗೆ ಅಲ್ಲಿ ಯಾರೂ ಇರಲಿಲ್ಲ.

(ಬ) ನೀವು ಈ ಪಾಠದಲ್ಲಿಯ ಐದು ನಿಶ್ಚಯಾರ್ಥಕ ವಾಕ್ಯಗಳನ್ನು ಗುರುತಿಸಿ ಅವುಗಳನ್ನು ಬರೆದು ತೋರಿಸಿರಿ.

# ೩. ಯಕ್ಷಗಾನ

[ದಿಲ್ಲಿಯಲ್ಲಿ ಯಕ್ಷಗಾನ ನಾಟಕ ಪ್ರದರ್ಶನ !! ಜವಾಹರಲಾಲ ನೆಹರು, ರಾಜೇಂದ್ರಪ್ರಸಾದರಂಥ ಮಹನೀಯರು ನೋಡಲು ಬಂದಿರುವ ಸಂದರ್ಭ !! ರಾಜಧಾನಿಯ ಜನರು ಯಕ್ಷನಾಟಕಗಳ ಗುಣಗಾನ ಮಾಡುವದು !!! ಇವನ್ನೆಲ್ಲ ನೆನೆದಾಗ, ಕನ್ನಡಿಗರ ಕೀರ್ತಿ ಎಲ್ಲ ಕಡೆಗೂ ಹಬ್ಬುತ್ತಿರುವುದನ್ನು ಸ್ಮರಿಸಿದಾಗ, ಹೃದಯ ಆನಂದನಾಗರವಾಗುತ್ತದೆ. ಅಂಥ ಯಕ್ಷಗಾನ ಹೇಗೆ ಹುಟ್ಟಿತು ? ಹೇಗೆ ಬೆಳೆಯಿತು ? ಅದರ ಗುಣಗಳು ಯಾವವು ? ಇವನ್ನೆಲ್ಲ ಬಲ್ಲಿದವರಾದ, ಸುರಿತ ಸಾಹಿತಿಗಳಾದ ಗಣಪತರಾವ ಪಾಂಡೇಶ್ವರ ಅವರೇ ಯಕ್ಷಗಾನದ ಬಗ್ಗೆ ಎಲ್ಲ ಮಾತು ಹೇಳಿದ್ದಾರೆ.]

★ ★ ★

ಸಮುದ್ರ ತೀರದ ಈ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಲಕ್ಷಾವಧಿ ಜನರಿಗೆ ಬಹುದಿನಗಳಿಂದ ಅಲ್ಪ ವೆಚ್ಚದಿಂದಲೇ ಸಾದಾ ಸಲಕರಣೆಗಳಿಂದಲೇ ರಸಾನಂದವನ್ನು ಒದಗಿಸಿಕೊಡುತ್ತ ಬಂದಿರುವ ಈ ಯಕ್ಷಗಾನ ನಾಟಕ ಕಲೆಯು, ಕನ್ನಡ ಜನಾಂಗದ ಉತ್ತಮ ವೈಶಿಷ್ಟ್ಯಗಳಲ್ಲೊಂದಾಗಿದೆ. ಇದಕ್ಕೆ "ಯಕ್ಷಗಾನ"ವೆಂಬ ಹೆಸರು ಹೇಗೆ ಬಂತೆಂಬುದನ್ನು ಸಿದ್ಧಮಾಡಿ ಹೇಳಲಿಕ್ಕೆ ಬಾರದಂತಿದ್ದರೂ ಊಹಿಸಿ ಹೇಳಬಹುದು. ದೇವಲೋಕದಲ್ಲಿ ಗಾಯನ ವಿದ್ಯೆಗೆ ಗಂಧರ್ವರು ಹೆಸರಾಗಿದ್ದಂತೆ [illegible] ನೃತ್ಯಗೀತಾ [illegible] ವಿದ್ಯೆಗೆ ಯಕ್ಷರು ಪ್ರಸಿದ್ಧರಾಗಿದ್ದಾರೆ. ಆ ಯಕ್ಷರು [illegible] ಯಕ್ಷಿಣಿಯರೊಡನೆ [illegible] ಸಾಗಿಸತಕ್ಕವರು; [illegible] ಕುಬೇರನ ಸೇವಕರಾಗಿ[illegible].



ಆ ಯಕ್ಷರು ಕುಬೇರನ ರಾಜಧಾನಿಯಾದ ಅಲಕಾವತಿಯ ಉದ್ಯಾನ ವನಗಳಲ್ಲಿ ಗಾನ, ನೃತ್ಯ[illegible] ನಾಟಕ[illegible] ಅಭಿನಯಿಸುತ್ತಿದ್ದ [illegible] "ಯಕ್ಷಗಾನ ನಾಟಕ" ಎಂದು ಹೆಸರು ಬಿದ್ದಿರಬಹುದೆಂದು [illegible]. ಅವರ ಜೀವನವು ಆನಂದಮಯವಾದ [illegible]

ದಿಂದ ಆಪುತ್ತ ಬಂದಿರುವ ಈ ಯಕ್ಷಗಾನ ನಾಟಕ ಸಂಘದವರ ಜೀವನವು ಕೂಡ ಆನಂದದಿಂದ ತುಂಬಿ ತುಳುಕುವ ನವರಸಭರಿತವಾದ ವಿಲಾಸ ಜೀವನವು; ಆದ್ದರಿಂದಲೇ ಭೂಲೋಕದ ಈ ಯಕ್ಷಗಾನ ನಾಟಕ ಸಂಘದವರಿಗೆ ದೇವಲೋಕದ ಯಕ್ಷರ ಗಾನ ನಾಟಕವೆಂಬ ಹೆಸರು ಬಂದಿರಬಹುದು.

ಈ ಯಕ್ಷಗಾನ ನಾಟಕ ಸಂಘಕ್ಕೆ ಮೊದಲಿಗೆ ಭಾಗವತರ ಮೇಳ, ಬಯಲಾಟ, ದಶಾವತಾರ ಆಟ ಎಂಬ ಹೆಸರುಗಳೂ ರೂಢಿಯಲ್ಲಿದ್ದವು. ದೇವರು ದುಷ್ಟರನ್ನು ದಂಡಿಸಿ, ಶಿಷ್ಟರನ್ನು ಪರಿಪಾಲಿಸಿ, ಧರ್ಮಜಾಗೃತಿ ಮಾಡುವದರ ಸಲುವಾಗಿ ದಶಾವತಾರ ಮಾಡಿದನೆಂದು ಆಸ್ತಿಕರು ನಂಬುತ್ತಾರಷ್ಟೇ. ಆ ಅವತಾರಗಳ ಪುಣ್ಯಕತೆಗಳನ್ನು ನಟಿಸಿ ತೋರಿಸಿ, ಅದರಿಂದ ನೈತಿಕ, ಧಾರ್ಮಿಕ ಸುಧಾರಣೆಗಳಿಗೆ ಸಹಾಯ ಮಾಡುವ ಈ ಯಕ್ಷಗಾನ ನಾಟಕಕ್ಕೆ "ದಶಾವತಾರ ನಾಟಕ"ವೆಂಬ ಹೆಸರು ನಿಜವಾಗಿಯೂ ಒಪ್ಪುತ್ತದೆ. ಭರತಖಂಡದ ಉಜ್ವಲ ಕಾವ್ಯಗ್ರಂಥಗಳೆಂದರೆ ರಾಮಾಯಣ, ಮಹಾಭಾರತ, ಭಾಗವತಗಳು. ಯಕ್ಷಗಾನ ನಾಟಕದ ಪ್ರಸಂಗಗಳೆಲ್ಲವೂ ಈ ಮೂರೂ ಗ್ರಂಥಗಳಲ್ಲಡಕವಾದ ಕಥಾವಸ್ತುಗಳೇ ಆಗಿರುವದರಿಂದ, ಎಲ್ಲಿಯವರೆಗೆ ಭಾರತ–ರಾಮಾಯಣ–ಭಾಗವತಗಳು ಉಳಿಯುವವೋ, ಅಲ್ಲಿಯವರೆಗೆ ಈ ಯಕ್ಷಗಾನ ನಾಟಕಗಳೂ ಉಳಿಯುವವೆಂದು ಧಾರಾಳವಾಗಿ ಹೇಳಬಹುದು.

ಪ್ರಾಚೀನ ಕನ್ನಡ ಗ್ರಂಥಗಳ ಸಮುದ್ರದಲ್ಲಿ ಯಕ್ಷಗಾನ ನಾಟಕ ರತ್ನಗಳು ಇನ್ನೂ ದೊರೆತಂತೆ ತೋರುವದಿಲ್ಲ. ಹಿಂದಿನಕಾಲದ ಯಕ್ಷಗಾನ ನಾಟಕಗಳನ್ನು 'ಭಾಗವತ'ರೆಂಬ ವಿಶಿಷ್ಟ ಮನೆತನದ ವ್ಯಕ್ತಿಗಳು ಕಂಠಪಾಠ ಮಾಡಿಕೊಂಡು, ಒಂದು ತಲೆಮಾರಿನವರು ಮುಂದಿನ ತಲೆಮಾರಿನವರಿಗೆ ಕಂಠಪಾಠ ಮಾಡಿಸುತ್ತ ಬಂದಿರಬೇಕು ಈಗ ದೊರೆಯುವ ಯಕ್ಷಗಾನ ಪ್ರಬಂಧಗಳೆಲ್ಲ ಹೊಸಗನ್ನಡಶೈಲಿಯಲ್ಲಿಯೇ ಬರೆದವುಗಳಿರುವವು. ಈ ಹೊಸಗನ್ನಡ ಯಕ್ಷಗಾನ ಕವಿಗಳಲ್ಲಿ ಉತ್ತರ ಕನ್ನಡ ಜಿಲ್ಲೆಯ ಗೇರುಸೊಪ್ಪೆಯ ಶಾಂತಯ್ಯನವರೂ, ದಕ್ಷಿಣ ಕನ್ನಡ ಜಿಲ್ಲೆಯ ಕುಂಬಳೆಯೋಬಳಿಯ ಪಾರ್ತಿ ಸುಬ್ಬರಾಯರೂ ಮೊದಲಿಗರಾಗಿರುವರು. ಅವರ ಕಾಲವು ಹದಿನೆಂಟನೆಯ ಶತಮಾನದ ಉತ್ತರಾರ್ಧವೆಂದು ವಿದ್ವಾಂಸರು ತರ್ಕಿಸಿರುವರು. ಅಂತು ಗ್ರಂಥಸ್ಥ ಯಕ್ಷಗಾನ ನಾಟಕಗಳು ಕೇವಲ ಎರಡು ಶತಮಾನಗಳ ಈಚೆಗೆ ಹುಟ್ಟಿದವೆನ್ನಬಹುದು.

ಪ್ರಾಚೀನ ಕಾಲದ ಆನಂದೋತ್ಸವ, ಸಮಾರಂಭಗಳಲ್ಲಿ ಕಲೋಪಾಸಕ ರಾದ ಕೆಲವರು ಮೇಳಗೂಡಿ, ಹಾಡಿ, ಆಡಿ ಜನತೆಯ ಸಂತೋಷವನ್ನು ಹೆಚ್ಚಿಸುವ ಒಂದು ಪುಟ್ಟ ಕಾರ್ಯಕ್ರಮವಾಗಿಯೇ ಇದು ಅಂಕುರಿಸಿತು. ಆಗ ಇವು ಒಂದೊಂದು ಅಂಕಿನವಾಗಿದ್ದವು. ಬರಬರುತ್ತ ಕಥಾಭಾಗವನ್ನು ವಿಸ್ತರಿಸಿ, ಬಹಳ ವೇಳೆಯವರೆಗೆ ನಡೆಯುವಂತೆ, ಮೂರಂಕ, ಐದಂಕ, ಏಳಂಕಿನ ನಾಟಕಗಳು ಬಳಕೆಯಲ್ಲಿ ಬಂದವು. ದಶಾವತಾರದ ಯಾವದಾದರೊಂದು ಚಿತ್ತಾಕರ್ಷಕ ವಾದ, ಘಟನೆಯನ್ನು ವೇಷಭೂಷಣ ಸಹಿತವಾಗಿ ನಟಿಸಿ ತೋರಿಸಿ, ಜನತೆಯ ಮೇಲೆ ಅದರ ಪರಿಣಾಮವು ಹೆಚ್ಚಾಗಿ, ಪ್ರೇಕ್ಷಕರ ಆತುರತೆಯು ಹೆಚ್ಚಿದಂತೆ ಇಡೀ ರಾತ್ರಿ ಆಡಿ [illegible]ಸುವಷ್ಟು ದೀರ್ಘವಾದ ಅರ್ಥಾತ್ ಹಲವು ಅಂಕಗಳ ಅಥವಾ ಘಟನೆಗಳ ಯಕ್ಷಗಾನ ನಾಟಕಗಳನ್ನು ಸಿದ್ಧಗೊಳಿಸುವ ಅವಶ್ಯಕತೆ ಯುಂಟಾದಂತೆ ತೋರುವದು. ಈಗೀಗ ಮತ್ತೆ [illegible] ನಾಟಕಗಳು ಬಳಕೆಗೆ ಬರತೊಡಗಿವೆ.

ಯಕ್ಷಗಾನ ನಾಟಕದಲ್ಲಿ ಚಾರಕ [ವೇಷ ಕಟ್ಟುವ ಜಾಗ] ರಂಗಸ್ಥಳ, ಭಾಗವತ, ಗಣಪತಿ ಪೂಜೆ, ಕೋಡಂಗಿ [ವಿನೋದಗಾರ]. [illegible] ಒಡ್ಡೋಲಗ ಮೊದಲಾದ ಅಂಗಗಳಿದ್ದವು. ಅವುಗಳನ್ನು [illegible] ನಾಟಕ ಗಳಲ್ಲಿ ನೇಪಥ್ಯ, ನಾಂದಿ, ನಟಿ, ನಟ, ವಿನೋದಗಾರ, [illegible], [illegible], ಅಂಕ ಗಳನ್ನು ಮಾಡಿಕೊಂಡಿರುವದರಿಂದ, ಯಕ್ಷಗಾನ ನಾಟಕಗಳಿಗೂ, ನವೀನ ನಾಟಕಗಳಿಗೂ ವಿಶೇಷ ವ್ಯತ್ಯಾಸವಿಲ್ಲವೆನ್ನಬಹುದು. ಯಕ್ಷಗಾನ ನಾಟಕಗಳು ಹಾಡುಗಬ್ಬಗಳ ಗುಂಪಿಗೆ ಸೇರಿದವುಗಳು; [illegible] ಬರತಕ್ಕವು. ಇವು ಪಂಡಿತ-ಪಾಮರ ಉಭಯರಿಗೂ [illegible] ಸಂದವನ್ನು ಕೊಡುವವು; ಕಾರಣ ಜೀನಸ್ [illegible] ಗೆ ಪಾತ್ರವಾಗಿರುವವು.

ಇನ್ನು ನವೀನ ನಾಟಕಗಳಲ್ಲಿ ರಾಜಾಸ್ಥಾನದಲ್ಲಿಯೂ, [illegible] ಸಂದರ್ಭದಲ್ಲಿಯೂ ಮಾತ್ರ ಉಚಿತವಾದ [illegible] ವೇಶಗಳಲ್ಲಿ ಪಾತ್ರಧಾರಿಯು ಕುಣಿತ[illegible] [illegible] ಸಹಾಯದಿಂದ ಬಗೆಬಗೆಯ ದೃಶ್ಯಗಳನ್ನು [illegible] ಸುವ ಅನುಕೂಲತೆಗಳಾಗಿವೆ; ಆದರೆ ಯಕ್ಷಗಾನ [illegible]

ಸಾಧನ, ಸಹಾಯಗಳಿಲ್ಲದ ರಂಗಸ್ಥಳದಲ್ಲಿಯೇ ಸನ್ನಿವೇಶಗಳನ್ನೆಲ್ಲ ಕುಣಿತ, ಅರ್ಥ, ಆರ್ಭಟೆ, ಭಾವ-ಭಂಗಿಗಳಿಂದಲೇ ತೋರಿಸಬೇಕಾಗುವದು. ಅಂದ ಮೇಲೆ ಯಕ್ಷಗಾನ ನಾಟಕದಲ್ಲಿ ಪಾತ್ರವಹಿಸುವವರು ನವೀನ ನಾಟಕದ ನಟ, ನಟಿಯರಿಗಿಂತ ನುರಿತವರೂ, ಚಾತುರ್ಯವುಳ್ಳವರೂ, ಭರತನಾಟ್ಯದ ಪೂರ್ಣ ಪರಿಜ್ಞಾನವುಳ್ಳವರೂ ಆಗಿರಲೇಬೇಕೆಂಬಂತಾಯಿತು.

ಕುಣಿತವೆಂದಾಕ್ಷಣಕ್ಕೆ ಅದು ಕೀಳು ಕೆಲಸವಲ್ಲ. ತುಂಬುರ, ನಾರದ, ತ್ರಿಕಾಲಭೃಂಗಿಗಳು ಕುಣಿದರೇಕೆ ? ಶ್ರೀ ಹರಿಯು ಮೋಹಿನಿಯಾಗಿ ಕುಣಿದನೇಕೆ ? ಪರಮೇಶ್ವರನು ತೋರಿಸಿದ ಲೀಲೆಗಳಲ್ಲಿ ತಾಂಡವ ನೃತ್ಯವೂ ಒಂದು ಲೀಲೆಯೇ ಕಾಯಿತು ? ಕುಣಿತದಲ್ಲಿ ಹಾವ, ಭಾವ, ಭಂಗಿಗಳಿಂದ ಮನೋಭಿಪ್ರಾಯಗಳನ್ನು ತೋರುವದಿರುತ್ತದೆ. ನವೀನ ನಾಟಕಾರಂಭದಲ್ಲಿ ಈಗಲೀಗ ನೃತ್ಯಕ್ಕೆ ಮಹತ್ವವು ಬರಹತ್ತಿಲ್ಲವೇ ? ಕಬ್ಬು ಡೊಂಕಾದರೆ ಸಿಹಿ ಡೊಂಕೇ ? ಪುಷ್ಪ ಡೊಂಕಾದರೆ ಪರಿಮಳ ಡೊಂಕೇ ಎಂಬಂತೆ ಯಕ್ಷಗಾನ ನಾಟಕಗಳನ್ನು ಕೀಳೆಂದು ತಿಳಿಯದೇ, ಭಗವಂತನ ಸ್ತುತಿಯನ್ನು ಪರಿಣಾಮಕಾರಿಯಾಗುವಂತೆ ಮಾಡಲು, ಮೊದಲಿನಿಂದಲೂ ಹಾದಿ ಹಾಕಿ ಕೊಟ್ಟಿರುವ ಈ ಯಕ್ಷಗಾನ ನಾಟಕವು ಈಗಿನ ನಾಟಕ ವೃಕ್ಷಗಳ ತಾಯಿಬೇರೆಂಬುದನ್ನು ಮರೆಯಲಾಗದು.

**ಶಬ್ದಾರ್ಥ :**

ಸಾಲಂಕೃತ-ಅಲಂಕಾರಗಳನ್ನು ಧರಿಸಿದ; ವ್ಯತ್ಯಾಸ—ಭೇದ; ಪರಿಜ್ಞಾನ-ಹೆಚ್ಚಿನ ತಿಳಿವಳಿಕೆ; ಉಜ್ವಲ-ಶ್ರೇಷ್ಠ; ಚಿತ್ತಾಕರ್ಷಕ-ಮನಸ್ಸನ್ನು ಎಳೆದುಕೊಳ್ಳುವ; ನವೀನ-ಹೊಸ.

**ಪ್ರಶ್ನೆ :**

೧. ಯಕ್ಷಗಾನ ಎಂಬ ಹೆಸರು ಹೇಗೆ ಬಂದಿದೆ ?

೨. ಯಕ್ಷಗಾನ ನಾಟಕಗಳಿಗೆ ಬೇರೆ ಯಾವ ಹೆಸರುಗಳು ರೂಢಿಯಲ್ಲಿದ್ದುವು ?

೩. ಕೆಲವು ಯಕ್ಷಗಾನ ಕವಿಗಳ ಹೆಸರು ಹೇಳಿರಿ.

೪. ಈಗಿನ ನಾಟಕಗಳಿಗೂ, ಯಕ್ಷಗಾನ ನಾಟಕಗಳಿಗೂ ಏನು ಹೋಲಿಕೆ ಇದೆ ?

೫. ಹಿನ್ನೆಲೆಯ ಸಾಧನವಿಲ್ಲದ ಯಕ್ಷಗಾನ ನಾಟಕಗಳಲ್ಲಿ ಏನೇನು ಸಾಗುವುದು ?

೬. ಯಕ್ಷಗಾನ ನಾಟಕಗಳಲ್ಲಿ ಮುಖ್ಯವಾದುದು ಯಾವುದು ?

**ವ್ಯಾಕರಣ :**

## ಪ್ರಶ್ನಾರ್ಥಕ ವಾಕ್ಯಗಳು

ಅ. ಕೆಳಗಿನ ವಾಕ್ಯಗಳನ್ನು ನಿರೀಕ್ಷಿಸಿರಿ.

೧. ಕುಬೇರನ ರಾಜಧಾನಿಯು ಯಾವದು ?

೨. ನೀವು ಯಕ್ಷಗಾನ ನಾಟಕವನ್ನು ನೋಡಿರುವಿರಾ ?

೩. ನಿಮ್ಮ ಹೆಸರೇನು ?

ಇಲ್ಲಿಯ ಒಂದೊಂದು ವಾಕ್ಯವೂ ಒಂದೊಂದು ಪ್ರಶ್ನೆಯನ್ನು ಕೇಳುತ್ತದೆ. ಹೀಗೆ ಪ್ರಶ್ನೆ ಕೇಳುವದಕ್ಕಾಗಿ ಉಪಯೋಗಿಸುವ ವಾಕ್ಯಗಳನ್ನು **ಪ್ರಶ್ನಾರ್ಥಕ** ವಾಕ್ಯಗಳೆಂದು ಕರೆಯುತ್ತಾರೆ. ಒಂದು ವಿಷಯವನ್ನು ಇಲ್ಲವೆ ಅಭಿಪ್ರಾಯವನ್ನು ತಿಳಿದುಕೊಳ್ಳುವಾಗ ನಾವು ಪ್ರಶ್ನಾರ್ಥಕ ವಾಕ್ಯಗಳನ್ನು ಉಪಯೋಗಿಸುತ್ತೇವೆ.

ಬ. ಈಗ ನೀವು ಓದಿದ ಪಾಠಗಳಿಂದ ೫ ಪ್ರಶ್ನಾರ್ಥಕ ವಾಕ್ಯಗಳನ್ನು ಹುಡುಕಿ ತೆಗೆಯಿರಿ.

**ಟಿಪ್ಪಣೆ :**

೧. ಭರತನಾಟ್ಯ : ಪೂರ್ವಕಾಲದಲ್ಲಿ ಭರತನೆಂಬ ಮುನಿಯು ಸಂಗೀತದ ಬಗ್ಗೆ ಶಾಸ್ತ್ರ ಬರೆದಿರುವನು. ಆ ಶಾಸ್ತ್ರದಂತೆ ನೃತ್ಯ ಮಾಡುವುದು ಭರತನಾಟ್ಯ.

೨. ದಶಾವತಾರ : ದೇವರ ಅವತಾರಗಳು ಹತ್ತು. ೧. ಮತ್ಸ್ಯ ೨. ಕೂರ್ಮ ೩. ವರಾಹ ೪. ನಾರಸಿಂಹ ೫. ವಾಮನ ೬. ಪರಶುರಾಮ ೭. ರಾಮ ೮. ಕೃಷ್ಣ ೯. ಬೌದ್ಧ ೧೦. ಕಲ್ಕಿ.

೩. ಭೃಂಗಿ : ಶಿವನ ಸೇವಕ.

೪. ಮೋಹಿನಿ : ಭಸ್ಮಾಸುರನ ಎದುರಿಗೆ [illegible] ಕುಣಿದನು. ಹಾಗೂ ದೇವದಾನವರು [illegible] ಮೋಹಿನಿಯಾಗಿ ದೇವತೆಗಳಿಗೆ [illegible] ಒಡಿಸಿದನು.

# ೪. ಕಲ್ಲೆಣ್ಣೆ

[ಇಂದು ನಾವು ಉಪಯೋಗಿಸುವ ಮಹತ್ವದ ಯಂತ್ರ, ವಾಹನಗಳೆಲ್ಲ ಎಣ್ಣೆಯಿಂದಲೇ ನಡೆಯುತ್ತವೆ. ಮೋಟಾರು, ಉಗಿಬಂಡಿ, ಹಡಗು, ವಿಮಾನ ಮೊದಲಾದವೆಲ್ಲ ಎಣ್ಣೆ ತೀರಿದ ಕೂಡಲೇ ನಿಂತೇ ಬಿಡುತ್ತವೆ. ಹೀಗೆ ವಾಹನಗಳಿಗೂ ಯಂತ್ರಗಳಿಗೂ ತೀರ ಅವಶ್ಯವಾದ ಎಣ್ಣೆ ಎಲ್ಲಿಂದ ಬರುತ್ತದೆ ? ಹೇಗೆ ಉಂಟಾಗುತ್ತದೆಂಬುದನ್ನು ಈ ಪಾಠದಲ್ಲಿ ನೀವು ತಿಳಿಯುವಿರಿ.]

★ ★ ★

ನಮ್ಮ ದಿನದ ಬಳಕೆಗೆ ಅತ್ಯವಶ್ಯವಾದ ಚಿಮಣಿಎಣ್ಣೆ, ಪೆಟ್ರೋಲಗಳು ಕಲ್ಲೆಣ್ಣೆಯ ಉಪತೈಲಗಳೆಂಬುದು ನಿಮಗೆ ಗೊತ್ತಿದೆಯೇ? ಬರಿ ಅರ್ಧಶತಮಾನದ ಹಿಂದೆ ಮನೆಯಲ್ಲಿ ದೀಪ ಹಚ್ಚುವದಕ್ಕಾಗಿ ನಾವು ಪಣತಿ, ಸಮೆ, ನೀರಾಜನಗಳಲ್ಲಿ ಹುಲಗಲ ಎಣ್ಣೆಯನ್ನೋ ಹರಳೆಣ್ಣೆಯನ್ನೋ ಅಲ್ಲದೆ ಮತ್ತಿನ್ನಾವದೋ ಗಾಣದ ಎಣ್ಣೆಯನ್ನೋ ಹಾಕಿ ದೀಪ ಹಚ್ಚುತ್ತಿದ್ದೆವು. ಹೆಚ್ಚಾಗಿ ಬಳಕೆಯಲ್ಲಿರುವ ಚಿಮಣಿ ಎಣ್ಣೆಯು ದೊರಕುತ್ತಿದ್ದರೂ ಧರ್ಮಸ್ಥಳಗಳಾದ ದೇವಾಲಯ, ಮಠ ಮೊದಲಾದವುಗಳಲ್ಲಿ ಅದನ್ನು ಉರಿಸುವದು ಅಮಂಗಲಕರವೆಂಬ ಭಾವನೆಯಿಂದ ಈಗಲೂ ಒಳ್ಳೆಣ್ಣೆ ಇಲ್ಲವೆ ತುಪ್ಪದ ದೀಪಗಳನ್ನೇ ಹಚ್ಚುತ್ತಾರೆ. ಆದರೆ ಮನೆಯಲ್ಲಿ ದೀಪ ಉರಿಸಲು ಚಿಮಣಿ ಎಣ್ಣೆ ಮೀಸಲು. ಕಡಿಮೆ ಬೆಲೆ, ಕಡಿಮೆ ಹೊಗೆ, ಹೆಚ್ಚಾದ ಬೆಳಕು ಅಲ್ಲದೆ ಬೇಕಾದಲ್ಲಿಗೆ ಬೇಕಾದಷ್ಟು ಹೊತ್ತೊಯ್ಯಲು ಇರುವ ಅನುಕೂಲತೆಗಳೇ ಇದಕ್ಕೆ ಮುಖ್ಯ ಕಾರಣ.

ನಮ್ಮ ದೇಶದವರಿಗಂತೂ ಮೊದಲು ಕಲ್ಲೆಣ್ಣೆ, ಪೆಟ್ರೋಲುಗಳ ಹೆಸರು ಕೂಡ ಗೊತ್ತಿರಲಿಲ್ಲ. ಅಮೇರಿಕಾಖಂಡದ ಅನೇಕ ಭಾಗಗಳಲ್ಲಿ ಕಲ್ಲೆಣ್ಣೆಯು ಜಿಡ್ಡು ಜಿಡ್ಡಾದ ಜಲವು ನೀರಿನಂತೆ ನೆಲದ ಮೇಲೆ ಹರಿಯುತ್ತಿತ್ತು. ಅಲ್ಲಿಯ ಮೂಲ ನಿವಾಸಿಗಳು ವಾತದಿಂದ ಬರುವ ರೋಗಗಳಿಂದ ಬಳಲಿದಾಗ ಈ ಎಣ್ಣೆಯಿಂದ ಮೈಯುಜ್ಜಿಸಿಕೊಳ್ಳುವದನ್ನು ಬಿಟ್ಟರೆ ಅದೇನಿರಬೇಕೆಂಬ ಕಲ್ಪನೆ ಕೂಡ ಅವರಿಗಿರಲಿಲ್ಲ. ಆದರೂ ಬರಬರುತ್ತ ಈ ಜಿಡ್ಡು ಎಣ್ಣೆಯನ್ನು ಕೀಲೆಣ್ಣೆಯೆಂದು ಉಪಯೋಗಿಸಲಾರಂಭಿಸಿದರು.

ಕುಡಿಯುವದಕ್ಕಾಗಿಯೂ, ನೀರಾವರಿಗಾಗಿಯೂ ಬಾವಿ ತೋಡಿ ನಾವು ಬೇಕಷ್ಟು ನೀರು ದೊರಕಿಸಿಕೊಳ್ಳುವಂತೆ ಈ ಎಣ್ಣೆಯನ್ನು ಇದು ಸಿಕ್ಕುವ ಭೂ-

ಭಾಗದಲ್ಲಿ ಬಾವಿಗಳನ್ನು ತೋಡಿ ದೊರಕಿಸಬಹುದೆಂಬ ಕಲ್ಪನೆ ಆಗ ಯಾರಿಗೂ ಇರಲಿಲ್ಲ. ಆದರೆ ಆ ಶ್ರೇಯಸ್ಸು ಅಮೇರಿಕೆಯ ಪೆನ್ಸಿಲ್ವೇನಿಯಾದಲ್ಲಿ ಭೂಮಿಯಲ್ಲಿ ತೂತು ಕೊರೆದು ಮೊದಲು ಎಣ್ಣೆ ತೆಗೆದ **ಕರ್ನಲಡ್ರೇಕ** ಎಂಬುವವನಿಗೆ ಸಲ್ಲಬೇಕು. ಅಮೇರಿಕೆಯು ಇಂಥ ಎಣ್ಣೆ ಕೊಡುವ ಭೂಗರ್ಭದ ಸೆಲೆಗಳಿಂದ ತುಂಬಿದೆ ಎಂಬುದನ್ನರಿತ ಬಳಿಕ ಅನೇಕರು ಅಂಥ ಬಾವಿ ತೋಡಿ ಎಣ್ಣೆ ದೊರಕಿಸಿಕೊಳ್ಳಲಾರಂಭಿಸಿದರು.

ಕಲ್ಲೆಣ್ಣೆಯು ಕಲ್ಲಿದ್ದಲಿಯಂತೆ ಉಂಟಾದ ಒಂದು ಖನಿಜ ಪದಾರ್ಥವೇ. ಜ್ವಾಲಾಮುಖಿ, ಭೂಕಂಪಗಳಿಂದ ಅನೇಕ ಅರಣ್ಯಗಳು ಭೂಮಿಯಲ್ಲಿ ಹುಗಿದು ಹೋದ ಮೇಲೆ ಭೂಮಿಯಲ್ಲಿಯ ಆದ ಅನೇಕ ಸ್ಥಿತ್ಯಂತರಗಳ ಪರಿಣಾಮವಾಗಿ ಈ ಎಣ್ಣೆ ಉಂಟಾಯಿತೆಂದು ಹೇಳುತ್ತಾರೆ. ಹಿಂದಕ್ಕೆ ಭೂಮಿಯಲ್ಲಿ ಹುಗಿದು ಹೋದ ಅಸಂಖ್ಯ ಸೂಕ್ಷ್ಮ ಪ್ರಾಣಿಗಳ ಹಾಗು ಸಸ್ಯಸಮೃದ್ಧಿಯ ಮೇಲೆ ಮಣ್ಣು ಬಿದ್ದು ಅವು ಇರುಕಿನಲ್ಲಿ ಸಿಕ್ಕು ಹೋದವು. ಆಮೇಲೆ ಲಕ್ಷಾಂತರ ವರುಷಗಳ ಅವಧಿಯಲ್ಲಿ ಭೂಮಿಯ ಅಮಿತವಾದ ಕಾವು ಹಾಗು ಒತ್ತಡದ ಪರಿಣಾಮವಾಗಿ




(೧) ಕಲ್ಲೆಣ್ಣೆಯನ್ನು ತೆಗೆಯುವದು. (೨) ಅಶುದ್ಧ ಕಲ್ಲೆಣ್ಣೆಯನ್ನು ಸಂಗ್ರಹಿಸುವದು.
(೩) ಎಣ್ಣೆಯ ಶುದ್ಧೀಕರಣ (೪) ಕಲ್ಲೆಣ್ಣೆಯ ಉಪವಸ್ತುಗಳು ಮತ್ತು ಅವುಗಳ ಉಪಯೋಗಗಳು.

ಅವೆಲ್ಲವೂ ಕೊಳೆತು ಕಳಿತು ಕಲ್ಲೆಣ್ಣೆಯಾಗಿ ಮಾರ್ಪಟ್ಟವು. ಈ ಕಲ್ಲೆಣ್ಣೆಯು ಭೂಗರ್ಭದಲ್ಲಿ ಸಂಚಿತವಾಗಿರುವದು.

ಎಣ್ಣೆಯ ಸೆಲೆಗಳು ಸ್ವಲ್ಪೇ ಆಳದಲ್ಲಿ ಇದ್ದರೆ ಎಣ್ಣೆ ತೆಗೆಯುವದು ಬಹಳ ಸುಲಭ. ಇಲ್ಲದಿದ್ದರೆ ಪಂಪುಗಳ ಮೂಲಕವಾಗಿ ಎಣ್ಣೆಯನ್ನೆತ್ತಿ ತೆಗೆಯಬೇಕಾಗುತ್ತದೆ. ಅದಕ್ಕಾಗಿ ಎಣ್ಣೆಯ ಸಂಚಯವಿರುವ ಭೂಗರ್ಭದ ಮೇಲ್ಭಾಗದಿಂದ ಭಾರವಾದ ಬೈರಿಗೆಗಳನ್ನು ಇಳಿಬಿಡುತ್ತಾರೆ. ಇವು ಯಂತ್ರಗಳ ಸಹಾಯದಿಂದ ಭೂಮಿಯನ್ನು ಕೊರೆಯುತ್ತ ಸಾಗುತ್ತವೆ. (ಚಿತ್ರ ೧.) ಎಣ್ಣೆಯ ಸೆಲೆಗಳ ಮೇಲೆ ಕೆಲವೆಡೆಯಲ್ಲಿ ನೂರಾರಡಿ ದಪ್ಪವಿರುವ ಶಿಲೆಯ ಪದರುಗಳಿರುವದುಂಟು. ಭೂಗರ್ಭದಲ್ಲಿ ಒಮ್ಮೆ ಎಣ್ಣೆ ಸಿಕ್ಕಿತೆಂದರೆ ಬೈರಿಗೆಗಳಿಂದಾದ ಆ ಸುರಂಗಕ್ಕೆ ಉಕ್ಕಿನ ನಳಿಕೆಗಳನ್ನು ಜೋಡಿಸಿ ಅವುಗಳ ಮೂಲಕ ಎಣ್ಣೆ ಹೊರಗೆ ಬರುವಂತೆ ಮಾಡಿ ಅದನ್ನು ದೊಡ್ಡದೊಡ್ಡ ಎಣ್ಣೆಯ ಹೌದುಗಳಲ್ಲಿ ಸಂಗ್ರಹಿಸುತ್ತಾರೆ. (ಚಿತ್ರ ೨.) ಹೀಗೆ ಸಂಗ್ರಹಿಸಿಟ್ಟ ಎಣ್ಣೆಯು ಅಶುದ್ಧವಾಗಿರುವದರಿಂದ ಹಾಗೆಯೇ ಉಪಯೋಗಿಸಲು ಬರುವದಿಲ್ಲ. ಹಲವು ಕಡೆಯಲ್ಲಿ ಕೆಂಬಣ್ಣದ, ಹಳದೀ ಬಣ್ಣದ ಎಣ್ಣೆಯೂ ದೊರಕುತ್ತದೆ. ಅದು ಅನೇಕ ರಸಾಯನಿಕಗಳಿಂದ ಕೂಡಿದ ಮಿಶ್ರಣವಾಗಿರುತ್ತದೆ. ಈ ಮಿಶ್ರಿತ ಎಣ್ಣೆಯನ್ನು ಶುದ್ಧೀಕರಿಸುವ ಕಾರಖಾನೆಗಳಿಗೆ ತಂದು ಶುದ್ಧ ಮಾಡುತ್ತಾರೆ. (ಚಿತ್ರ ೩.)

ಕಲ್ಲೆಣ್ಣೆಯ ಕಥೆ ಇಷ್ಟಕ್ಕೇ ಮುಗಿಯಲಿಲ್ಲ. ಯಾಕೆಂದರೆ ಹೀಗೆ ಶುದ್ಧಗೊಳಿಸಿದ ಎಣ್ಣೆಯನ್ನು ಉಪಯೋಗಕ್ಕಾಗಿ ಬೇರೆ ಬೇರೆ ದೇಶಗಳಿಗೆ ಕಳಿಸಬೇಕಾಗುತ್ತದೆ. ಇದಕ್ಕಾಗಿ ಹಿಂದಿನ ಕಾಲದಲ್ಲಿ ಉಗಿಹಡಗಗಳನ್ನೂ ರೈಲುಬಂಡಿಗಳನ್ನೂ ಉಪಯೋಗಿಸುತ್ತಿದ್ದರು. ಆದರೆ ಅದು ಬಹಳ ವೆಚ್ಚದ್ದೂ ತೊಂದರೆಯದೂ ಆದುದರಿಂದ ಕಲ್ಲೆಣ್ಣೆಯ ಸಂಗ್ರಹದಿಂದಲೇ ನಾನೂರು ಐನೂರು ಮೈಲುಗಳ ವರೆಗೆ ನಳಿಕೆಗಳನ್ನು ಜೋಡಿಸಿ ಅದರ ಮೂಲಕ ಬಂದರಗಳವರೆಗೂ ಎಣ್ಣೆಯನ್ನು ಸಾಗಿಸತೊಡಗಿದ್ದಾರೆ.

ಕಲ್ಲೆಣ್ಣೆಯಿಂದ ಸಿಕ್ಕುವ ಉಪತೈಲಗಳಲ್ಲಿ ಪೆಟ್ರೋಲು ಅತಿ ಮುಖ್ಯವಾದದ್ದು. ಮೋಟಾರು, ವಿಮಾನಗಳಲ್ಲಿ ಅದನ್ನು ಉಪಯೋಗಿಸುತ್ತಾರೆ. ಗ್ಯಾಸೋಲಿನ್‌ವನ್ನು ವಿಮಾನಗಳಿಗಾಗಿಯೂ, ಚಿಮಣಿಎಣ್ಣೆಯನ್ನು ದೀಪಹಚ್ಚಲೂ, ಉರುವಲ ಎಣ್ಣೆಯನ್ನು ಉಗಿಹಡಗಗಳಲ್ಲಿಯೂ, ಇವೆಲ್ಲವುಗಳನ್ನು ತೆಗೆದ ಬಳಿಕ ಉಳಿಯುವ ಉಪತೈಲವನ್ನು ಎಣ್ಣೆಯ ಬಣ್ಣಗಳನ್ನು ಮಾಡಲೂ ಉಪಯೋಗಿಸುತ್ತಾರೆ. (ಚಿತ್ರ ೪.)

ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು, ರಶಿಯಾ, ಇರಾಕ, ಇರಾಣ, ಬ್ರಹ್ಮದೇಶ, ರುಮಾನಿಯಾ ಮೊದಲಾದ ದೇಶಗಳು ಈ ಕಲ್ಲೆಣ್ಣೆಯ ಉತ್ಪಾದನೆ

ಯಲ್ಲಿ ಮುಖ್ಯವಾಗಿವೆ. ಚೀನ ದೇಶದಲ್ಲಿ ಕೂಡ ಕಲ್ಲೆಣ್ಣೆಯ ಸಂಗ್ರಹವು ಹೇರಳ ವಾಗಿದೆಯೆಂದು ತಜ್ಞರ ಅಭಿಪ್ರಾಯ. ಕಲ್ಲೆಣ್ಣೆಯ ಜಾಗತಿಕ ವಾರ್ಷಿಕ ಉತ್ಪತ್ತಿಯು ಸಾಧಾರಣ ೨೦ ಕೋಟಿ ಟನ್ನುಗಳಷ್ಟಿದೆ.

ಕಲ್ಲೆಣ್ಣೆಯು ಭೂಮಿಯ ಯಾವ ಕಡೆಯಲ್ಲಿದೆ ಎಂಬುದನ್ನು ತಿಳಿಯಲು ಇತ್ತೀಚೆಗೆ ಶೋಧಿಸಿದ "ಸಿಸ್ಮೋಗ್ರಾಫ" ಎಂಬ ವೈಜ್ಞಾನಿಕ ಉಪಕರಣವನ್ನು ಉಪಯೋಗಿಸುತ್ತಾರೆ.

ಪೆಟ್ರೋಲು ನೈಸರ್ಗಿಕ ರೀತಿಯಲ್ಲಿ ಸಿಗದ ದೇಶಗಳು ಮೋಟಾರಗಳ ಉಪಯೋಗ ಕ್ಕಾಗಿ ಪೆಟ್ರೋಲಿನ ಬದಲಾಗಿ ಸಸ್ಯಾದಿಗಳಿಂದ ಪೆಟ್ರೋಲಿನಂತೆಯೇ ಉರಿಯಬಲ್ಲ ಒಂದು ತರದ ಸರಾಯಿಯನ್ನು ತಯಾರಿಸಿದ್ದಾರೆ. ಕಲ್ಲಿದ್ದಲಿಯಿಂದಲೂ, ಹತ್ತೀ ಕಾಳುಗಳಿಂದಲೂ ಪೆಟ್ರೋಲನ್ನು ತಯಾರಿಸಬಹುದೆಂದು ವಿಜ್ಞಾನಿಗಳು ತೋರಿಸಿ ಕೊಟ್ಟಿದ್ದಾರೆ. ಪೆಟ್ರೋಲಿಗಾಗಿ ಪರರನ್ನೇ ಅವಲಂಬಿಸಬೇಕಾದ ಹಾಗೂ ಹತ್ತೀಕಾಳನ್ನು ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ಬೆಳೆಯುವ ನಮ್ಮ ದೇಶವು, ಖರ್ಚು ಹೆಚ್ಚು ಬರುತ್ತಿದ್ದರೂ ಹತ್ತೀಕಾಳುಗಳಿಂದ ಪೆಟ್ರೋಲನ್ನು ದೊರಕಿಸುವ ಪ್ರಯತ್ನವನ್ನು ಮುಂದುವರಿಸಬೇಕು.

ಆಧುನಿಕ ನಾಗರಿಕತೆಯ ನಿತ್ಯೋಪಯೋಗಕ್ಕೆ ಅವಶ್ಯವಾದ ಬಸ್ಸು, ಟ್ರ್ಯಾಕ್ಟರ, ವಿಮಾನಗಳೇ ಮೊದಲಾದ ಯಂತ್ರಗಳು ಪೆಟ್ರೋಲಿಲ್ಲದೆ ಚಲಿಸವು. ಹೀಗಾಗಿ ಪೆಟ್ರೋಲಿಗೀಗ ಎಂದೂ ಇಲ್ಲದಷ್ಟು ಮಹತ್ವ ಪ್ರಾಪ್ತವಾಗಿರುತ್ತದೆ.

**ಶಬ್ದಾರ್ಥ :**

ಕಲ್ಲೆಣ್ಣೆ-ಕಣಿಗಳಿಂದ ದೊರೆಯುವ ಒಂದು ಎಣ್ಣೆ; ಜಲಪ್ರಾಣಿ ವಸ್ತುಗಳ ಎಣ್ಣೆಯಿಂದ ಉಂಟಾಗುವ ಒಂದು ಎಣ್ಣೆ; ಸಮೆ-ಎತ್ತರವಾದ ದೀಪ; ಸೀರಾಜನ ದೀಪವಿಡುವ ಬೆಳ್ಳಿಯ ಅಥವಾ ಹಿತ್ತಾಳೆಯ ಚಿಕ್ಕ ಸಾಧನ; ಮೀಸಲು-ಕಾಯ್ದಿಟ್ಟಿದ್ದು; ಚಿಮ್ಮು-ಜಿಗುಟು; ಬೈರಿಗೆ-ತೂತುಕೊರೆಯುವ ಒಂದು ಸಾಧನ.

**ಪ್ರಶ್ನೆ :**

೧. ಕಲ್ಲೆಣ್ಣೆ ಬರುವ ಮೊದಲು ನಾವು ಹೇಗೆ ದೀಪವನ್ನು ಉರಿಸುತ್ತಿದ್ದೆವು ?
೨. ಕಲ್ಲೆಣ್ಣೆಯನ್ನು ಮೊದಲು ಎಲ್ಲಿ ಕಂಡು ಹಿಡಿಯಲಾಯಿತು ? ಕಲ್ಲೆಣ್ಣೆಗಳ ಬಾವಿಯನ್ನು ಮೊದಲು ಯಾರು ತೋಡಿದರು ?

೩. ಕಲ್ಲೆಣ್ಣೆಯು ಭೂಗರ್ಭದಲ್ಲಿ ಹೇಗೆ ತಯಾರಾಗುತ್ತದೆ ?

೪. ಬಾವಿಯಿಂದ ಕಲ್ಲೆಣ್ಣೆಯನ್ನು ಹೇಗೆ ಮೇಲಕ್ಕೆ ಎತ್ತುತ್ತಾರೆ ? ಮತ್ತು ಅದನ್ನು ಹೇಗೆ ಶುದ್ಧಗೊಳಿಸುತ್ತಾರೆ ;

೫. ಕಲ್ಲೆಣ್ಣೆಯ ಉಪತ್ಪನ್ನಗಳು ಯಾವವು ? ಅವುಗಳ ಉಪಯೋಗವೇನು ?

**ವ್ಯಾಕರಣ :**

## ವಿಧ್ಯರ್ಥಕ ವಾಕ್ಯಗಳು

(ಅ) ಕೆಳಗೆ ಕೊಟ್ಟ ವಾಕ್ಯಗಳನ್ನು ಅಭ್ಯಸಿಸಿರಿ.

೧. ಶಂಕರಾ, ಕಲ್ಲೆಣ್ಣೆಯ ದೀಪ ಹಚ್ಚು.

೨. ನಿಮ್ಮ ಮೋಟರಿಗೆ ನಮ್ಮ ಪೆಟ್ರೋಲನ್ನು ಉಪಯೋಗಿಸಬಹುದು.

೩. ದೇವರು ನಿನಗೆ ಕಲ್ಯಾಣ ಮಾಡಲಿ.

೪. ನಾಳೆ ನಮ್ಮ ಮನೆಗೆ ನೀವು ಊಟಕ್ಕೆ ಬನ್ನಿರಿ.

೫. ಅಯ್ಯಾ, ಬಿಸಿಲಿನಿಂದ ಬಳಲಿದ ನಮಗೆ ನೀರು ಕೊಡಿರಿ.

೬. ಆ ಮದುಳನು ಹಾಳಾಗಿ ಹೋಗಲಿ.

ಇಲ್ಲಿ ಮೊದಲನೆಯ ವಾಕ್ಯದಲ್ಲಿ ಆಜ್ಞೆ ಇದೆ. ಎರಡನೆಯದರಲ್ಲಿ ಅನುಮತಿ ಅಥವಾ ಒಪ್ಪಿಗೆ ಇದೆ. ಮೂರನೆಯದರಲ್ಲಿ ಹಾರೈಕೆ ಇಲ್ಲವೆ ಆಶೀರ್ವಾದವಿದೆ. ನಾಲ್ಕನೆಯ ದರಲ್ಲಿ ಕರೆ ಅಥವಾ ಔತಣವಿದೆ. ಐದನೆಯದರಲ್ಲಿ ಬಿನ್ನಹ ಅಥವಾ ಪ್ರಾರ್ಥನೆ ಇದೆ. ಆರನೆಯದರಲ್ಲಿಯೂ ಹಾರೈಕೆಯೇ ಇದೆ. ಆದರೆ ಅದು ಆಶೀರ್ವಾದದ ರೂಪದಲ್ಲಿರದೇ ಶಾಪದ ರೂಪದಲ್ಲಿದೆ.

ಹೀಗೆ ಆಜ್ಞೆ, ಒಪ್ಪಿಗೆ, ಹಾರೈಕೆ, ಆಶೀರ್ವಾದ, ಕರೆ, ಔತಣ, ಬಿನ್ನಹ, ಪ್ರಾರ್ಥನೆ, ಶಾಪ ಮೊದಲಾದವುಗಳನ್ನು ವ್ಯಕ್ತಪಡಿಸುವ ವಾಕ್ಯಗಳನ್ನು ವಿಧ್ಯರ್ಥಕ ವಾಕ್ಯಗಳೆಂದು ಕರೆಯುವರು. ವಿಧಿ ಅಂದರೆ ವಿಧಿಸಿದ್ದು, ಆಜ್ಞಾಪಿಸಿದ್ದು, ಕಡ್ಡಾಯವಾದದ್ದು ಎಂದು ಸಾಮಾನ್ಯವಾಗಿ ಅರ್ಥವಾದರೂ ವ್ಯಾಕರಣದಲ್ಲಿ ವಿಧಿ ಎಂಬ ಶಬ್ದವು ಮೇಲೆ ಹೇಳಿದ ಎಲ್ಲ ಪ್ರಕಾರಗಳನ್ನೂ ಒಳಗೊಳ್ಳುತ್ತದೆ.

(ಬ) ಹತ್ತು ವಿಧ್ಯರ್ಥಕ ವಾಕ್ಯಗಳನ್ನು ರಚಿಸಿ ಬರೆಯಿರಿ.

# ೫. ಪಿತೃಭಕ್ತಿ

[ದೇಶಗೌರವ ಶೂರ ಸುಭಾಸಚಂದ್ರ ಬೋಸರ ಹೆಸರನ್ನು ಕೇಳದ ಭಾರತೀಯ ನಿರುವನೇ ? ಸುಭಾಸಚಂದ್ರಬೋಸರು ಭಾರತದ ಒಬ್ಬ ಅತ್ಯಂತ ಜನಪ್ರಿಯ ಮುಂದಾಳುಗಳು. ಆಝಾದ-ಹಿಂದ ಸೇನೆಯನ್ನು ಕಟ್ಟಿ, ಬ್ರಿಟಿಶ ಸಾಮ್ರಾಜ್ಯವನ್ನು ನಾಶಮಾಡಲು ಹೋರಾಡಿದವರು. ಈ ಹೋರಾಟದಲ್ಲಿಯೇ ಪ್ರಾಣ ನೀಗಿದವರು. ೧೯೩೩-೩೪ರಲ್ಲಿ ಸುಭಾಸಬಾಬುಗಳು ತಮ್ಮ ಅನಾರೋಗ್ಯಕ್ಕೆ ಚಿಕಿತ್ಸೆ ಪಡೆಯಲು ವ್ಹಿಯನ್ನಾಕ್ಕೆ ಹೋಗಿದ್ದರು. ಆಗ ಅವರ ತಂದೆಯವರಿಗೆ ಬಹಳ ಜಡ್ಡಾಗಿದೆಂಬ ಸುದ್ದಿ ಬರಲು ಅವರು ಭಾರತಕ್ಕೆ ಧಾವಿಸಿದ ಸಂಗತಿ ಈ ಪಾಠದಲ್ಲಿ ಬಂದಿದೆ. ಇದರಿಂದ ಉಜ್ವಲ ದೇಶಭಕ್ತರಾದ ಸುಭಾಸರಲ್ಲಿ ಪಿತೃ ಪ್ರೇಮವು ಎಷ್ಟಿತ್ತೆಂಬುದನ್ನು ನೀವು ತಿಳಿಯುವಿರಿ.]

ಸುಭಾಸಚಂದ್ರರು ಪರದೇಶದಲ್ಲಿ ಚಿಕಿತ್ಸೆ ಹೊಂದುತ್ತಿದ್ದಾಗ, ಅವರ ಮುಪ್ಪಿನ ತಂದೆಯವರ ಸ್ಥಿತಿಯು ತೀರಾ ಅಂತ್ಯಾವಸ್ಥೆಗೆ ಬಂದಿತು. ತಂದೆಯವರ ಮೇಲೆ ಸುಭಾಸಚಂದ್ರರ ಪ್ರೇಮ ಬಹಳ. ಸುಭಾಸಚಂದ್ರರೆಂದರೆ ತಂದೆಯವರಿಗೂ ಹಾಗೆಯೇ. ನೋಡುವವರಿಗೆ ಪಕ್ಷಪಾತ ಪ್ರೇಮ ವಿದ್ದಂತಿತ್ತು. ತಂದೆಯವರ ಅಂತ್ಯಾವಸ್ಥೆಯ ವಾರ್ತೆಯು ಸಹನಾತೀತವಾಯಿತು. ಸುಭಾಸ ಚಂದ್ರರು ವಿಮಾನಮಾರ್ಗವಾಗಿ ವ್ಹಿಯೆನ್ನಾದಿಂದ ಭಾರತಕ್ಕೆ ಹೊರಟೇಬಿಟ್ಟರು. ತಮ್ಮ ದೇಹಾರೋಗ್ಯದ ಪರಿವೆಯೇ ಅವರಿಗುಳಿಯಲಿಲ್ಲ.



ಸುಭಾಸಬಾಬುಗಳು ೧೯೩೪ ನೆಯ ಡಿಸೆಂಬರ ೩ನೆಯ ತಾರೀಖಿನ ಸಾಯಂಕಾಲ ೬॥ ಗಂಟೆಗೆ ಡಚ್ ಟಪಾಲ ವಿಮಾನದಿಂದ ಕರಾಚಿಗೆ ಬಂದು ಮುಟ್ಟಿದರು. ಅವರ ಸ್ವಾಗತಕ್ಕಾಗಿ ಪ್ರತಿಷ್ಠಿತ ಗೃಹಸ್ಥರನೇಕರೂ ಪ್ರಾಂ. ಕಾ. ಕ. ಅಧ್ಯಕ್ಷರಾಗಿದ್ದ ಗಿದ್ವಾನಿಯವರೂ ಆಗಮಿಸಿದ್ದರು. ವಿಮಾನದಿಂದ ಕೆಳಗಿಳಿದ ಕೂಡಲೆ ಬೋಸರು ತಮ್ಮ ತಂದೆಯ ಪ್ರಕೃತಿಯ ಬಗ್ಗೆ ವಿಚಾರಿಸಿದರು. ಹಿಂದಿನ ಕರಾಚಿನಗರ ಸಭಾಧ್ಯಕ್ಷರಾದ ಜಮಸೇದ ಮೆಹತಾರವರು ದುಃಖದಿಂದ ಉತ್ತರವನ್ನೀಯುತ್ತ, "ಇತ್ತೀಚಿನ

ಸುದ್ದಿ ತಮಗೆ ತಿಳಿದಂತೆ ಕಾಣುವದಿಲ್ಲ" ಎಂದರು. ಬೋಸರು ಗೊತ್ತಿಲ್ಲವೆಂದು ತಿಳಿಸಿದಾಗ ನಿರುಪಾಯರಾಗಿ ಅವರು ಬೋಸರ ತಂದೆಯ ಮರಣದ ಶೋಕಮಯ ವಾರ್ತೆಯನ್ನು ತಿಳಿಸಬೇಕಾಯಿತು. ಅದನ್ನು ಕೇಳಿದ ಕೂಡಲೆ ಬೋಸರ ಕಣ್ಣು ಗಳಲ್ಲಿ ನೀರು ತುಂಬಿ ಕಂಠವು ಬಿಗಿಯಿತು. ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಹೀಗೆ ಎಲ್ಲರೂ ಕೆಲಹೊತ್ತು ಸ್ತಬ್ಧರಾಗಿದ್ದರು.

ಆ ಮೇಲೆ ಪ್ರೊ ಘನಶ್ಯಾಮರು ಸುಭಾಸಬಾಬುಗಳಿಗೆ ಭಾರತಕ್ಕೆ ಬರಲು ಪಾಸಪೋರ್ಟ ಸಿಗಲಿಲ್ಲವೆಂಬ ಸುದ್ದಿಯ ಬಗ್ಗೆ ಕೇಳಿದರು. ಆಗ ಸುಭಾಸ ಚಂದ್ರರು ಉತ್ತರ ಕೊಡುತ್ತ ಮೊದಮೊದಲು ವ್ಹಿಯೆನ್ನಾದ ರಾಯಭಾರಿಯು ಪಾಸಪೋರ್ಟ ಕೊಡಲು ಒಪ್ಪಲಿಲ್ಲ. ಆದರೆ ತಂದೆಯವರ ವಿಷಯಕ್ಕೆ ಇತ್ತೀಚೆಗೆ ಬಂದ ತಂತಿಯನ್ನು ತೋರಿಸಿ ನೆಟ್ಟಗೆ ಕಲಕತ್ತೆಗೆ ಹೋಗುವೆನೆಂದು ತಿಳಿಸಿದ ಕೂಡಲೆ ಅವರು ಒಪ್ಪಿದರೆಂದು ತಿಳಿಸಿದರು.

ಆಗ ಪ್ರಶ್ನೆ ಕೇಳಲು ಮುಂದೆ ಬಂದ ಪತ್ರಿಕಾ ಪ್ರತಿನಿಧಿಗೆ ಸುಭಾಸಬಾಬು ಗಳು "ಈಗ ನನ್ನ ಸ್ಥಿತಿ ಏನಾಗಿದೆ ಎಂಬುದು ನಿಮಗೆ ಗೊತ್ತೇ ಇದೆ" ಎಂದು ಹೇಳಲು ಯಾರೂ ಹೆಚ್ಚು ಮಾತನಾಡದೆ ಸುಮ್ಮನಾದರು. ಕಸ್ಟಮ್ ಅಧಿಕಾರಿ ಗಳ ಪ್ರಶ್ನೆಗಳಿಗೆ ಉತ್ತರ ಕೊಡುವದಕ್ಕಿಷ್ಟು ಮಾತ್ರ ಅವರು ಮಾತಾಡುತ್ತಿದ್ದರು. ಉಳಿದ ವೇಳೆಯಲ್ಲೆಲ್ಲ ಅವರನ್ನು ವ್ಯಾಕುಲತೆಯು ತುಂಬಾ ಆವರಿಸಿದ್ದರಿಂದ ಅವರು ಮೌನವಾಗಿಯೇ ಇದ್ದರು. ಕಸ್ಟಮ್ ಅಧಿಕಾರಿಗಳು ಸುಭಾಸಬಾಬುಗಳ ಸಾಮಾನುಗಳನ್ನೆಲ್ಲ ಸೂಕ್ಷ್ಮವಾಗಿ ಪರೀಕ್ಷಿಸಿದರು. ಕೆಲವು ಸಿ. ಆಯ್. ಡಿ. ಅಧಿಕಾರಿಗಳೂ ಆ ಕಾಲಕ್ಕೆ ಹಾಜರಿದ್ದರು. ಬೇಗನೆ ಲಂಡನ್ನಿನಲ್ಲಿ ಪ್ರಸಿದ್ಧವಾಗ ಲಿದ್ದ ಸುಭಾಸಚಂದ್ರರ "ಭಾರತೀಯ ಸಂಗ್ರಾಮ" ಎಂಬ ಗ್ರಂಥದ ಟಾಯಿಪ ರಾಯಿಟ ಪ್ರತಿಯನ್ನು ಜಪ್ತ ಮಾಡಿದರು.

ಮರುದಿನ ಸಾಯಂಕಾಲ ನಾಲ್ಕು ಗಂಟೆಯ ಸುಮಾರಿಗೆ ವಿಮಾನ ಮಾರ್ಗ ವಾಗಿ ಬೋಸರು ಕಲಕತ್ತೆಯನ್ನು ತಲ್ಪಿದರು. ವಿಮಾನಗೃಹದಲ್ಲಿ ಅನೇಕ ಪೋಲೀಸರೂ ಸಿಪಾಯರೂ ಪತ್ರಿಕಾ ಪ್ರತಿನಿಧಿಗಳೂ ಪ್ರತಿಷ್ಠಿತ ಸಭ್ಯಗೃಹಸ್ಥರೂ ಬಂದು ಕಾದಿದ್ದರು. ವಿಮಾನವು ಭೂಮಿಗಿಳಿದ ಕೂಡಲೆ ಪೋಲೀಸರು ಅವರನ್ನು ಮುತ್ತಿ ಸುತ್ತುವರಿದು ನಿಂತುಕೊಂಡರು. ಕೂಡಲೆ ಅವರೊಳಗಿದ್ದ ಸಿ. ಆಯ್. ಡಿ. ಅಧಿಕಾರಿಯು ಅವರ ಮೇಲೆ ಸರಕಾರದ ನೋಟೀಸನ್ನು ಪ್ರಯೋಗಿಸಿ

ಪೋಲೀಸರ ಮೋಟಾರಿನಲ್ಲಿ ಅವರನ್ನು ಮನೆಗೆ ಒಯ್ದು ಮುಟ್ಟಿಸಿದರು. ಅವರು ಮನೆ ಮುಟ್ಟುವವರೆಗೆ ಅಧಿಕಾರಿಗಳು ಸಮಾಧಿಗ್ರಹಕ್ಕೆ ಬಂದಿದ್ದ ಖಾಸಗಿ ಮೋಟಾರುಗಳನ್ನು ಅಲ್ಲಿಂದ ಚಲಿಸಗೊಡಲಿಲ್ಲ. ಸುಭಾಸಚಂದ್ರರ ಮೇಲಿನ ಈ ಬಾಣಪ್ರಯೋಗವು ಬಂಗಾಲ ಕ್ರಿಮಿನಲ್ ಲಾ ಅಮೆಂಡಮೆಂಟ ಕಾಯಿದೆಯನ್ವಯವಾಗಿತ್ತು. ಅದರಲ್ಲಿ ಸುಭಾಸಬಾಬುಗಳು ಮನೆಬಿಟ್ಟು ಹೊರಗೆ ಹೋಗಬಾರದು, ಯಾರ ಭೆಟ್ಟಿಯನ್ನೂ ತೆಗೆದುಕೊಳ್ಳಲಾಗದು. ಮನೆಯವರ ಹೊರತು ಇತರರೊಡನೆ ಮಾತಾಡಬಾರದು, ಅಡ್ಡಾಡಬಾರದು. ತಾರು, ಪತ್ರ, ಪಾಕೀಟು, ಪಾರ್ಸಲ್, ರಜಿಸ್ಟರ ಮೊದಲಾದವುಗಳೇನಾದರೂ ಬಂದರೆ ಅವುಗಳನ್ನು ಒಡೆಯದೆ ಮೊದಲು ಪೋಲೀಸರ ವಶಕ್ಕೆ ಕೊಡಬೇಕು. ಮೊದಲಾದ ಹೇಯವಾದ ಕರಾರುಗಳಿದ್ದವು. ಈ ಅಪ್ಪಣೆ ಮುರಿದರೆ ೭ ವರ್ಷ ಶಿಕ್ಷೆ ಮತ್ತು ದಂಡ ವಿಧಿಸಲಾಗುವದೆಂದು ಹೇಳಿತ್ತು.

ಅತ್ತ ತಂದೆಯ ಮರಣದ ಶೋಕಾಗ್ನಿ, ಇತ್ತ ಅಪಮಾನದ ಪರಮಾವಧಿಯಾದ ಹೇಯ ಆಜ್ಞೆ, ಮೊದಲೇ ತೀಕ್ಷ್ಣವಾದ ಪ್ರಕೃತಿ, ಈ ಮೂರು ವ್ಯಾಕುಲತೆಗಳ ಮಧ್ಯದಲ್ಲಿ ಸಿಕ್ಕ ಸುಭಾಸಬಾಬುಗಳ ಗತಿ ಏನಾಗಿರಬಹುದು ? ಹೇಗಾಗಿರಬಹುದು ? ಎಂಬುದನ್ನು ವರ್ಣಿಸುವ ಸಾಹಸ ಮಾಡುವದಕ್ಕಿಂತ ವಾಚಕರಿಗೆ ಊಹಿಸಲು ಬಿಡುವದು ಯಥಾಯೋಗ್ಯವಾಗಿದೆ.

ಸುಭಾಸಬಾಬುಗಳು ಈ ಪರಿಸ್ಥಿತಿಯಲ್ಲಿ ಸಹ ಶೋಕದವರಾಗಿ ಆಪ್ತ ಬಾಂಧವರ ಸಲಹೆಯಂತೆ ತಂದೆಯವರ ದಿನಕರ್ಮಾದಿಗಳು ಪೂರೈಸುವವರೆಗೂ ಅಪಮಾನಕಾರಕವಾದ ಆಜ್ಞೆಗಳನ್ನು ಪಾಲಿಸಿದರು. ಜೀವದ ಹಂಗು ತೊರೆದ ಈ ವೀರರು ಭಾರತೀಯರೆಲ್ಲರ ಆಗ್ರಹಕ್ಕಾಗಿ ಸ್ವಲ್ಪ ಒಂದು ತಿಂಗಳ ಅವಧಿಯಲ್ಲಿ ವಿಯೆನ್ನಾಕ್ಕೆ ಪ್ರಯಾಣ ಬೆಳೆಸಿದರು. ಇದರಿಂದ [illegible] ಒಂದು ತೆರನಾದ ಶಾಂತಿ ದೊರೆತಂತಾಯಿತು.

**ಶಬ್ದಾರ್ಥ :**

ಚಿಕಿತ್ಸೆ ರೋಗಿಗೆ ಉಪಚಾರ ಮಾಡುವದು; [illegible] ಮರಣಸಮಯ; ಪ್ರಕೃತಿ—ದೇಹದ ಸ್ಥಿತಿ; [illegible] ಇನ್ನೊಂದು ದೇಶಕ್ಕೆ ಹೋಗುವಾಗ ಬೇಕಾಗುವ [illegible] ಅಧಿಕಾರಿ [illegible] ಸುಂಕ ಅಥವಾ ಜಕಾತಿ ಕಟ್ಟೆಯ ಅಧಿಕಾರಿ; [illegible] ಅಂತಃಕರಣ.

**ಪ್ರಶ್ನೆ :**

೧. ಸುಭಾಸರು ವ್ಹಿಯೆನ್ನಾದಲ್ಲಿ ಏಕೆ ಇದ್ದರು ?

೨. ಅವರು ಭಾರತಕ್ಕೆ ಏಕೆ ಧಾವಿಸಿದರು ?

೩. ಕರಾಚಿಯಲ್ಲಿಳಿದಾಗ ಸುಭಾಸರಿಗೆ ಯಾವ ಸುದ್ದಿ ತಿಳಿಯಿತು ? ಅವರ ಮೇಲೆ ಅದರ ಪರಿಣಾಮವು ಹೇಗಾಯಿತು ?

೪. ಅವರು ಕಲಕತ್ತೆಯಲ್ಲಿಳಿದಾಗ ಏನಾಯಿತು ?

೫. ಈ ಪಾಠದಿಂದ ಸುಭಾಸರಲ್ಲಿ ಯಾವ ಗುಣವಿತ್ತೆಂಬುದನ್ನು ನೀವು ತಿಳಿಯುವಿರಿ ?

**ವ್ಯಾಕರಣ :**

## ಭಾವಬೋಧಕ ವಾಕ್ಯಗಳು

(ಅ) ೧. ಓಹೋ ! ಸುಭಾಸಚಂದ್ರಬೋಸರು ಬಂದೇ ಬಿಟ್ಟರು !

೨. ಪಾಪ ! ಸುಭಾಸರು ಎಷ್ಟು ಸೊರಗಿರುವರಲ್ಲ !

೩. ಅಯ್ಯೋ ! ಹಾವು ! ಹಾವು !

ಮೇಲಿನ ವಾಕ್ಯಗಳಲ್ಲಿ ಮೊದಲನೆಯ ವಾಕ್ಯವು ಹರ್ಷ ಹಾಗೂ ಆಶ್ಚರ್ಯಗಳನ್ನು ವ್ಯಕ್ತಪಡಿಸುತ್ತದೆ. ಎರಡನೆಯ ವಾಕ್ಯವು ಕರುಣೆ ಅಥವಾ ಮರುಕವನ್ನೂ ಮೂರನೆಯ ವಾಕ್ಯವು ಭಯವನ್ನೂ ವ್ಯಕ್ತಪಡಿಸುತ್ತವೆ.

ಹೀಗೆ ಮನಸ್ಸಿನಲ್ಲಿಯ ಬೇರೆ ಬೇರೆ ತೆರನಾದ ಭಾವಗಳನ್ನು ವ್ಯಕ್ತಪಡಿಸುವ ವಾಕ್ಯಗಳನ್ನು **ಭಾವಬೋಧಕ** ವಾಕ್ಯಗಳೆಂದು ಕರೆಯುತ್ತಾರೆ. ಭಾವಬೋಧಕ ವಾಕ್ಯಗಳು ಒಮ್ಮೊಮ್ಮೆ ಪ್ರಶ್ನಾರ್ಥಕ ಇಲ್ಲವೆ ನಿಷೇಧಾರ್ಥಕ ವಾಕ್ಯಗಳಂತೆ ತೋರುವವು. ಅಂಥ ಸಂದರ್ಭದಲ್ಲಿ ಅರ್ಥದ ಮೇಲಿಂದ ಅವುಗಳ ಭೇದವನ್ನು ಕಂಡು ಹಿಡಿಯಬೇಕು. ಕೆಳಗಿನ ವಾಕ್ಯಗಳನ್ನು ನೋಡಿರಿ.

೧. ಅಯ್ಯೋ ! ನಮಗೆ ಇನ್ನು ಯಾರು ದಾರಿ ತೋರುವರು !

೨. ಆಹಾ ! ಆ ದುಶ್ಚಟವೇ ಅವನನ್ನು ಹಾಳು ಮಾಡಿತಲ್ಲ !

ಇಲ್ಲಿ ಮೊದಲನೆಯ ವಾಕ್ಯವು ಪ್ರಶ್ನಾರ್ಥಕದಂತೆಯೂ ಎರಡನೆಯ ವಾಕ್ಯವು ನಿಷೇಧಾರ್ಥಕದಂತೆಯೂ ತೋರುವವು. ಆದರೆ ಅವು ನಿಜವಾಗಿಯೂ ಭಾವಬೋಧಕ ವಾಕ್ಯಗಳಾಗಿವೆ.

(ಬ) ಐದು ಭಾವಬೋಧಕ ವಾಕ್ಯಗಳನ್ನು ರಚಿಸಿ ಬರೆಯಿರಿ.

# ೬. ಲಕ್ಕುಂಡಿಯ ಮಹತಿ

[‘ಎಂಥ ನಾಡಿದು ಎಂಥ ಕಾಡಾಯಿತೋ!’ ಎಂಬ ಮಾತು ಲಕ್ಕುಂಡಿಯ ಗತವೈಭವವನ್ನು ಸ್ಮರಿಸಿದಾಗ ನೆನಪಾಗುವುದು. ಲಕ್ಕುಂಡಿ ಅನೇಕ ದೃಷ್ಟಿಯಿಂದ ಅತ್ಯಂತ ಮಹತ್ವವಾದ ಸ್ಥಳವಾಗಿತ್ತು. ಆ ಗ್ರಾಮವಲ್ಲಿಯ ಗುಡಿಗಳ ಕಲಾವೈಭವ, ಧಾರ್ಮಿಕ ಜೀವನದ ಉನ್ನತಿ ಇವೆಲ್ಲವುಗಳನ್ನು ಕುರಿತು ಈ ಪಾಠದಲ್ಲಿ ತಿಳಿಯುವಿರಿ. ಪ್ರಸಿದ್ಧ ಸಂಶೋಧಕರಾದ ಡಾ. ಜಿ. ಎನ್. ಗಾಯಿಯವರು ಗಿಳಿಗಳನ್ನು ಉದ್ದೇಶಿಸಿ ಬಾನುಲಿಯಲ್ಲಿ ಮಾತನಾಡುತ್ತಿದ್ದಾರೆ, ಕೇಳಿರಿ.]



★ ★ ★

**ಗಿಳಿಗಳೇ,**

ಇಂದು ಲಕ್ಕುಂಡಿಯನ್ನು ನೋಡಲಿಕ್ಕೆ ಹೋಗೋಣ. ಅದೊಂದು ಚಿಕ್ಕ ಹಳ್ಳಿ. ಧಾರವಾಡ ಜಿಲ್ಲೆಯ ಗದುಗಿನ ಆಗ್ನೇಯಕ್ಕೆ ಸುಮಾರು ಏಳು ಮೈಲು ದೂರದಲ್ಲಿದೆ. ಅಲ್ಲಿಯ ಜನಸಂಖ್ಯೆ ಸುಮಾರು ನಾಲ್ಕು ಸಾವಿರ. ಕೆಲವು ಕೈಮಗ್ಗಗಳ ಹೊರತು ಬೇರೆ ಉದ್ಯೋಗಗಳಿಗಾಗಲಿ ವ್ಯಾಪಾರಕ್ಕಾಗಲಿ ಅದು ಹೆಸರಾಗಿಲ್ಲ. ಆದರೆ ಲಕ್ಕುಂಡಿಯು ಇತಿಹಾಸ ಪ್ರಸಿದ್ಧವಾದ ಸ್ಥಳವಾಗಿದ್ದು ಅನೇಕ ಪ್ರಾಚೀನ ಕಟ್ಟಡಗಳಿಂದ ಮತ್ತು ಬೇರೆ ಸ್ಮಾರಕಗಳಿಂದ ಅದಕ್ಕೆ ಕರ್ನಾಟಕ ಸಾಂಸ್ಕೃತಿಕ

ಕ್ಷೇತ್ರದ ಮಹತಿಯುಂಟಾಗಿದೆ. ಇಂದು ನಾವು ಆ ಕ್ಷೇತ್ರ ಯಾತ್ರೆಯನ್ನು ಕೈ ಕೊಂಡು ಲಕ್ಕುಂಡಿಯ ಮಹಿಮೆಯನ್ನು ತಿಳಿದುಕೊಳ್ಳುವಾ.

ಲಕ್ಕುಂಡಿಯಲ್ಲಿ ಸುಮಾರು ಕ್ರಿ. ಶ. ೯-೧೦ನೆಯ ಶತಕದಿಂದ ೧೩-೧೪ ನೆಯ ಶತಕದ ವರೆಗಿನ ಅವಧಿಯಲ್ಲಿ ನಿರ್ಮಿತವಾದ ಅನೇಕ ದೇವಾಲಯಗಳೂ, ಶಿಲಾಶಾಸನಗಳೂ ಉಪಲಬ್ಧವಾಗಿವೆ. ಅನೇಕ ಸ್ಮಾರಕಗಳು ಕಾಲನ ದವಡೆ ಯಲ್ಲಿಯೂ, ಮಾನವನ ಕ್ರೂರ ಕೈಯಲ್ಲಿಯೂ ಸಿಕ್ಕು ನಾಶಹೊಂದಿವೆ. ಆದರೂ ಈಗ ದೊರೆತ ಕುರುಹುಗಳಿಂದ ಲಕ್ಕುಂಡಿಯ ಹಿಂದಿನ ಹಿರಿಮೆಯನ್ನು ತಿಳಿದು ಕೊಳ್ಳಲಿಕ್ಕೆ ಸಾಧ್ಯವಾಗಿದೆ.

ಲಕ್ಕುಂಡಿಯು ಮೊದಲು ಲೊಕ್ಕಿಗುಂಡಿಯೆಂದು ಕರೆಯಲ್ಪಡುತ್ತಿತ್ತು. ಇದನ್ನು ದಾಶರಥಿ ರಾಮಚಂದ್ರನು ಸ್ಥಾಪಿಸಿದನೆಂದು ಪ್ರತೀತಿ. "ದಾಶರಥಿ ವಿನಿರ್ಮಿತ ಮಹಾಗ್ರಾಮಂ ಲೊಕ್ಕಿಗುಂಡಿ" ಎಂದು ಶಾಸನಗಳಲ್ಲಿ ಉಕ್ತವಾಗಿದೆ. ವಿಭೂತಿಗೆ, ಧರ್ಮಕ್ಕೆ ಮತ್ತು ಲಕ್ಷ್ಮಿಗೆ ತವರುಮನೆಯಂತಿದ್ದ ಲೊಕ್ಕಿಗುಂಡಿಯು ಇಂದ್ರನ ಅಮರಾವತಿ ಪಟ್ಟಣಕ್ಕಿಂತಲೂ ಶ್ರೇಷ್ಠವಾಗಿದ್ದಿತೆಂದು ಒಂದು ಶಿಲಾಶಾಸನ ದಲ್ಲಿ ವರ್ಣಿಸಲ್ಪಟ್ಟಿದೆ. ಅಮರಾವತಿ ಪಟ್ಟಣವನ್ನು ಮತ್ತು ಲೊಕ್ಕಿಗುಂಡಿಯನ್ನು ಒಂದು ತಕ್ಕಡಿಯಲ್ಲಿಟ್ಟು ತೂಗಿದರೆ ನಮ್ಮ ಲೊಕ್ಕಿಗುಂಡಿಯ ತೂಕವೇ ಹೆಚ್ಚೆಂದು ಅಭಿಮಾನದಿಂದ ಹೇಳಲಾಗಿದೆ.

ಲಕ್ಕುಂಡಿಯಲ್ಲಿ ದೊರೆತ ಸ್ಮಾರಕಗಳಲ್ಲಿ ಮುಖ್ಯವಾದವುಗಳೆಂದರೆ :- ಜೈನ ಬಸ್ತಿ ಹಾಗು ಚಂದ್ರಮೌಳೀಶ್ವರ, ಗಣೇಶ, ಗೋಕರ್ಣೇಶ್ವರ, ಕಾಶೀ ವಿಶ್ವೇಶ್ವರ, ನಾಗರದೇವರು, ನನ್ನೇಶ್ವರ, ವೀರಭದ್ರ ಮೊದಲಾದ ಗುಡಿಗಳು ಕ್ರಿ. ಶ. ೧೧ನೇ ಶತಮಾನದಲ್ಲಿ ದಕ್ಷಿಣ ದೇಶದ ಚೋಳರು ದಂಡೆತ್ತಿ ಬಂದು ಲಕ್ಷ್ಮೇಶ್ವರ ಹಾಗೂ ಲಕ್ಕುಂಡಿಯಲ್ಲಿಯ ಅನೇಕ ದೇವಾಲಯಗಳನ್ನು ನಾಶಮಾಡಿದರೆಂದು ಇತಿಹಾಸ ದಿಂದ ತಿಳಿಯುವದು. ಮುಂದೆ ಹೊಯ್ಸಳರ ಪ್ರಸಿದ್ಧ ರಾಜನಾದ ವೀರ ಬಲ್ಲಾಳನು ಯಾದವರೊಡನೆ ಹೋರಾಡಿ ಈ ಭಾಗವನ್ನು ಆಕ್ರಮಿಸಿಕೊಂಡು ಕ್ರಿ. ಶ. ೧೧೯೩ ರಲ್ಲಿ ಲಕ್ಕುಂಡಿಯನ್ನು ತನ್ನ ರಾಜ್ಯದ ಉತ್ತರ ಭಾಗದ ರಾಜಧಾನಿಯನ್ನಾಗಿ ಮಾಡಿಕೊಂಡನು. ಚೋಳರಿಂದ ನಾಶ ಹೊಂದಿದ ಅನೇಕ ದೇವಾಲಯಗಳನ್ನು ವೀರಬಲ್ಲಾಳನು ಪುನಃ ಕಟ್ಟಿಸಿ ಲಕ್ಕುಂಡಿಯ ಮಹತಿಯನ್ನು ಹೆಚ್ಚಿಸಿದನು.

ಗ್ರಾಮದ ಪಶ್ಚಿಮ ಭಾಗದಲ್ಲಿರುವ ಜೈನ ಬಸದಿಯು ಲಕ್ಕುಂಡಿಯಲ್ಲಿ ದೊರೆತಿರುವ ಕಟ್ಟಡಗಳಲ್ಲಿ ಅತಿ ಪ್ರಾಚೀನವಾದದ್ದು. ಶಿಲ್ಪಶೈಲಿಯ ದೃಷ್ಟಿಯಿಂದ ಈ ಜೈನ ದೇವಾಲಯದಲ್ಲಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಮುಂದಿನ ಬೆಳವಣಿಗೆಯನ್ನು ಕಾಣುತ್ತೇವೆ. ಇಲ್ಲಿ ಚೌಕೋನಾಕಾರದ ಮಾಳಿಗೆಯು ದ್ರಾವಿಡ ಶಿಲ್ಪ ಪದ್ಧತಿಯನ್ನನುಸರಿಸಿದೆ.

ಈ ಜೈನ ಬಸದಿಯ ಹತ್ತಿರ ಕಲ್ಯಾಣ ಚಾಲುಕ್ಯರ ರಾಜನಾದ ಇರಿವ ಬೆಡಂಗ ಸತ್ಯಾಶ್ರಯನ ಕಾಲದ ಅಂದರೆ ಕ್ರಿ. ಶ. ೧೦೦೭ನೆಯ ವರ್ಷದ ಶಿಲಾ ಶಾಸನವಿದೆ. ಅದರಲ್ಲಿ ಅತ್ತಿಮಬ್ಬೆಯು ಲೊಕ್ಕಿಗುಂಡಿಯಲ್ಲಿ ಕಟ್ಟಿಸಿದ ಜೈನ ಬಸದಿಗೆ ದತ್ತಿಯನ್ನು ಬಿಟ್ಟ ಸಂಗತಿಯನ್ನು ಹೇಳಿದೆ. ಬಹುಶಃ ಅಲ್ಲಿ ಉಕ್ತ ವಾದ ಬಸದಿಯು ಈಗಿನದಾಗಿರಬಹುದೆಂದು ಊಹಿಸಲಿಕ್ಕವಕಾಶವಿದೆ. ಅತ್ತಿ ಮಬ್ಬೆಯು ಮೊದಲು ಸಾವಿರದಯ್ನೂರು ಬಸದಿಗಳನ್ನು ಕಟ್ಟಿಸಿದ್ದಳಂತೆ. ಲೊಕ್ಕಿ ಗುಂಡಿಯ ಸಾಸಿರ ಮಹಾಜನರು ಈ ಜೈನ ಬಸದಿಗೆ ಬ್ರಹ್ಮಜಿನಾಲಯವೆಂದು ಹೆಸರಿಟ್ಟರಂತೆ. ಅಲ್ಲದೆ ಈ ಜೈನಬಸದಿಯು ಕಳಸ, ಶಂಖ, ಛತ್ರ–ಚಾಮರ ಮುಂತಾದವುಗಳಿಂದ ಶೋಭಿಸುತ್ತಿತ್ತು. ಅತ್ತಿಮಬ್ಬೆಯು ಕಟ್ಟಿಸಿದ ಬಸದಿಯು ಕುಸಿದು ಬಿದ್ದುದರಿಂದ ಅದನ್ನು ಭರತಾಚಾರ್ಯ, ನಾಕಿ ಮತ್ತು ಸಿರಿಪಾಳ ಎಂಬ ವರು ಕಾಲಕಾಲಕ್ಕೆ ಜೀರ್ಣೋದ್ಧಾರ ಮಾಡಿಸಿದರೆಂದು ಅದೇ ಶಾಸನದಿಂದ ತಿಳಿಯುವದು. ಕ್ರಿ. ಶ. ೧೧–೧೨ನೆಯ ಶತಮಾನದಲ್ಲಿ ಲಕ್ಕುಂಡಿಯು ಜೈನ ಧರ್ಮದ ಮಹತ್ವದ ಕೇಂದ್ರವಾಗಿದ್ದಿತು.

ಆ ಬಸದಿಯನ್ನು ನಿರ್ಮಿಸಿದ ಅತ್ತಿಮಬ್ಬೆಯ ವಿಷಯಕ್ಕೆ ತಿಳಿದುಕೊಳ್ಳುವಾ. ಕನ್ನಡ ಕಾವ್ಯ ಪ್ರಪಂಚದಲ್ಲಿ ಉನ್ನತ ಮನ್ನಣೆಯನ್ನು ಪಡೆದ ರನ್ನ ಕವಿಯಿಂದ ಕ್ರಿ. ಶ. ೯೯೩ರಲ್ಲಿ ಅಜಿತ ಪುರಾಣವನ್ನು ಬರೆಯಿಸಿದವಳು ಈ ಅತ್ತಿಮಬ್ಬೆಯೇ. ಆಕೆ ದಾನಶೂರಳೂ ಧರ್ಮನಿರತಳೂ ಶೀಲಸಂಪನ್ನಳೂ ಆಗಿ 'ಮಹಾ ಸತೀರತ್ನ ಮತ್ತಿಮಬ್ಬರಸಿಯರ್,' ಎಂದು ಹೊಗಳಿಸಿಕೊಂಡಿದ್ದಾಳೆ. ದಾನಚಿಂತಾಮಣಿ ಯಾದ ಅತ್ತಿಮಬ್ಬೆಯು ಧಲ್ಲವನ ಮಗನಾದ ನಾಗದೇವನ ಹೆಂಡತಿ. ಈ ದಂಪತಿಗಳಿಗೆ ತೈಲಪನೆಂಬ ಮಗನು. ತೈಲಪನು ಚಿಕ್ಕವನಿರುವಾಗಲೇ ನಾಗ ದೇವನು ತೀರಿಕೊಂಡನು. ಚಿಕ್ಕಮಗುವನ್ನು ಸಂರಕ್ಷಿಸಿ ದೊಡ್ಡವನನ್ನಾಗಿ ಮಾಡು ವದಕ್ಕೋಸ್ಕರ ಅತ್ತಿಮಬ್ಬೆಯು ಪತಿಯೊಡನೆ ಸಹಗಮನ ಹೊಂದಲಿಲ್ಲ. ತೈಲ-

ಪನು ದೊಡ್ಡವನಾದ ಬಳಿಕ ಲಕ್ಕುಂಡಿ ಭಾಗವನ್ನೊಳಗೊಂಡಿದ್ದ ಮಾಸೆವಾಡಿ ೧೪೦ಕ್ಕೆ ಅಧಿಪತಿಯಾಗಿದ್ದನು.

ಅತ್ತಿಮಬ್ಬೆಯ ವ್ರತದ ಮಹಿಮೆಯಂತಹದೆಂದರೆ ಶ್ರವಣಬೆಳ್ಗೊಳದಲ್ಲಿ ಚಾವುಂಡರಾಯನು ಮಾಡಿಸಿದ ಗೊಮ್ಮಟೇಶ್ವರನ ದರ್ಶನವಾಗುವ ವರೆಗೆ ಅನ್ನವನ್ನು ಮುಟ್ಟುವದಿಲ್ಲವೆಂದು ಕಠಿಣ ವ್ರತವನ್ನು ಹಿಡಿದು, ಅಲ್ಲಿಯ ವರೆಗೆ ಹೋಗಿ ಆ ಗೊಮ್ಮಟೇಶ್ವರನ ಸಾನ್ನಿಧ್ಯದಲ್ಲಿ ನಿಂತಾಗ ಈಕೆಯ ದಾರಿಯ ಶ್ರಮವು ಹೋಗುವಂತೆ ಅಕಾಲವೃಷ್ಟಿಯಾಯಿತಂತೆ. ಅಂತಹ ಆಶ್ಚರ್ಯಕರವಾದುದು ಆಕೆಯ ದೇವಭಕ್ತಿ ! ಲಕ್ಕುಂಡಿಯ ಶಾಸನಕರ್ತನು ಅತ್ತಿಮಬ್ಬೆಯನ್ನು 'ಗುಣದಂತ ಕಾರ್ತಿ' 'ಕಟಕ–ಪವಿತ್ರೆ' 'ದಾನಚಿಂತಾಮಣಿ' ಎಂಬ ಬಿರುದುಗಳಿಂದ ಉಲ್ಲೇಖಿಸಿ ಆಕೆಯ ಪವಾಡಗಳನ್ನು ವರ್ಣಿಸಿದ್ದಾನೆ. ಒಂದು ಸಲ ಆಕೆಯು ಅರಸನ ಆಜ್ಞೆಯಂತೆ ಜಿನ ಪ್ರತಿಮೆಯನ್ನು ತಲೆಯ ಮೇಲಿಟ್ಟುಕೊಂಡು ತುಂಬಿದ ಗೋದಾವರಿ ನದಿಯಲ್ಲಿ ಹೋಗಲು ಆ ಗೋದಾವರಿಯು ಆಕೆಗೆ ದಾರಿ ಮಾಡಿಕೊಟ್ಟಳಂತೆ. ಅದರಂತೆ ಮದಭರಿತವಾದ ಆನೆಯನ್ನು ಆಕೆಯ ಮೈಮೇಲೆ ಬಿಡಲು ಅದು ಭಕ್ತಿಯಿಂದ ಅತ್ತಿಮಬ್ಬೆಗೆ ನಮಸ್ಕರಿಸಿತಂತೆ. ಒಂದು ಸಲ ಆಕೆಯ ಪ್ರೀತಿಯ ಜಿನ ಪ್ರತಿಮೆಯು ಕೈತಪ್ಪಿ ನದಿಯಲ್ಲಿ ಬಿದ್ದಿತಂತೆ. ಅದು ಸಿಗುವ ವರೆಗೆ ಊಟ ಮಾಡುವದಿಲ್ಲವೆಂದು ಹಟತೊಟ್ಟಾಗ ಎಂಟು ದಿನಗಳಿಗೆ ಆ ಪ್ರತಿಮೆಯು ಅತ್ತಿಮಬ್ಬೆಯ ಕೈಸೇರಿತಂತೆ. ಹೀಗೆ ವಿವಿಧ ರೀತಿಯಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆಯ ಮಹಿಮೆಯು ಲಕ್ಕುಂಡಿಯ ಶಿಲಾಶಾಸನದಲ್ಲಿ ವರ್ಣಿಸಲ್ಪಟ್ಟಿದೆ.

ಇನ್ನು ಲಕ್ಕುಂಡಿಯ ಕಾಶೀ ವಿಶ್ವೇಶ್ವರ ದೇಗುಲವನ್ನು ನೋಡೋಣ. ಇಡೀ ಕರ್ನಾಟಕದಲ್ಲಿ ಪ್ರಸಿದ್ಧವಾದ ಈ ಕಟ್ಟಡವು ಚಾಲುಕ್ಯ ಶಿಲ್ಪಶೈಲಿಯ ಉತ್ತಮ ನಿದರ್ಶನವಾಗಿದೆ. ದಕ್ಷಿಣ ಮತ್ತು ಉತ್ತರ ಭಾರತದ ಕಟ್ಟಡ ಪದ್ಧತಿಗಳನ್ನು ಬೆರೆಯಿಸಿ ಕ್ರಿ. ಶ. ೧೦ ರಿಂದ ೧೨ನೆಯ ಶತಕದ ಅವಧಿಯಲ್ಲಿ ಕರ್ನಾಟಕದಲ್ಲಿ ವಿಶಿಷ್ಟ ಶೈಲಿಯ ಶಿಲ್ಪ ಪದ್ಧತಿಯು ಪ್ರಾರಂಭವಾಯಿತು. ಅದಕ್ಕೆ ಚಾಲುಕ್ಯ ಶಿಲ್ಪಶೈಲಿಯೆಂದು ಕರೆಯುವರು. ಧಾರವಾಡ ಜಿಲ್ಲೆಯು ಈ ಶೈಲಿಯ ಕಟ್ಟಡಗಳ ತವರೂರೆಂದು ಗಣಿಸಲ್ಪಡುತ್ತದೆ. ಲಕ್ಕುಂಡಿಯ ಜೈನಬಸದಿಯು ಈ ಚಾಲುಕ್ಯ ಶಿಲ್ಪಶೈಲಿಯ ಪೂರ್ವ ಸ್ಥಿತಿಯನ್ನು ನಿದರ್ಶಿಸಿದರೆ, ಕಾಶೀ ವಿಶ್ವೇಶ್ವರ ದೇವಾಲಯವು ಆ ಶೈಲಿಯ ಪೂರ್ಣ ಬೆಳವಣಿಗೆಯನ್ನು ಪ್ರದರ್ಶಿಸುತ್ತದೆ. ಈ ಮಾದರಿಯ ಕಟ್ಟಡಗಳನ್ನು ನಾವು ಚೌಡದಾನಪುರದ ಮುಕ್ತೇಶ್ವರ, ಹಾವೇರಿಯ

ಸಿದ್ಧೇಶ್ವರ, ಗದುಗಿನ ಸರಸ್ವತಿ ದೇವಾಲಯಗಳಲ್ಲಿ ಕಾಣಬಹುದು. ಕಾಶೀವಿಶ್ವೇಶ್ವರ ದೇವಾಲಯದಲ್ಲಿ ಚಾಲುಕ್ಯ ಶಿಲ್ಪಾಚಾರ್ಯರು ಕೆತ್ತನೆಯ ಕೆಲಸದಲ್ಲಿ ತಮ್ಮ ಕೌಶಲ್ಯವನ್ನು ಎತ್ತಿ ತೋರಿಸಿದ್ದಾರೆ.

ಕಾಶೀ ವಿಶ್ವೇಶ್ವರ ದೇವಾಲಯಕ್ಕೆ ಹೊಂದಿಕೊಂಡು ಒಂದು ಚಿಕ್ಕ ದೇವಾಲಯವಿದೆ. ಇದು ಸೂರ್ಯನಾರಾಯಣನ ಮಂದಿರ. ಉಳಿದ ಕಡೆಗಿದ್ದ ಸೂರ್ಯದೇವಾಲಯಗಳು ಪೂರ್ವಾಭಿಮುಖವಾಗಿದ್ದರೆ ಲಕ್ಕುಂಡಿಯಲ್ಲಿದ್ದ ಈ ಮಂದಿರವು ಪಶ್ಚಿಮಾಭಿಮುಖವಾಗಿರುತ್ತದೆ. ಮುಂಬಾಗಿಲಿನ ಮೇಲೆ ಗಜಲಕ್ಷ್ಮಿಯಿದ್ದು ಅದರ ಮೇಲ್ಭಾಗದಲ್ಲಿ ಸಪ್ತಾಶ್ವಗಳಿಂದೊಡಗೂಡಿದ ಸೂರ್ಯನ ಮೂರ್ತಿಯನ್ನು ಕೆತ್ತಿದೆ. ಅದನ ಎರಡು ಪಕ್ಕಗಳಲ್ಲಿ ಅವನ ಮಡದಿಯರಾದ ಸಂಜ್ಞಾ ಮತ್ತು ಛಾಯಾ ಅವರ ಮೂರ್ತಿಗಳಿವೆ. ಲಕ್ಕುಂಡಿಯಿಂದ ತಂದ ಸುಂದರವಾದ ಎರಡು ಜೈನ ತೀರ್ಥಂಕರರ ಮೂರ್ತಿಗಳನ್ನು ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯಲ್ಲಿಡಲಾಗಿದೆ. ಅವುಗಳಲ್ಲಿ ಒಂದು ಲಕ್ಕುಂಡಿಯ ಜೈನ ಬಸದಿಯಲ್ಲಿದ್ದ ಮಹಾವೀರನ ಮೂರ್ತಿಯಾಗಿರಬಹುದು.

ಅಂತು ಜೈನಬಸದಿ, ಕಾಶೀ ವಿಶ್ವೇಶ್ವರ ದೇವಾಲಯಗಳಂತಹ ಕಟ್ಟಡಗಳಿಂದ, ರನ್ನಕವಿಯ ಪೋಷಕಳಾದ ದಾನ ಚಿಂತಾಮಣಿ ಅತ್ತಿಮಬ್ಬೆ ಹಾಗೂ ಅವಳ ಮನೆತನದ ಸಂಪರ್ಕದಿಂದ, ಊರ ಪ್ರಮುಖ ಮಹಾಜನ ಸಾಸಿರ್ವರಿಂದ ಮತ್ತು ಟಂಕಸಾಲೆಯಿಂದ ಲಕ್ಕುಂಡಿಯು ಇತಿಹಾಸ ಪ್ರಸಿದ್ಧವಾದ ಕ್ಷೇತ್ರವೆಂದು ಗೊತ್ತಾಗುವದು.

**ಶಬ್ದಾರ್ಥ :**

ಉಪಲಬ್ಧವಾಗು– ದೊರೆ; ಕಾಲ–ಯಮ; ಶಾಸನ– ಕಲ್ಲಿನಲ್ಲಿ ಬರೆದ ಬರೆಹ; ಸ್ಮಾರಕ– ಹಳೆಯ ನೆನಹು; ಶಿಲ್ಪಶೈಲಿ– ಕಲ್ಲಿನಿಂದ ದೇವಾಲಯ ಕಟ್ಟುವ ರೀತಿ; ದತ್ತಿ– ದಾನ; ವೃಷ್ಟಿ– ಮಳೆ; ಮಾಸೆವಾಡಿ ೧೪೦– ಕೆಲವು ಹಳ್ಳಿಗಳನ್ನು ಕೂಡಿಸಿ ಆಡಳಿತೆ ನಡೆಯಿಸುವದು ಆಗಿನ ಪದ್ಧತಿ; ಇಲ್ಲಿ ೧೪೦ ಹಳ್ಳಿಗಳಿಂದ ಕೂಡಿದ ಮಾಸೆವಾಡಿ ಎಂದು ಅರ್ಥ.

**ಪ್ರಶ್ನೆ :**

೧. ಶಾಸನಗಳು ಲಕ್ಕುಂಡಿಯ ಹಿರಿಮೆಯನ್ನು ಏನೆಂದು ವರ್ಣಿಸಿವೆ ?
೨. ಲಕ್ಕುಂಡಿಯಲ್ಲಿ ದೊರೆತ ಸ್ಮಾರಕಗಳಲ್ಲಿ ಮುಖ್ಯವಾದವು ಯಾವವು ?
೩. ಇತಿಹಾಸದಲ್ಲಿ ಲಕ್ಕುಂಡಿಯ ಮಹತ್ವವು ಹೇಗೆ ಹೆಚ್ಚುತ್ತ ಹೋಯಿತು ?

೪. ಇರಿವಬೆಡಂಗ ಸತ್ಯಾಶ್ರಯನ ಕಾಲದ ಶಾಸನದಿಂದ ಲಕ್ಕುಂಡಿಯ ಬಗ್ಗೆ ಯಾವ ಸಂಗತಿಗಳು ತಿಳಿದು ಬರುವವು ?

೫. ಅತ್ತಿಮಬ್ಬೆ ಯಾರು ?

೬. ಅತ್ತಿಮಬ್ಬೆಯ ವ್ರತದ ಮಹಿಮೆ ಎಂತಹದು ?

೭. ಅತ್ತಿಮಬ್ಬೆಯ ಬಗ್ಗೆ ಇರುವ ಪವಾಡಗಳು ಯಾವವು ?

೮. ಕಾಶೀ ವಿಶ್ವೇಶ್ವರ ದೇವಾಲಯದ ಮಹತ್ವವೇನು ?

**ವ್ಯಾಕರಣ:**

### ಅಂಗೀಕಾರಾರ್ಥಕ ವಾಕ್ಯಗಳು

(ಅ) ಕೆಳಗಿನ ವಾಕ್ಯಗಳನ್ನು ನಿರೀಕ್ಷಿಸಿರಿ.

೧. ಲಕ್ಕುಂಡಿಯಲ್ಲಿಯ ಅನೇಕ ಸ್ಮಾರಕಗಳು ಕಾಲನ ದವಡೆಯಲ್ಲಿ ಸಿಕ್ಕು ನಾಶವಾದವು.

೨. ದೇವಾಲಯಗಳಲ್ಲಿ ಈಗಲೂ ಒಳ್ಳೆಣ್ಣೆಯ ಇಲ್ಲವೆ ತುಪ್ಪದ ದೀಪಗಳನ್ನೇ ಹಚ್ಚುತ್ತಾರೆ.

೩. ಇನ್ನು ಮುಂದೆ ನಮ್ಮ ದೇಶದಲ್ಲಿಯೂ ಬಹಳಷ್ಟು ಕಲ್ಲೆಣ್ಣೆಯು ದೊರೆಯುವದು.

ಇಲ್ಲಿ ಮೊದಲನೆಯ ವಾಕ್ಯದಲ್ಲಿ ನಾಶವಾಗುವ ಕ್ರಿಯೆ ನಡೆಯಿತೆಂಬುದನ್ನೂ ಎರಡನೆಯ ವಾಕ್ಯದಲ್ಲಿ ಹಚ್ಚುವ ಕ್ರಿಯೆ ನಡೆಯುತ್ತಿದೆ ಎಂಬುದನ್ನೂ ಮೂರನೆಯ ವಾಕ್ಯದಲ್ಲಿ ದೊರೆಯುವ ಕ್ರಿಯೆ ನಡೆಯುವದೆಂಬುದನ್ನೂ ಹೇಳಿದೆ.

ಹೀಗೆ ಒಂದು ಕ್ರಿಯೆ ನಡೆಯಿತು, ನಡೆಯುತ್ತಿದೆ, ನಡೆಯುವದು ಎಂಬುದನು ಹೇಳುವ ವಾಕ್ಯಗಳನ್ನು ಅಂಗೀಕಾರಾರ್ಥಕ ವಾಕ್ಯಗಳೆಂದು ಕರೆಯುವರು. ಇಂಥ ವಾಕ್ಯದ ಕ್ರಿಯಾಪದಗಳಲ್ಲಿ ಕ್ರಿಯೆ ನಡೆಯುವ ಬಗ್ಗೆ ಅಂಗೀಕಾರದ ಅಂದರೆ ಸ್ವೀಕಾರದ ಅರ್ಥವಿರುತ್ತದೆ ಮತ್ತು ಈ ವಾಕ್ಯಗಳು ಕಾಲವನ್ನು ಸೂಚಿಸುತ್ತವೆ.

(ಬ) ಈ ಪಾಠದಲ್ಲಿ ಬಂದ ಐದು ಅಂಗೀಕಾರಾರ್ಥಕ ವಾಕ್ಯಗಳನ್ನು ಹುಡುಕಿ ಬರೆಯಿರಿ.



# ೭. ಆದರ್ಶ ಮಹಿಳೆಯರು

[ಈ ವಿಭಾಗದಲ್ಲಿ ಭಾರತದ ಮೂವರು ಪೆಣ್ಮಣಿಗಳ ಸಂಕ್ಷಿಪ್ತ ಚರಿತ್ರೆಯನ್ನು ಕೊಟ್ಟಿದೆ. ಇವರಲ್ಲಿ ಝಾಂಸಿಯ ಮಹಾರಾಣಿ ಲಕ್ಷ್ಮೀಬಾಯಿಯು ಶೌರ್ಯದಲ್ಲಿ, ಶ್ರೀ ಶಾರದಾದೇವಿಯು ಅಧ್ಯಾತ್ಮದಲ್ಲಿ, ಶ್ರೀಮತಿ ಸರೋಜಿನಿ ನಾಯಡು ಕಾವ್ಯದಲ್ಲಿ ಶ್ರೇಷ್ಠರಾಗಿದ್ದಾರೆ. ಭಾರತದಲ್ಲಿ ಇಂಥ ಮಹಿಳೆಯರು ಅನೇಕರಿರುವರು. ಈ ಮೂವರ ಪರಿಚಯದಿಂದ ಉಳಿದವರ ಪರಿಚಯ ಮಾಡಿಕೊಳ್ಳಲು ವಿದ್ಯಾರ್ಥಿಗಳಿಗೆ ಮಾರ್ಗದರ್ಶನವು ಈ ಪಾಠದಲ್ಲಿ ದೊರೆಯಬಹುದು.]

★ ★ ★

## ೧. ಝಾಂಸಿಯರಾಣಿ ಲಕ್ಷ್ಮೀಬಾಯಿ

'ಅದೃಷ್ಟವು ಅಶಕ್ತರ ಅಂಗೈ ಗೆರೆಗಳಲ್ಲಿರುವದಿಲ್ಲ. ಸಶಕ್ತರ ಮುಂಗೈ ಬಲದಲ್ಲಿರುವದು,' ಎಂಬ ವೀರ ಸಂದೇಶ ಕೊಟ್ಟು ಹೋದ ವೀರಮಹಿಳೆಯರಲ್ಲಿ ಝಾಂಸಿಯ ಮಹಾರಾಣಿ ಲಕ್ಷ್ಮೀಬಾಯಿಯು ಒಬ್ಬ ಶ್ರೇಷ್ಠ ಮಹಿಳೆಯಾಗಿದ್ದಾಳೆ.

ಲಕ್ಷ್ಮೀಬಾಯಿಯ ತವರು ಮನೆಯ ಹೆಸರು ಮನೂಬಾಯಿ. 'ಮನೂ' ಎಂದು ಆಕೆಯ ತಾಯಿ-ತಂದೆಗಳು ಆಕೆಯನ್ನು ಪ್ರೀತಿಯಿಂದ ಕರೆಯುತ್ತಿದ್ದರು. ಮನೂಬಾಯಿಯ ತಂದೆ ಮೋರೋಪಂತ, ತಾಯಿ ಭಾಗೀರಥೀಬಾಯಿ. ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡ 'ಮನೂ' ತಂದೆಯ ಲಾಲನೆ-ಪಾಲನೆಯಲ್ಲಿ ಬೆಳೆದು ದೊಡ್ಡವಳಾದಳು.

ಎರಡನೆ ಬಾಜೀರಾವ ಪೇಶವೆ ಕಾಶಿಯ ಹತ್ತಿರ ಇರುವ ಬಿಠೂರದಲ್ಲಿ ವರ್ಷಾಶನ ಪಡೆದು ಇದ್ದಾಗ ಮೋರೋಪಂತ ಅಲ್ಲಿ ಅವನ ಕಾರಭಾರಿಯಾಗಿದ್ದ. ಮನೂ ಆ ಪೇಶ್ವೆಯ ದರಬಾರಿನಲ್ಲಿ ಬೆಳೆದ ವೀರ ಕನ್ಯೆಯಾಗಿದ್ದಳು. ಆಕೆಯನ್ನು ಕುದುರೆಯ ಸವಾರಿಯಲ್ಲಿ ಸರಿಗಟ್ಟುವವರು ಯಾರೂ ಇರಲಿಲ್ಲ. ಒಮ್ಮೆ ಎರಡನೆಯ ಬಾಜೀರಾಯನ ಮಗ ನಾನಾಸಾಹೇಬ ನವರಾತ್ರಿಯ ಉತ್ಸವದಲ್ಲಿ ಆನೆಯ ಮೇಲೆ ಕುಳಿತು ಹೊರಟಿದ್ದ. 'ಮನೂ' ತನಗೂ ಆನೆ ಬೇಕೆಂದು ಹಟಹಿಡಿದಳು. ಅಲ್ಲಿ ಇನ್ನೊಂದು ಆನೆ ಇರಲಿಲ್ಲ. ಕುದುರೆಯ ಮೇಲೆ ಕುಳ್ಳಿರಲು ಆಕೆ ಒಪ್ಪಲಿಲ್ಲ. ಮೋರೋಪಂತ ಮಗಳ ಮೇಲೆ ಸಿಟ್ಟಾಗಿ "ನಿನಗೆ ಆನೆ ಬೇಕು, ಒಂಟೆ ಬೇಕು. ಆದರೆ ಆನೆ, ಒಂಟೆಗಳನ್ನು ಪಡೆಯುವ ಭಾಗ್ಯವನ್ನು ಬೇಡಿ ಬಂದಿಲ್ಲ. ಅದಕ್ಕೆ ಯಾರೇನು ಮಾಡುವದು ?" ಎಂದು ಗದ್ದರಿಸಿದ. ಅದಕ್ಕೆ ಮನೂ

ತಿರುಗಿ ಗದ್ದರಿಸಿದಳು. "ನನ್ನಲ್ಲಿ ಒಂದು ಆನೆಯಲ್ಲ ಹತ್ತು ಆನೆಗಳನ್ನು ಕಟ್ಟುವ ಯೋಗ್ಯತೆ ಇದೆ "!



ಈ ಯೋಗ್ಯತೆ ಅವಳಲ್ಲಿ ನಿಜವಾಗಿಯೂ ಇತ್ತು. ಮನೂ ದೊಡ್ಡವಳಾದ ಮೇಲೆ ಝಾಂಸಿ ಸಂಸ್ಥಾನದ ಗಂಗಾಧರರಾಯನನ್ನು ಮದುವೆಯಾಗಿ ಮಹಾರಾಣಿ ಲಕ್ಷ್ಮೀಬಾಯಿಯಾದಳು. ಒಂದಲ್ಲ ಹತ್ತು ಆನೆಗಳನ್ನು ಹತ್ತಿ ಮೆರೆದಳು. ಗಂಗಾಧರರಾಯ ಒಳ್ಳೇ ಆಡಳಿತಗಾರ. ಲಕ್ಷ್ಮೀಬಾಯಿ ಒಳ್ಳೆಯ ಗೃಹಿಣಿ. ಇಬ್ಬರ ಸಂಸಾರ ಬಹಳ ಪ್ರೇಮದಿಂದ ನಡೆಯಿತು. ಒಂದು ಗಂಡು ಮಗುವೂ ಆಯಿತು. ಆದರೆ ಅದು ಬೇಗನೆ ಮರಣ ಹೊಂದಿದ್ದರಿಂದ ಗಂಗಾಧರರಾಯನಿಗೆ ಮನಸ್ಸಿನ ಮೇಲೆ ಬಹಳ ಆಘಾತವಾಯಿತು. ಅವನು ಅದೇ ಚಿಂತೆಯಿಂದ ಹಾಸಿಗೆ ಹಿಡಿದ. ಇನ್ನು ತಾನು ಬದುಕುವದಿಲ್ಲೆಂದೆನಿಸಿದ ಕೂಡಲೇ ಲಕ್ಷ್ಮೀಬಾಯಿಯ ಸಮ್ಮತಿಯಿಂದ ತಮ್ಮ ಆಪ್ತ ವರ್ಗದ ಹುಡುಗನನ್ನು ದತ್ತಕ ತೆಗೆದುಕೊಂಡು ಇಹಲೋಕಯಾತ್ರೆಯನ್ನು ಮುಗಿಸಿದ. ಲಕ್ಷ್ಮೀಬಾಯಿ ತನ್ನ ದುಃಖವನ್ನು ನುಂಗಿಕೊಂಡು ದತ್ತಕಮಗನ ಸಂರಕ್ಷಣದಾರಳಾಗಿ ರಾಜ್ಯಕಾರಭಾರ ನಡೆಯಿಸಿದಳು.

ಆದರೆ ಕಂಪನಿ ಸರಕಾರಕ್ಕೆ ಈ ದತ್ತಕ ಮನಸ್ಸಿಗೆ ಬರಲಿಲ್ಲ. ಅವರು ಸಂಸ್ಥಾನವನ್ನು ತಮ್ಮ ವಶಪಡಿಸಿಕೊಂಡು, ಲಕ್ಷ್ಮೀಬಾಯಿಗೆ ತಿಂಗಳಿಗೆ ೫೦೦೦ ರೂಪಾಯಿಯಂತೆ ವರ್ಷಾಶನ ಕೊಟ್ಟರು.

ಇದೇ ಸಮಯದಲ್ಲಿ ಅಂದರೆ ಕ್ರಿ. ಶ. ೧೮೫೭ರಲ್ಲಿ ಸಿಪಾಯಿಗಳ ಬಂಡಾಯವೆಂದು ಹೆಸರಾದ ಭಾರತೀಯರ ಮೊದಲನೆಯ ಸ್ವಾತಂತ್ರ್ಯ ಯುದ್ಧ ಸುರುವಾಯಿತು. ಈ ಸ್ವಾತಂತ್ರ್ಯ ಯುದ್ಧದಲ್ಲಿ ಲಕ್ಷ್ಮೀಬಾಯಿಯು ಪೇಶ್ವೆ ನಾನಾಸಾಹೇಬ, ತಾತ್ಯಾಟೋಪಿ ಮೊದಲಾದ ನಾಯಕರನ್ನು ಕೂಡಿಕೊಂಡು ಗ್ವಾಲೀರ ಕೋಟೆಯನ್ನು ಗೆದ್ದಳು. ನಂತರ ಕಂಪನಿ ಸರಕಾರದ ಸೈನ್ಯವು ಗ್ವಾಲೀರವನ್ನು

ಮುತ್ತಿದಾಗ ಅವರ ರಕ್ಷಣೆಗಾಗಿ ರಣಚಂಡಿಯಂತೆ ಮೂರು ದಿನ ಅನ್ನ-ನೀರಿಲ್ಲದೆ ಹೋರಾಡಿ ಅವಳು ವೀರಸ್ವರ್ಗವನ್ನೈದಳು. ಇಂದಿಗೂ ಲಕ್ಷ್ಮೀಬಾಯಿಯ ಕತೆ ನಮಗೆಲ್ಲ ಸ್ಫೂರ್ತಿದಾಯಕವಾಗಿದೆ.

## ೨. ಶ್ರೀ ಶಾರದಾದೇವಿ

"ಮಗು, ನಾನು ಹೇಳುವುದನ್ನು ಕೇಳು. ಮನಶ್ಶಾಂತಿ ಬೇಕಾದರೆ ಇನ್ನೊಬ್ಬರಲ್ಲಿ ತಪ್ಪು ಕಂಡು ಹಿಡಿಯಬೇಡ. ಅದರ ಬದಲು ನಿನ್ನಲ್ಲಿಯ ತಪ್ಪು ಹುಡುಕು. ಪ್ರಪಂಚವನ್ನೆಲ್ಲ ನಿನ್ನದನ್ನಾಗಿ ಮಾಡಿಕೋ. ಯಾರೂ ಪರಕೀಯರಲ್ಲ." ಇದು ಶಾರದಾದೇವಿಯವರು ಒಬ್ಬ ಭಕ್ತಳ ಮೂಲಕ ಈ ಜಗತ್ತಿಗೆ ಕೊಟ್ಟ ಕೊನೆಯ ಸಂದೇಶ. ಇದು ಬರೀ ಎಲ್ಲರ ಮನೆಯವರಿಗೆ ಮಾತ್ರ ಕೊಟ್ಟ ಸಂದೇಶವಲ್ಲ. ಸ್ವತಃ ಶಾರದಾದೇವಿಯವರು ತಮ್ಮ ಜೀವಮಾನದಲ್ಲಿ ಚಾಚೂ ತಪ್ಪದೇ ನಡೆದು ತೋರಿಸಿದ ನಡೆ.



ಶಾರದಾದೇವಿ ಕ್ರಿ. ಶ. ೧೮೫೩ನೆಯ ವರುಷ ಡಿಶಂಬರ ತಿಂಗಳ ೨೨ನೇ ದಿನಾಂಕ ಬಂಗಾಲ ಪ್ರಾಂತದ ಜಯರಾಮವಟಿಯೆಂಬ ಹಳ್ಳಿಯಲ್ಲಿ ಜನ್ಮ ತಳೆದರು. ಅವರ ತಾಯಿ-ತಂದೆಗಳಾದ ಶ್ಯಾಮಸುಂದರೀದೇವಿ ಮತ್ತು ರಾಮಚಂದ್ರ ಮುಖ್ಯೋಪಾಧ್ಯಾಯರು ಸಜ್ಜನರೂ ದಯಾಳುಗಳೂ ಭಗವದ್ಭಕ್ತರೂ ಆಗಿದ್ದರು. ಶಾರದಾದೇವಿಯವರು ಐದು ವರುಷದ ಹುಡುಗಿಯಾಗಿರುವಾಗಲೇ ಶ್ರೀರಾಮಕೃಷ್ಣ ಪರಮಹಂಸರ ಕೂಡ ಅವರ ಮದುವೆಯಾಯಿತು. ಆಗ ಪರಮಹಂಸರು ಮೂವತ್ತು ಮೂರು ವರುಷದವರಾಗಿದ್ದರು; ಅಲ್ಲದೆ, ಹುಚ್ಚರು ಎಂದೂ ಹೆಸರಾಗಿದ್ದರು. ಅವರ ಹುಚ್ಚನ್ನು ಇಳಿಸುವದಕ್ಕಾಗಿಯೇ ಪರಮಹಂಸರ ತಾಯಿ ಮಗನ ಮದುವೆಯನ್ನು ಮಾಡಿದ್ದರು. ಅದರೆ ದೈವೇಚ್ಛೆಯೇ ಬೇರೆಯಾಗಿತ್ತು. ಶ್ರೀರಾಮಕೃಷ್ಣ ಪರಮಹಂಸರು ಕಠೋರವಾದ ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತಿದ್ದರು. ಶಾರದಾದೇವಿ ದೊಡ್ಡವರಾಗಿ ಅತ್ತೆಯ ಮನೆಗೆ ಬರಲು ಒಂದು

ಣಾತ್ರಿ ಪರಮಹಂಸರು ಅವರನ್ನು ಹೀಗೆ ಕೇಳಿದರು; "ನೀನು ನನ್ನನ್ನು ಮದುವೆ ಯಾಗಿರುವಿ; ನನಗೆ ಜಗತ್ತಿನಲ್ಲಿಯ ಸ್ತ್ರೀಯರೆಲ್ಲರೂ ಜಗನ್ಮಾತೆಯ ಪ್ರತಿಬಿಂಬ ವಾಗಿ ಕಾಣುತ್ತಾರೆ. ಆದರೂ ನೀನು ಸಾಮಾನ್ಯ ಜನರಂತೆ ಸಂಸಾರ ಸುಖ ವನ್ನು ಬಯಸಿದರೆ ನಾನು ಅದನ್ನು ಕೊಡಲು ಸಿದ್ಧನಾಗಿದ್ದೇನೆ." ಶಾರದಾದೇವಿ ಯವರು ಒಬ್ಬ ಸಾಮಾನ್ಯ ಸ್ತ್ರೀಯರಾಗಿದ್ದರೆ ಸಾಮಾನ್ಯರಂತೆ ಸಂಸಾರ ಸುಖ ವನ್ನೇ ಬಯಸುತ್ತಿದ್ದರೇನೋ! ಆದರೆ ಮಹಾಮಹಿಮರ ಪತ್ನಿಯಾದ ಶಾರದಾ ದೇವಿಯವರೂ ಮಹಾಮಹಿಮೆಯುಳ್ಳವರೇ ಆಗಿದ್ದರು. ಅದರಿಂದ ಅವರು "ನಾನೇಕೆ ನಿಮ್ಮನ್ನು ನಿಮ್ಮ ಶ್ರೇಷ್ಠ ಆದರ್ಶದಿಂದ ಕೆಳಗಿಳಿಸಲಿ? ನಿಮ್ಮ ಪಾದ ಸೇವೆಯ ಪುಣ್ಯ ನನಗೆ ದೊರೆತರೆ ಸಾಕು; ನನ್ನ ಜನ್ಮ ಸಾರ್ಥಕವಾಗುವದು" ಎಂದು ಹೇಳಿದರು. ಮತ್ತು ಅದರಂತೆಯೇ ಅವರು ನಡೆದರು. ಹೀಗೆ ಮದುವೆ ಯಾಗಿ ಶ್ರೀ ರಾಮಕೃಷ್ಣ ಪರಮಹಂಸರೂ ಶಾರದಾದೇವಿಯವರೂ ಆಜನ್ಮ ಬ್ರಹ್ಮ ಚಾರಿಗಳಾದ ದಂಪತಿಗಳಾದರು! ಅವರ ಪ್ರೇಮಕ್ಕೆ ಅವರ ಬ್ರಹ್ಮಚರ್ಯ ಎಂದೂ ಅಡ್ಡಗಲ್ಲಾಗಿ ನಿಲ್ಲಲಿಲ್ಲ.

ಶ್ರೀ ರಾಮಕೃಷ್ಣರು ಶಾರದಾದೇವಿಯನ್ನು ಜಗನ್ಮಾತೆಯ ಪೀಠದಲ್ಲಿ ಕುಳ್ಳಿರಿಸಿ ಪೂಜಿಸಿದರು. ಶಾರದಾದೇವಿಗೆ ತಲೆನೋವು ಬಂದರೆ ಶ್ರೀರಾಮಕೃಷ್ಣರಿಗೆ ಊಟ ರುಚಿಸುತ್ತಿರಲಿಲ್ಲ. ನಿದ್ರೆ ಬರುತ್ತಿರಲಿಲ್ಲ. ಒಂದು ಸಾರೆ ಯಾವದೋ ಒಂದು ಮಾತಿಗೆ ಶಾರದಾದೇವಿಯವರ ಕಣ್ಣಲ್ಲಿ ನೀರು ಬಂದಿತು. ಅವರು ಶ್ರೀರಾಮಕೃಷ್ಣರ ಕೋಣೆಯಿಂದ ಹಿಂತಿರುಗಿ ಹೊರಟಿದ್ದರು. ಕೂಡಲೇ ರಾಮಕೃಷ್ಣರು "ಆಕೆಯನ್ನು ಕರೆಯಿರಿ. ಆಕೆಯ ಕಣ್ಣಿನಿಂದ ಹನಿಗಳು ಉದುರಿದರೆ ನನ್ನ ವೈರಾಗ್ಯವೆಲ್ಲ ಹಾರಿ ಹೋಗುವದು" ಎಂದು ತಮ್ಮ ಹತ್ತರವಿದ್ದ ಶಿಷ್ಯನಿಗೆ ಹೇಳಿದರು. ಅವರದು ದಿವ್ಯ ಪ್ರೇಮ. ಅದು ಸಂಸಾರಿಗರಿಗೆ ಅರ್ಥವಾಗುವಂಥದಲ್ಲ.

ಶ್ರೀರಾಮಕೃಷ್ಣರು ಇರುವ ವರೆಗೂ ಶಾರದಾದೇವಿಯವರು ಅವರ ಪಾದ ಸೇವೆಯನ್ನು ಮಾಡುತ್ತ ಕಾಲಕಳೆದರು. ಶ್ರೀರಾಮಕೃಷ್ಣರು ೧೮೮೬ರಲ್ಲಿ ತೀರಿ ಕೊಂಡನಂತರ ಭಕ್ತರನ್ನು ಉದ್ಧರಿಸುವ ಹೊಣೆ ಇವರ ಮೇಲೆಯೇ ಬಿದ್ದಿತು. ಅದನ್ನು ಅವರು ಶ್ರೀರಾಮಕೃಷ್ಣರ ಪರವಾಗಿ ನೆರವೇರಿಸುತ್ತ ಬಂದರು. ಲಕ್ಷಾ ವಧಿ ಜನರನ್ನು ಸನ್ಮಾರ್ಗಕ್ಕೆ ಹಚ್ಚಿ ಅವರ ಆತ್ಮೋದ್ಧಾರವನ್ನು ಮಾಡಿದರು. ಇವರು ಪರರ ತಪ್ಪನ್ನೂ ಎಂದೂ ಎಣಿಸುತ್ತಿರಲಿಲ್ಲ. ಎಂಥ ಪಾಪಿಗಳಿದ್ದರೂ ಅವರಿಗೆ ಶಾರದಾದೇವಿಯವರು ಉಪದೇಶ ಮಾಡಿ ಸನ್ಮಾರ್ಗಕ್ಕೆ ಹಚ್ಚುತ್ತಿದ್ದರು.

ಅವರ ಕೃಪೆಯಿಂದಲೇ ಸ್ವಾಮಿ ವಿವೇಕಾನಂದರು ಜಗತ್ತಿನ ತುಂಬ ಸುತ್ತಾಡಿ ಭಾರತದ ಅಧ್ಯಾತ್ಮ ಸಂದೇಶವನ್ನು ಬೀರಲು ಸಾಧ್ಯವಾಯಿತಲ್ಲದೆ ಶ್ರೀರಾಮಕೃಷ್ಣ ಸಂಸ್ಥೆಯೂ ಸ್ಥಾಪಿತವಾಯಿತು. ಶಾರದಾದೇವಿಯವರು ಭರತಖಂಡದಲ್ಲೆಲ್ಲ ತಿರುಗಾಡಿ ತೀರ್ಥಯಾತ್ರೆ ಮಾಡಿದರು. ಲಕ್ಷಾಂತರ ಭಕ್ತರಿಗೆ ದರ್ಶನ ಕೊಟ್ಟು ಆಶೀರ್ವದಿಸಿದರು. ಕೊನೆಗೆ ತಮ್ಮ ೬೭ನೆಯ ವಯಸ್ಸಿನಲ್ಲಿ ಅಂದರೆ ಕ್ರಿ. ಶ. ೧೯೨೦ನೆಯ ಜುಲೈ ೨೦ನೆಯ ದಿನಾಂಕ ಪರಂಧಾಮವನ್ನೈದಿದರು.

ಶ್ರೀ ಶಾರದಾದೇವಿಯವರು ಭಾರತದ ಅತ್ಯುತ್ತಮವಾದ ಆದರ್ಶ ಮಹಿಳೆ. ಶ್ರೀರಾಮಕೃಷ್ಣ ಶಾರದಾದೇವಿಯವರ ದಾಂಪತ್ಯ ಚಿರಂತನವಾದ ಆದರ್ಶದಾಂಪತ್ಯ.

## ೩. ಸರೋಜಿನಿ ನಾಯುಡು

"ಬರೀ ಲಿಪ್‌ಸ್ಟಿಕ್ ಹಚ್ಚಿಕೊಂಡು, ಮುಖಕ್ಕೆ ಬಣ್ಣ, ಪಾವಡರ ಬಳಿದು ಕೊಂಡರೆ, ಸೌಂದರ್ಯ ಎಲ್ಲಿಂದ ಬಂದೀತು! ನಿಜವಾದ ಸೌಂದರ್ಯ ಸರಳತೆ ಯಲ್ಲಿದೆ. ಸ್ತ್ರೀಯರಲ್ಲಿರಬೇಕಾದ ಒಳ್ಳೆಯ ಗುಣಗಳಲ್ಲಿದೆ. ನಿರ್ಮಲ ಮನಸ್ಸು, ಪಾತಿವ್ರತ್ಯ, ಸಾದಾ ಉಡುಪು-ತೊಡಪು, ತುಂಬು ನಗೆಮುಖವಿದ್ದರೆ ಸೌಂದರ್ಯ ಎದ್ದು ಬರುತ್ತದೆ. ಸದ್ಗುಣಗಳೇ ನಿಜವಾದ ಸೌಂದರ್ಯವನ್ನು ಮುಖಕ್ಕೆ ತರ ಬಲ್ಲವು." ಸರೋಜಿನಿ ನಾಯುಡು ಅವರು ಉತ್ತರ ಪ್ರಾಂತದ ರಾಜ್ಯಪಾಲೆಯಾಗ ಸ್ತ್ರೀಯರ ಬಗ್ಗೆ ಹೇಳಿದ



ಮಾತುಗಳಿವು. ಸ್ತ್ರೀಯರು ಅಬಲೆಯರಲ್ಲ. ತಮ್ಮ ಗುಣ, ಶಕ್ತಿಗಳಿಂದ ಮೇಲಿನ ಸ್ಥಾನ ದೊರಕಿಸಬಲ್ಲರೆಂಬುದಕ್ಕೆ ಸರೋಜಿನಿ ನಾಯುಡು ಅವರ ಜೀವನ ಸಾಕ್ಷಿಯಾಗಿದೆ. ಕಾಂಗ್ರೆಸ ಸರಕಾರದಲ್ಲಿ ಪ್ರಾಂತದ ರಾಜ್ಯ ದಾಡಳಿತೆಯ ಅಧಿಕಾರ ವಹಿಸಿದ ಮೊದಲ ನೆಯ ಮಹಿಳೆ ಸರೋಜಿನಿ ನಾಯುಡು.

'ಭಾರತದ ಕಾವ್ಯಾಂಬರದ ಬೆಳು ದಿಂಗಳು' ಎಂದು ಸರೋಜಿನಿಯವರನ್ನು ಕರೆಯುತ್ತಾರೆ. ಈ ಭಾರತದ ಕೋಗಿಲೆಯ ಜೀವನ ತುಂಬಾ ಕಾವ್ಯಮಯ ವಾದುದು. ಇವರು ಹುಟ್ಟಿದ್ದು ೧೮೭೯ರಲ್ಲಿ ಹೈದರಾಬಾದಿನಲ್ಲಿ. ಇವರ ತಂದೆ ಅಘೋರ

ನಾಥ ಚಟ್ಟೋಪಾಧ್ಯಾಯರಿಗೆ ಸರೋಜಿನಿ ವಿಜ್ಞಾನಿಯಾಗಬೇಕೆಂಬ ಹಂಬಲ ಬಹಳಿತ್ತು. ಆದರೆ ಚಿಕ್ಕವರಿದ್ದಾಗಿನಿಂದ ಸರೋಜಿನಿಯವರು ಕವಿತೆಗಳನ್ನು ಬರೆಯಲು ಆರಂಭಿಸಿದರು. ಇವರು ಹನ್ನೊಂದು ವರುಷದವರಿರುವಾಗ, ಎಷ್ಟು ಪ್ರಯತ್ನ ಮಾಡಿದರೂ ಒಂದು ಲೆಕ್ಕ ಬರಲಿಲ್ಲ. ಅಳು ಬಂತು; ಅವರ ಜೊತೆಗೇ ಕವಿತೆಯೂ ಬಂತು ಹದಿಮೂರು ವರ್ಷದವರಿರುವಾಗ, ಎಷ್ಟೋ ಕವನ ಮತ್ತು ನಾಟಿಕಗಳನ್ನು ರಚಿಸಿದ್ದರು. ತಮ್ಮ ಹದಿನಾರನೆಯ ವಯಸ್ಸಿನಲ್ಲಿಯೇ, ಸರೋಜಿನಿಯವರು ಇಂಗ್ಲಂಡಿಗೆ ಹೋಗಿ ಮೂರು ವರುಷ ಅಭ್ಯಾಸ ಮಾಡಿ ಸ್ವದೇಶಕ್ಕೆ ಮರಳಿದರು. ೧೮೯೮ರಲ್ಲಿ ಗೋವಿಂದ ರಾಜುಲು ನಾಯುಡು ಅವರನ್ನು ಇವರು ಲಗ್ನವಾದರು. ಪತಿ ಅಬ್ರಾಹ್ಮಣ, ಆದರೂ ಅಂತರ್ಜಾತೀಯ ವಿವಾಹ ಇವರಿಗೆ ಸೇರಿತು. ಸರೋಜಿನಿದೇವಿಯವರ ಕವಿತೆಗಳು ಹೆಚ್ಚಾಗಿ ಇಂಗ್ಲೀಷಿನಲ್ಲಿವೆ. ಇಂಗ್ಲೀಷ ವಾಙ್ಮಯ ಸರೋವರದಲ್ಲಿ ಅವರು ಗಜರಾಜನಂತೆ ಕೇಲಿಯಾಡಿದ್ದಾರೆ. ಅವರ ಕವನಗಳ ವಿಷಯ ಮಾತ್ರ ಭಾರತ ಜನಜೀವನವು. ಅಂತೆಯೇ ಇವರು ಭಾರತದ ಕವಿಚೂತವನ ಚೈತ್ರ.

ಆ್ಯನಿಬೆಸೆಂಟರ ಹೋಮರೂಲ ಚಳವಳಿ ಸರೋಜಿನಿ ದೇವಿಯವರನ್ನು ಪೂರಾ ಸೆಳೆದು ಬಿಟ್ಟಿತು. ೧೯೧೯ರಲ್ಲಿ ರಾಜಕೀಯ ರಂಗದಲ್ಲಿ ಧುಮುಕಿದರು. ಗಾಂಧೀಜಿಯವರ ಸತ್ಯಾಗ್ರಹ ಚಳವಳಿಯಲ್ಲಿ, ಮಹಾತ್ಮರ ಪಟ್ಟಶಿಷ್ಯೆಯಾದರು. ಗಾಂಧೀಜಿಯವರು ನಿತ್ರಾಣರಾದಾಗ ಅವರ ಸೇವೆ ಮಾಡಲು ಸದಾಸಿದ್ಧರಾಗಿರುತ್ತಿದ್ದರು. ಇವರನ್ನು ನೋಡಿದ ಕೂಡಲೇ "ನನ್ನ ಪ್ರೀತಿಯದಾಯಿ ಬರುತ್ತಾಳೆಂದು ನನಗೆ ಗೊತ್ತಿತ್ತು" ಎಂದು ಗಾಂಧೀಜಿಯವರು ಹೇಳುತ್ತಿದ್ದರು. ೧೯೩೦ರ ಸತ್ಯಾಗ್ರಹದಲ್ಲಿ ೧೯೪೨ರ ಚಳವಳಿಯಲ್ಲಿ ಸರೋಜಿನಿದೇವಿಯವರು ತೋರಿದ ತ್ಯಾಗ, ಹೊತ್ತ ಹೊಣೆ, ಪಟ್ಟ ಪರಿಶ್ರಮ ವರ್ಣಿಸಲ ಸಾಧ್ಯ.

ಸರೋಜಿನಿದೇವಿ ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೇಳಿದ ಒಂದು ಮಾತನ್ನು ನಾವೆಲ್ಲ ನೆನಪಿಟ್ಟುಕೊಳ್ಳಬೇಕಾಗಿದೆ. ಆ ಕಿಡಿನುಡಿ ಹೀಗಿದೆ—

"ಹಳ್ಳಿಗಳಲ್ಲಿ ಪ್ರತಿಮನೆಗಳಲ್ಲಿ ತಿನ್ನಲು ಬೇಕಾದಷ್ಟು ಅನ್ನ, ಮರ್ಯಾದೆ ಮುಚ್ಚಲು ಬೇಕಾಗುವಷ್ಟು ಬಟ್ಟೆ, ಹಸಿವೆಯಿಂದ ಬಳಲಿ ಬೆಂಡಾದ ಕೂಸುಗಳ ಒಣಗಿದ್ದ ತುಟಿ ಒದ್ದೆಯಾಗುವಷ್ಟಾದರೂ ಹಾಲು ಇದ್ದರೇನೇ ನಮ್ಮ ಪ್ರಗತಿ, ನಮ್ಮ ಸ್ವಾತಂತ್ರ್ಯ, ನಮ್ಮ ನಿರ್ವಹಣೆಗಳಿಗೆ ನಿಜವಾದ ಬೆಲೆ ಸಿಕ್ಕಂತೆ."

೧೯೪೯ನೆಯ ಮಾರ್ಚ ತಿಂಗಳ ೨ನೆಯ ದಿನಾಂಕ! ಈ ಶ್ರೇಷ್ಠ ಹೆಣ್ಮಣಿ ಭಾರತದಿಂದ ಮಾಯವಾಯಿತು. ಸ್ತ್ರೀಯರಲ್ಲಿ ಹೀಗೆ ಆದರ್ಶ ಜೀವನ ಕಳೆದ ವರು ಬಹಳ ಕಡಿಮೆ. ಅವರ ದೇಹ ಹೋದರೂ ಅವರ ಬೆಳಕು ಶಾಶ್ವತವಾಗಿದೆ.

**ಪ್ರಶ್ನೆ :**

೧. ಝಾಂಸಿ ಲಕ್ಷ್ಮೀಬಾಯಿಯಲ್ಲಿ ನೀವು ಯಾವ ಗುಣವನ್ನು ಕಾಣುವಿರಿ ?
೨. ಆಕೆ ರಣರಂಗದಲ್ಲಿ ಏಕೆ ಪ್ರಾಣ ಕೊಡಬೇಕಾಯಿತು ?
೩. ಶ್ರೀ ಶಾರದಾ ದೇವಿಯವರು ಕೊಟ್ಟ ಸಂದೇಶವು ಯಾವುದು ?
೪. ಅವರನ್ನು ಜಗನ್ಮಾತೆಯೆಂದು ಜಗತ್ತು ಇಂದು ಏಕೆ ಪೂಜಿಸುತ್ತದೆ ?
೫. ಸರೋಜಿನಿ ನಾಯಡು ಅವರಿಗೆ ಯಾವ ಬಿರುದು ಕೊಡಲ್ಪಟ್ಟಿತ್ತು ? ಏಕೆ ?
೬. ಸರೋಜಿನಿ ನಾಯಡು ಅವರಲ್ಲಿ ಕವಿತ್ವವಲ್ಲದೆ ಬೇರೆ ಯಾವ ಶ್ರೇಷ್ಠಗುಣ ಗಳಿದ್ದವು ?

**ವ್ಯಾಕರಣ :**

## ನಿಷೇಧಾರ್ಥಕ ವಾಕ್ಯಗಳು

(ಅ) ೧. ಅಲ್ಲಿ ಇನ್ನೊಂದು ಆನೆ ಇರಲಿಲ್ಲ.
೨. ಶಾರದಾದೇವಿಗೆ ತಲೆ ನೋವು ಬಂದರೆ ಶ್ರೀರಾಮಕೃಷ್ಣರಿಗೆ ಊಟ ರುಚಿಸುತ್ತಿರಲಿಲ್ಲ.
೩. ಸ್ತ್ರೀಯರು ಅಬಲೆಯರಲ್ಲ.

ಈ ವಾಕ್ಯಗಳಲ್ಲಿ ಒಂದನೆಯ ವಾಕ್ಯದಲ್ಲಿ 'ಆನೆಗಳು ಇರಲಿಲ್ಲ' ಎಂದರೆ ಆನೆಗಳು ಇರುವ ಕ್ರಿಯೆ ನಡೆಯಲಿಲ್ಲ ಎಂದು ಅರ್ಥ. ಅದರಂತೆ ಎರಡನೆಯ ವಾಕ್ಯದಲ್ಲಿ ರುಚಿಸುವ ಅಂದರೆ ನಾಲಗೆಗೆ ಸವಿ ಹತ್ತುವ ಕ್ರಿಯೆ ನಡೆಯಲಿಲ್ಲ ಎಂದು ಅರ್ಥವಿದೆ. ಮೂರನೆಯ ವಾಕ್ಯದಲ್ಲಿ ಸ್ತ್ರೀಯರು ಶಕ್ತಿಹೀನರು ಎಂದು ಹೇಳುವ ಮಾತು ಸರಿಯಲ್ಲ ಎಂಬ ಅರ್ಥವಿದೆ.

ಹೀಗೆ 'ಒಂದು ಕ್ರಿಯೆ ನಡೆಯುವದಿಲ್ಲ' 'ನಡೆಯಲಾರದು' 'ನಡೆಯಬಾರದು' ಎಂಬ ಅರ್ಥವನ್ನು ಸೂಚಿಸುವ ವಾಕ್ಯಗಳನ್ನು **ನಿಷೇಧಾರ್ಥಕ** ವಾಕ್ಯಗಳೆಂದು ಕರೆಯುವರು.

ಅಂಗೀಕಾರಾರ್ಥಕ ಮತ್ತು ನಿಷೇಧಾರ್ಥಕ ವಾಕ್ಯಗಳು ಒಂದು ಕ್ರಿಯೆ ನಡೆಯುವದು ಅಥವಾ ನಡೆಯುವದಿಲ್ಲ ಎಂಬ ಬಗ್ಗೆ ಒಂದು ನಿಶ್ಚಿತವಾದ ಸಂಗತಿಯನ್ನು ಹೇಳುವ ದರಿಂದ ಅವು ನಿಶ್ಚಯಾರ್ಥಕ ವಾಕ್ಯಗಳು ಆಗುತ್ತವೆ.

(ಬ) ಇಲ್ಲಿಯ ವರೆಗೆ ನೀವು ಓದಿದ ಪಾಠಗಳಲ್ಲಿಯ ಐದು ನಿಷೇಧಾರ್ಥಕ ವಾಕ್ಯ ಗಳನ್ನು ಹುಡುಕಿ ಬರೆಯಿರಿ.

# ೮. ಜೀನ ಒಕ್ಕಲಿಗ

[ನಾಗಪ್ಪನ ಸ್ವಭಾವ ಚಿತ್ರವನ್ನು ಕೊಡುವ ಸಣ್ಣ ಕತೆಯಿದು. ನಾಗಪ್ಪ ಮೊದಲು ಬಹಳ ಜೀನನಾಗಿದ್ದರೂ ಆ ಮೇಲೆ ನಡೆದ ಘಟನೆಯಿಂದ ಅವನ ಸ್ವಭಾವ ಹೇಗೆ ಬದಲಾಯಿತೆಂಬುದನ್ನು ಸಿಂಪಿ ಲಿಂಗಣ್ಣನವರು ಸ್ವಾರಸ್ಯವಾಗಿ ಬರೆದಿದ್ದಾರೆ. ನಮ್ಮ ಹಳ್ಳಿಯ ಜೀವನದ ಹಿನ್ನೆಲೆಯಲ್ಲಿ ಈ ಕತೆ ಪೋಷಿತವಾಗಿದೆ.]

* * *

ನಮ್ಮೂರಿನಲ್ಲಿ ಹಿಂದಕ್ಕೆ ನಾಗಪ್ಪನೆಂಬ ಒಬ್ಬ ಒಕ್ಕಲಿಗನಿದ್ದನು. ಅವನಿಗೆ ಕಾಳು, ಕಣಿಕೆ ಹೊಲದಿಂದ ಸಾಕಷ್ಟು ಬರುತ್ತಿದ್ದವು. ಹಯನಕ್ಕೆ ಎರಡು ಆಕಳು ಇದ್ದವು. ಅಷ್ಟೆಲ್ಲ ಅನುಕೂಲತೆ ಇದ್ದರೂ ಅವನು ಹೊಟ್ಟೆಗೆ ಪೂರ್ಣ ತಿನ್ನುವವ ನಲ್ಲ. ಹೆರವರಿಗೂ ಕೊಡುವವನಲ್ಲ. ಅವನು ಎಂಜಲುಗೈಯಿಂದ ಕಾಗೆಯನ್ನು ಸಹ ಹೊಡೆಯುತ್ತಿದ್ದಿಲ್ಲ. ಅದಕ್ಕಾಗಿ ಅವನಿಗೆ ಜನರೆಲ್ಲರೂ ಜೀನ ನಾಗಪ್ಪ ಎಂದು ಕರೆಯುತಿದ್ದರು.

ಎಳ್ಳ ಅಮಾಸಿಗೆ ಹೊಲದೊಳಗಿನ ಲಕ್ಷ್ಮೀದೇವಿಗೆ ನೈವೇದ್ಯ ಮಾಡಿ ಬರು ವುದು ಒಕ್ಕಲಿಗರಲ್ಲಿ ರೂಢಿ. ಆಗ ಮಾರ್ಗಶೀರ್ಷಮಾಸವಾದ್ದರಿಂದ ಜೋಳ, ಹತ್ತಿ, ಗೋದಿ ಮೊದಲಾದ ಬೆಳೆಗಳು ಸಾಕಷ್ಟು ಎದ್ದು ಬಂದು ಚೆಂದ ಕಾಣುತ್ತವೆ. ಒಕ್ಕಲಿಗರು ಬೆಳೆಯಿಂದ ಬೀಗಿದ ಹೊಲಕ್ಕೆ ಚರಗ (ಎಡೆ) ಒಯ್ಯುವಾಗ ಬಂಧು ಬಳಗದವರನ್ನೂ, ನೆರೆಹೊರೆಯ ಭಿಡೆಯುವವರನ್ನೂ ಕರೆದೊಯ್ದು ಅವರೊಡನೆ ಊಟ ಮಾಡುತ್ತಾರೆ. ಮನೆಯವರಷ್ಟೇ ಹೊಲಕ್ಕೆ ಹೋಗುವದು ಎಳ್ಳ ಅಮಾ ಸಿಯ ದಿನವಂತೂ ಸಾಧ್ಯವೇ ಇಲ್ಲ. 'ಎಳ್ಳ ಅಮಾಸಿಗೆ ಉಳ್ಳಿಕ್ಕೆ ಕರೆಯದವ ರಾರು ?' ಎನ್ನುವ ಮಾತು ಹುಟ್ಟಿಕೊಂಡಿರುವದಕ್ಕೆ ಅದೇ ಕಾರಣವಾಗಿದೆ.

ಒಮ್ಮೆ ಎಳ್ಳ ಅಮಾಸಿಯ ದಿವಸ ನಾಗಪ್ಪನು ಹೆಂಡತಿಗೆ ಹೇಳಿ ಅರ್ಧಸೇರು ಬೀಸಿಸಿದನು. ಗಿರ್ಧಸೇರು ಕುಟ್ಟಿಸಿದನು. ಚಿಕ್ಕದೊಂದು ಮಡಿಕೆಯಲ್ಲಿ ಅಡಿಗೆ ಮಾಡಿಸಿದನು. ನೆರೆಹೊರೆಯವರೆಲ್ಲ ತಮ್ಮ ತಮ್ಮ ಹೊಲಗಳಿಗೆ ಹೊರಟುಹೋದ ಬಳಿಕ, ನಾಗಪ್ಪನ ಚರಗದ ಬುಟ್ಟಿಯು ಹೊರಬಿದ್ದಿತು. ಯಾರನ್ನೂ ಸಂಧಿಸದೆ ಹಿಂದೆ ಹಿಂದೆ ನಡೆಯುತ್ತ ನಾಗಪ್ಪನು ದೂರದ ಹೊಲವನ್ನು ತಲುಪಿದನು. ಅಟ್ಟಿ ಅಂದರೆ ಮಂಚಿಕೆಯ ಕೆಳಗೆ ನೈವೇದ್ಯದ ಅಡಿಗೆಯನ್ನೂ, ನೀರು ತುಂಬಿದ ಮಗಿ ಯನ್ನೂ ಇರಿಸಿ ನೆಲಕ್ಕೆ ಒಂದಿಷ್ಟು ಮಗ್ಗುಲೂರಿದನು. ಮಧ್ಯಾಹ್ನದ ಸಮಯ

ಅಡವಿಯ ನೆರಳು, ಸೂಸುವ ಸುಳಿಗಾಳಿ ಕೇಳಬೇಕೇ! ನಾಗಪ್ಪನಿಗೆ ಕ್ಷಣದಲ್ಲಿಯೇ ಗಡದ್ದು ನಿದ್ರೆಹತ್ತಿತು.

ನಾಗಪ್ಪನು ಎಚ್ಚರಿಲ್ಲದ ಸುಳಿವು ಕಂಡು ಗುಬ್ಬಿ-ಕಾಗೆಗಳು ನೆರೆದು ನೈವೇದ್ಯದ ಅಡಿಗೆಯುಳ್ಳ ಮಡಕೆಗೆ ಬಾಯ ಹಾಕಿದವು. ಮಗಿಯನ್ನು ಓರೆಮಾಡಿ ಮುಕ್ಕು ನೀರನ್ನೆಲ್ಲ ಚೆಲ್ಲಿಬಿಟ್ಟವು. ಅಷ್ಟರಲ್ಲಿ ಎಲ್ಲಿಯದೋ ಹದ್ದು ಬಂದು ಎರಗಿ, ಅನ್ನದ ಮಡಿಕೆಯನ್ನೇ ಎತ್ತಿಕೊಂಡು ನೆಗೆಯಿತು. ಆ ಗದ್ದಲದಿಂದ ನಾಗಪ್ಪನಿಗೆ ಎಚ್ಚರಾಯಿತು. ಎದ್ದು ನೋಡುತ್ತಾನೆ—ಎಲ್ಲವೂ ಬರಿದೋ ಬರಿದು! "ನಾನು ಇನ್ನೇನು ಉಣ್ಣಲಿ? ಇನ್ನೇನು ತಿನ್ನಲಿ? ಎಂದು ಚಿಂತಿಸುತ್ತ ಮೋರೆ ಬಣಗಿಸಿಕೊಂಡು ಅಟ್ಟದ ಕೆಳಗೇ ಕುಳಿತುಬಿಟ್ಟನು.

ಆ ಸಮಯವನ್ನರಿತು, ಎಲ್ಲಮ್ಮ ದೇವಿಯು ಜೋಗಿಣಿಯ ವೇಷ ತೊಟ್ಟು "ಉಧೋ! ಉಧೋ!" ಎನ್ನುತ್ತ ನಾಗಪ್ಪನ ಬಳಿಗೆ ಬಂದು ಭಿಕ್ಷೆ ಬೇಡಿದಳು. ನಾಗಪ್ಪನ ಹೊಟ್ಟೆ ಮೊದಲೇ ಹಸಿದು ಉರಿಯುತ್ತಿತ್ತು! ಅಡಿಗೆಯೆಲ್ಲ ಹದ್ದು-ಕಾಗೆಗಳ ಪಾಲಾಯಿತೆಂದು ಸಂತಾಪದಿಂದ ಉರಿಯುತ್ತಿದ್ದನು!



ಜೋಗಿಣಿ ಬೇರೆ "ಉಧೋ! ಉಧೋ!!" ಎನ್ನುತ್ತ ಕೀಸರಿಟ್ಟಿದ್ದರಿಂದ ನಾಗಪ್ಪನ ತಲೆ ತಿರುಗಿತು. "ಉಧೋ! ಉಧೋ!! ಎಂದರೆ ನೀಡುವಂತಿಲ್ಲ"

ವೆಂದು ಎದ್ದೇಳಲಾರದೆ ಕುಳಿತಲ್ಲಿಯೇ ನುಡಿದನು. ಆದರೆ ಆ ಜೋಗಿಣಿ ಅಷ್ಟಕ್ಕೇ ಬಿಡುವಳೇ ? ಮತ್ತೆ ಕಿರಚಿದಳು—“ಉಧೋ! ಉಧೋ!!” ಆಕೆ ಸ್ಥಳ ಬಿಟ್ಟು ಕದಲಲೇ ಇಲ್ಲ. ನಾಗಪ್ಪನಿಗೆ ಸಿಟ್ಟು ತಾಳಲಾರದಾಯಿತು. ಎದ್ದವನೇ ಆಕೆಯನ್ನು ಬಡಿಯಲು ಮುಂದುವರಿದನು. ಆಕೆ ತಪ್ಪಿಸಿಕೊಳ್ಳಲು ಹೆಜ್ಜೆ ಕಿತ್ತಿದಳು. ನಾಗಪ್ಪ ನಾದರೋ ಅದೇ ರಭಸದಲ್ಲಿ ಆಕೆಯನ್ನು ಬೆನ್ನಟ್ಟಿ ಓಡಿ ದುಂಡಿಯಗಿಡ, ಜೋಳದ ದಂಟು ಎನ್ನದೆ ಕಿತ್ತುಕೊಳ್ಳುತ್ತ ಆಕೆಯನ್ನು ಒಳಿತಾಗಿ ಥಳಿಸಿದನು.

“ಬಿಡೆಯಬೇಡ ಧರ್ಮಾತ್ಮಾ! ನಾನು ಬಂದ ಹಾದಿಯಿಂದ ಹೊರಟು ಹೋಗುತ್ತೇನೆ.” ಎಂದು ಜೋಗಿಣಿಯು ಅಂಗಲಾಚಿ ಕೇಳಿಕೊಂಡಳು.

ನಾಗಪ್ಪನಿಗೆ ಅದೇನೂ ಕೇಳಿಸಲಿಲ್ಲ. ಹಸಿದಂಟುಗಳಿಂದ ಆಕೆಯ ಬೆನ್ನ ಮೇಲೆ ಬಾರಿಸುತ್ತ ಹೊಲದ ಸೀಮೆಯನ್ನು ದಾಟಿಸಬೇಕೆಂದು ಬೆನ್ನಟ್ಟಿದನು. ನಾಗಪ್ಪನ ಏಟು ತಪ್ಪಿಸಿಕೊಳ್ಳಲಿಕ್ಕಾಗದೆ ಜೋಗಿಣಿಯು ಓಡುತ್ತ ಜೋಳದ ಹೊಲವನ್ನು ದಾಟಿದಳು. ಓಡಾಡಿ ದಣಿದ ಆಕೆಯು ಕಣ್ಣೊರಿಸಿಕೊಂಡಿದ್ದರಿಂದ ಜೋಳದ ಬೆಳೆಯ ಮೇಲೆಲ್ಲ ಕಾಡಿಗೆ ಉದುರಿತು. ಬೆನ್ನ ಹಿಂದೆ ನಾಗಪ್ಪನನ್ನು ಕಂಡವಳೇ ಮತ್ತೆ ನಾಗಾಲೋಟ ಕೊಟ್ಟು ಹತ್ತಿಯ ಹೊಲ ಸೇರಿದಳು. ಅಲ್ಲಿ ಉಬ್ಬಸಬಡುತ್ತ ಕೈ ಕೊಡವಿದ್ದರಿಂದ ಹತ್ತಿಯ ಬೆಳೆಯ ಮೇಲೆಲ್ಲ ಕೈಮೇಲಿನ ಗಂಧ ಕಳಚಿತು. ಅಷ್ಟಕ್ಕೇ ನಿಲ್ಲುವಂತಿಲ್ಲ. ನಾಗಪ್ಪನ ಕೈಗೆ ಸಿಗಲಾರದೆ ಗೋದಿಯ ಹೊಲವನ್ನೆಲ್ಲ ಓಡಾಡಿದ್ದರಿಂದ ಜೋಗಿಣಿಯು ಉಡಿಯೊಳಗಿನ ಭಂಡಾರವೆಲ್ಲ ಗೋದಿಯ ಬೆಳೆಯ ಮೇಲೆ ಚೆಲ್ಲಾಡಿತು. ಕಡಲೆಯ ಹೊಲವೊಂದು ದಾಟಿದರೆ ನಾಗಪ್ಪನ ಕೈಯೊಳಗಿಂದ ಪಾರಾದಂತಾಗುವದೆಂದು ಮುಂದೋಟ ಕೊಟ್ಟು ಏದುತ್ತ ಕಡಲೆಯ ಹೊಲದಲ್ಲಿ ಹಣೆಯ ಮೇಲಿನ ಬೆವರು ಸವರಿಕೊಳ್ಳುವಾಗ ಅಲ್ಲಿ ಕುಂಕುಮ ತೂರಾಡಿತು. ಜೋಗಿಣಿ ಹೊಲದಾಟಿ ಹೋದಳು. ಪೀಡೆ ತೊಲಗಿತೆಂದು ನಾಗಪ್ಪನೂ ಮರಳಿ ಮಂಚದ ಕಡೆಗೆ ಬಂದನು.

ಆಯುತ ಹೊತ್ತಿನಲ್ಲಿ ಸಾಮಗ್ರಿಯೆಲ್ಲ ಚೆಲ್ಲಾಡಿದ್ದರಿಂದ ನಾಗಪ್ಪನು ಲಕ್ಷ್ಮಿಯ ಪೂಜೆಯನ್ನೂ ಮಾಡಲಿಲ್ಲ. ನೈವೇದ್ಯವನ್ನೂ ತೋರಿಸಲಿಲ್ಲ. ನೀರೂ ಅರ್ಪಿಸಲಿಲ್ಲ. ತಾನೂ ಉಣ್ಣಲಿಲ್ಲ. ದಣಿದು ಸೋತು ಕಂಗಾಲಾಗಿ ಕಾಲು ಎಳೆಯುತ್ತ ಮನೆಗೆ ಮರಳಿದನು. ನಾಗಪ್ಪನು ಮನೆಯನ್ನು ತಲಪುವದಕ್ಕೆ ಎರಡು ತಾಸು ರಾತ್ರಿ ಆಗಿತು .

ಮರುದಿನ ನಾಗಪ್ಪನು ಹೊಲಕ್ಕೆ ಹೋಗಿ ಜೋಳದ ಬೆಳೆಯಲ್ಲಿ ಅಡ್ಡಾಡ ತೊಡಗಿದನು. ಆದರೆ ಅದೇನದು ? ಜೋಳದ ಬೆಳೆಗೆಲ್ಲ ಕಾಡಿಗೆ ರೋಗ ತಗುಲಿದೆ ! ಹತ್ತು ಖಂಡಗ ಜೋಳವೆಲ್ಲ ಕಾಡಿಗೆಯಾಗಿ ಬಿಟ್ಟಿತ್ತು ! ಅದೇ ಚಿಂತೆ ಯಲ್ಲಿ ಹತ್ತಿಯ ಹೊಲಕ್ಕೆ ಹೋದರೆ ಅಲ್ಲಿಯೂ ಅದೇ ಹಾಡು ! ಹತ್ತು ನಗ ಹತ್ತಿಯೆಲ್ಲ ಬಂಜೆಯಾಗಿ ನಿಂತಿದೆ ! ಅದೋ ಅಲ್ಲಿ ಗೋದಿಯ ಬೆಳೆಯೆಲ್ಲ ಇಟ್ಟಂಗಿ ರೋಗದಿಂದ ಸೊಳ್ಳಾಗಿ ಹೋಗಿದೆ ! ಇಲ್ಲಿ ಕಡಲೆಯ ಗಿಡಗಳಿಗೆಲ್ಲ ಕೆಂಪುರೋಗ ತಗಲಿದ್ದರಿಂದ ಕೊಳ್ಳಿ ಹಾಯ್ದು ಬಿಟ್ಟಿವೆ ! ಇನ್ನೇನು ?

ಮನೆಗೆ ಬಂದವನೇ ನಾಗಪ್ಪನು ಕಂಬಳಿಯ ಮುಸುಕು ಹಾಕಿ, ಜಗುಲಿಗೆ ತಲೆಕೊಟ್ಟು ಮಲಗಿಬಿಟ್ಟನು. ಹೆಂಡತಿ ಬಂದು ಊಟಕ್ಕೆಬ್ಬಿಸಿದರೆ—'ಇನ್ನೇನು ಉಣ್ಣಲಿ ? ಇನ್ನೇನು ತಿನ್ನಲಿ ?' ಎಂದು ಪ್ರತಿ ನುಡಿಯುವನು.

ಹತ್ತು ಖಂಡಗ ಜೋಳವೆಲ್ಲ ಬತ್ತಗಾಡಿಗೆ ।
ಹತ್ತು ನಗ ಹತ್ತಿಯೆಲ್ಲ ಬಂಜೆಯಾಯಿತಲ್ಲ ॥
ಹತ್ತು ಖಂಡಗ ಗೋದಿಯೆಲ್ಲ ಸೊಳ್ಳಹಾಯ್ತಲ್ಲ ।
ಹತ್ತು ಖಂಡಗ ಕಡಲೆಯೆಲ್ಲ ಕೊಳ್ಳಿಹಾಯ್ತಲ್ಲ ॥
ಎಂದು ಬಡಬಡಿಸುವನು.

ಆ ಘಟನೆಯಿಂದ ನಾಗಪ್ಪಗೆ ಒಳಿತಾಗಿ ಬುದ್ಧಿ ಬಂದಿತು. ಏನಂದರೆ "ಭೂಮಿತಾಯಿ ಕೊಟ್ಟ ಬೆಳೆಯನ್ನು ಭೂಮಿ ತಾಯಿಗೆ ನೈವೇದ್ಯ ಮಾಡದಿದ್ದರೆ ಆಕೆ ಅಸಮಾಧಾನ ಪಡುವಳು. ಆಕೆಯ ಮಕ್ಕಳೊಂದಿಗೆ ಹಂಚಿಕೊಂಡು ತಿನ್ನ ದಿದ್ದರೆ ಆಕೆ ಕೋಪಗೊಳ್ಳುವಳು. ಆಕೆಯ ಅಸಮಾಧಾನ-ಕೋಪಗಳಿಂದಲೇ ಬೆಳೆಗಳಿಗೆ ಕಾಡಿಗೆ, ಇಟ್ಟಂಗಿ, ಭಂಡಾರ ಮೊದಲಾದ ರೋಗಗಳು ತಗುಲಿ, ಕೈಗೆಬಂದ ತುತ್ತು ಬಾಯಿಗೆ ಬಾರದಂತಾಗುವದು. ಮಳೆ ಎಳೆಸಿ, ಬರಬಿದ್ದು ಗೋಳಾಟವಾಗುವದು. ಆದ್ದರಿಂದ ಇನ್ನು ಮೇಲೆ ತಿರಕೊಂಡು ತಂದವರೂ ಕರಕೊಂಡು ತಿನ್ನಬೇಕು.

ಅಂದಿನಿಂದ ನಾಗಪ್ಪನ ಜೀನತನ ಕಡಿಮೆಯಾಗುತ್ತ ಬಂದು, ಉದಾರ ನಾಗಿ ಬಿಟ್ಟನು. ಅವನಿಗೆ ಜೀನ ಒಕ್ಕಲಿಗನೆಂದು ಈಗ ಯಾರೂ ಕರೆಯುವದಿಲ್ಲ.

**ಶಬ್ದಾರ್ಥ :**

ನೆಗೆ– ಜಿಗಿ; ಬಾರಿಸು– ಹೊಡೆ; ನಾಗಾಲೋಟ– ತೀವ್ರ ಓಡಿ ಹೋಗುವುದು; ಕೊಡಹು– ಝಾಡಿಸು; ಏದು– ತೇಕು; ಕಳಚು–ಬೀಳು.

**ಪ್ರಶ್ನೆ:**

೧. ಜನರು ನಾಗಪ್ಪನಿಗೆ ಜೀನನಾಗಪ್ಪನೆಂದು ಏಕೆ ಕರೆಯುತ್ತಿದ್ದರು ?
೨. 'ಎಳ್ಳಮಾಸಿಗೆ ಉಳ್ಳಿಕ್ಕೆ ಕರೆಯದವರಾರು' ಎನ್ನುವ ಮಾತು ಏಕೆ ಹುಟ್ಟಿಕೊಂಡಿದೆ ?
೩. ನಾಗಪ್ಪನಿಗೆ ಗಡಪ್ಪು ನಿದ್ರೆ ಹತ್ತಿದಾಗ ಏನಾಯಿತು ?
೪. ಜೋಗಿಣಿಗೆ ನಾಗಪ್ಪನು ಒಳಿತಾಗಿ ಏಕೆ ಥಳಿಸಿದನು ?
೫. ಜೋಗಿಣಿ ಓಡಿಹೋಗುವಾಗ ಏನೇನು ಆಯಿತು ?
೬. ನಾಗಪ್ಪನು ಹೊಲಕ್ಕೆ ಹೋದಾಗ ಏನು ಕಂಡನು ?
೭. ಬೆಳೆಗಳಿಗೆ ರೋಗಗಳು ಬರಲು ಕಾರಣವೇನೆಂದು ನಾಗಪ್ಪ ತಿಳಿದುಕೊಳ್ಳುತ್ತಾನೆ ?
೮. ಈ ಕಥೆಯ ನೀತಿಯ ಮಾತು ಯಾವುದು ?

## ಪುನರವಲೋಕನ

ನೀವು ಈಗ ವಾಕ್ಯಗಳಲ್ಲಿಯ ಪ್ರಕಾರಗಳನ್ನು ಅರಿತುಕೊಂಡಿರುವಿರಿ. ಕೆಳಗೆ ಕೊಟ್ಟ ವಾಕ್ಯಗಳ ಪ್ರಕಾರಗಳನ್ನು ಗುರುತಿಸಿರಿ.

೧. "ಅದೃಷ್ಟವು ಅಶಕ್ತರ ಅಂಗೈ ಗೆರೆಗಳಲ್ಲಿರುವದಿಲ್ಲ."
೨. "ಬರೀ ಲಿಪ್‌ಸ್ಟಿಕ್ ಹಚ್ಚಿಕೊಂಡು, ಮುಖಕ್ಕೆ ಬಣ್ಣ, ಪಾವಡರ ಬಳಿದುಕೊಂಡರೆ, ಸೌಂದರ್ಯ ಎಲ್ಲಿಂದ ಬಂದೀತು !"
೩. ನಿಜವಾದ ಸೌಂದರ್ಯ ಸರಳತೆಯಲ್ಲಿದೆ.
೪. ಮನೆಯವರಷ್ಟೇ ಹೊಲಕ್ಕೆ ಹೋಗುವದು ಎಳ್ಳ ಅಮಾಸಿಯ ದಿನ ಸಾಧ್ಯವೇ ಇಲ್ಲ.
೫. "ನಾನು ಇನ್ನೇನು ಉಣ್ಣಲಿ ? ಇನ್ನೇನು ತಿನ್ನಲಿ ?"
೬. ಇಂದು ಲಕ್ಕುಂಡಿಯನ್ನು ನೋಡಲಿಕ್ಕೆ ಹೋಗೋಣ.
೭. ದಾನಚಿಂತಾಮಣಿಯಾದ ಅತ್ತಿಮಬ್ಬೆಯು ಧಲ್ಲಪನ ಮಗನಾದ ನಾಗದೇವನ ಹೆಂಡತಿ.
೮. ಪೆಟ್ರೋಲು ಕಲ್ಲೆಣ್ಣೆಯ ಉಪತೈಲವೆಂಬುದು ನಿಮಗೆ ಗೊತ್ತಿದೆಯೇ ?
೯. ಹತ್ತು ಖಂಡಗ ಗೋದಿಯೆಲ್ಲ ಸೊಳ್ಳ ಹಾಯ್ತಲ್ಲ.
೧೦. ಈ ಯಕ್ಷಗಾನ ನಾಟಕವು ಈಗಿನ ನಾಟಕವೃಕ್ಷಗಳ ತಾಯಿಬೇರೆಂಬುದನ್ನು ಮರೆಯಲಾಗದು.

## ಪ್ರಬಂಧ ಪಾಠ ೧.

## ಪ್ರಸಂಗಗಳ ವರ್ಣನೆ

(ಅ) ಜೀವನದಲ್ಲಿ ಪ್ರತಿಯೊಬ್ಬ ಮನುಷ್ಯನೂ ಎಷ್ಟೋ ಪ್ರಸಂಗಗಳನ್ನು ಎದುರಿಸ ಬೇಕಾಗುತ್ತದೆಂಬುದನ್ನು ನೀವು ಬಲ್ಲಿರಿ. ಈ ಪಾಠದಲ್ಲಿ ಬಂದ ಜೀನ ಒಕ್ಕಲಿಗನ ಕಥೆಯು ಇಂಥ ಒಂದು ಪ್ರಸಂಗವನ್ನೇ ಬಣ್ಣಿಸುತ್ತದೆ. ಯಾವದೇ ಪ್ರಸಂಗದಲ್ಲಿ ಮನುಷ್ಯನು ಆ ಪ್ರಸಂಗಕ್ಕೆ ತಕ್ಕ ರೀತಿಯಲ್ಲಿ ನಡೆದುಕೊಳ್ಳದಿದ್ದರೆ ಅವನು ಕೊನೆಗೆ ಪಶ್ಚಾತ್ತಾಪ ಪಡಬೇಕಾಗುತ್ತದೆ. ಇಲ್ಲಿ ನಾಗಪ್ಪನು ಜೋಗತಿಯ ಪ್ರಸಂಗದಲ್ಲಿ ಅವಿವೇಕವನ್ನು ತೋರಿಸಿದ್ದರಿಂದ ತನ್ನ ಬೆಳೆಯನ್ನೆಲ್ಲ ಕಳೆದುಕೊಂಡನು.

ಪ್ರತಿಯೊಂದು ಪ್ರಸಂಗವು ಮನುಷ್ಯನ ಮನಸ್ಸಿನ ಮೇಲೆ ಜೀವನದ ಮೇಲೆ ಪರಿಣಾಮ ಮಾಡುತ್ತದೆ. ಆದ್ದರಿಂದ ಮನುಷ್ಯನ ಜೀವನದಲ್ಲಿ ಬರುವ ಪ್ರಸಂಗಗಳ ಬಗ್ಗೆ ಅವುಗಳ ಪರಿಣಾಮಗಳ ಬಗ್ಗೆ ಪ್ರಸಂಗಗಳಲ್ಲಿ ಮನುಷ್ಯನು ಹೇಗೆ ನಡೆಯಬೇಕೆಂಬ ಬಗ್ಗೆ ನಾವು ಅರಿತಿರುವದು ಅವಶ್ಯ.

ಜೀವನದಲ್ಲಿ ಎಷ್ಟೋ ಪ್ರಸಂಗಗಳನ್ನು ನಾವು ನೋಡಬೇಕಾಗುತ್ತದೆ. ಎಷ್ಟೋ ಪ್ರಸಂಗಗಳನ್ನು ನಾವು ಎರಡನೆಯವರಿಗೆ ಬಣ್ಣಿಸಿ ಹೇಳಬೇಕಾಗುತ್ತದೆ. ಆದ್ದರಿಂದ ಪ್ರಸಂಗಗಳ ವರ್ಣನೆಯ ಬಗ್ಗೆ ನಾವು ಕಲಿಯುವದು ಅವಶ್ಯ.

(ಬ) ಪ್ರತಿಯೊಂದು ಪ್ರಸಂಗದಲ್ಲಿಯೂ ಕೆಲವು ಮಹತ್ವದ ಅಂಶಗಳಿರುತ್ತವೆ. ಅವುಗಳನ್ನು ಕಂಡುಹಿಡಿದು ಅವುಗಳನ್ನು ನೆನಪಿಡಬೇಕು. ಆ ಅಂಶಗಳನ್ನು ನಾವು ನಮಗೆ ಹೇಗೆ ಬೇಕೋ ಹಾಗೆ ವಿಸ್ತರಿಸಿ ಇಲ್ಲವೆ ಸಂಕ್ಷೇಪಿಸಿ ಬರೆಯುವದರಿಂದ ನಾವು ಒಂದು ಪ್ರಸಂಗದ ವರ್ಣನೆಯನ್ನು ಮಾಡಲು ಸಾಧ್ಯವಾಗುತ್ತದೆ. ' ಜೀನ ಒಕ್ಕಲಿಗ ' ಎಂಬ ಕಥೆಯಲ್ಲಿ ಕೆಳಗಿನ ಮುಖ್ಯ ಅಂಶಗಳಿವೆ.

(೧) ನಾಗಪ್ಪನ ಜೀನತನ, (೨) ಎಳ್ಳಅಮಾಸಿಗೆ ಚರಗ ಒಯ್ಯುವ ರೂಢಿ (೩) ಜೀನತನದಿಂದಲೇ ಎಳ್ಳ ಅಮಾಸಿಯನ್ನು ಮಾಡಬೇಕೆಂದು ನಾಗಪ್ಪನ ಇಚ್ಛೆ. (೪) ಅವನು ಹೊಲಕ್ಕೆ ಬಂದಾಗ ನಿದ್ದೆ ಬರುತ್ತದೆ. ನಿದ್ದೆ ಹತ್ತಿದಾಗ ಗುಬ್ಬಿ, ಕಾಗಿ, ಹದ್ದುಗಳು ಬಂದು ಅವನು ತಂದ ನೈವೇದ್ಯವನ್ನು ತಿಂದು ನೀರ ಮಗಿಯನ್ನು ಉರುಳಿಸಿ ಹೋಗುತ್ತವೆ. (೫) ಅವನನ್ನು ಪರೀಕ್ಷಿಸಲು ಎಲ್ಲಮ್ಮನು ಜೋಗಿಣಿಯ ವೇಷದಿಂದ ಬರುತ್ತಾಳೆ. ನಾಗಪ್ಪನು ಆಕೆಗೆ ನೀಡದೆ ಅವಳನ್ನು ಹೊಡೆದು ಓಡಿಸುತ್ತಾನೆ. (೬) ತನ್ನ ಜೀನತನದ ಪರಿಣಾಮವನ್ನು ಕಂಡು ಅವನು ಪಶ್ಚಾತ್ತಾಪ ಪಡಬೇಕಾಗುತ್ತದೆ.

ಇಷ್ಟು ಅಂಶಗಳು ಈ ಪ್ರಸಂಗದಲ್ಲಿ ಬಂದಿವೆ. ಇವುಗಳನ್ನೇ ನಿಮ್ಮ ಮಾತುಗಳಲ್ಲಿ ಬಣ್ಣಿಸಿದರೆ ನೀವು ಈ ಪ್ರಸಂಗದ ವರ್ಣನೆ ಮಾಡಿದಂತಾಗುತ್ತದೆ.

(ಕ) ಈಗಾಗಲೇ ನೀವು ಓದಿದ ಅಕ್ಷಯ ಪಾತ್ರೆ ಎಂಬ ಕತೆಯಲ್ಲಿ ಅಕ್ಷಯ ಪಾತ್ರೆ ಆ ದಂಪತಿಗಳಿಗೆ ದೊರೆತ ಪ್ರಸಂಗವನ್ನು ಬಣ್ಣಿಸಿರಿ.

(ಡ) ಕೆಳಗೆ ಕೊಟ್ಟ ಪ್ರಸಂಗಳಲ್ಲಿ ಬೇಕಾದ ಒಂದರ ವರ್ಣನೆಯನ್ನು ಬರೆಯಿರಿ.

(೧) ಗೋಕಾಕರು ಶ್ರಾವಣೂರಿಗೆ ಬರುವಾಗ ಮನೆಯಲ್ಲಿ ಸಿಕ್ಕ ಪ್ರಸಂಗ.
(೨) ಸುಭಾಸಚಂದ್ರರು ತಮ್ಮ ತಂದೆಯ ಅಂತ್ಯಾವಸ್ಥೆಯನ್ನು ಕೇಳಿ ಭಾರತಕ್ಕೆ ಧಾವಿಸಿ ಬಂದ ಪ್ರಸಂಗ.
(೩) ನಿಮ್ಮ ಮನಸ್ಸಿನಿಂದ ಅಳಿಸಿ ಹೋಗದೇ ಇದ್ದ ಒಂದು ಪ್ರಸಂಗ.
(೪) ನೀವು ಒಬ್ಬ ಮಹಾಪುರುಷನನ್ನು ಕಂಡ ಪ್ರಸಂಗ.
(೫) ನೀವು ಒಂದು ಬಯಲಾಟವನ್ನು ನೋಡಲಿಕ್ಕೆ ಹೋದ ಪ್ರಸಂಗ.
(೬) ಕಲ್ಲಿಣ್ಣೆಯನ್ನು ದೊರಕಿಸುವದಕ್ಕಾಗಿ ನೀವು ಸೀದಾ ಅಂಗಡಿಯ ಮುಂದೆ ನಿಂತ ಪ್ರಸಂಗ.



# ೯. ಚಾರ್ಲ್ಸ್ ಡಾರ್ವಿನ್

[ಇಂದು ಡಾರ್ವಿನ್‌ನ ಪರಿಣಾಮವಾದ ಅಥವಾ ವಿಕಾಸವಾದವನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ ಈಗ ನೂರು ವರ್ಷಗಳ ಹಿಂದೆ ಅವನು ಮೊಟ್ಟಮೊದಲಿಗೆ ತನ್ನ ಸಿದ್ಧಾಂತವನ್ನು ಮಂಡಿಸಿದಾಗ ಜಗತ್ತಿನ ಧಾರ್ಮಿಕರೆಲ್ಲ ಅವನನ್ನು 'ನಾಸ್ತಿಕ' 'ಪಾಖಂಡಿ' ಎಂದು ಹೇಳಿದರು. ಅವನು ಬರೆದ "ಪ್ರಾಣಿಜಾತಿಗಳ ಉಗಮ" "ಮಾನವನ ಅವತಾರ" ಮೊದಲಾದ ಪುಸ್ತಕಗಳು ಆಗ ಜಗತ್ತಿನ ತುಂಬ ಬಿರುಗಾಳಿಯನ್ನೇ ಎಬ್ಬಿಸಿದವು. "ಮಾನವನು ಮಂಗನಿಂದ ಇಳಿದು ಬಂದಿದ್ದಾನೆ." ಎಂಬ ಡಾರ್ವಿನ್‌ನ ಸಿದ್ಧಾಂತವಂತೂ ಬಹಳ ಜನರನ್ನು ಕೆರಳಿಸಿ ಬಿಟ್ಟಿತು. ಆದರೂ ಡಾರ್ವಿನ್ ಯಾವದಕ್ಕೂ ಬೆದರಲಿಲ್ಲ. ಶಾಂತರೀತಿಯಿಂದ ತನ್ನ ಕಾರ್ಯವನ್ನು ಕೊನೆಗಾಣಿಸಿ ಯಶಸ್ಸು ಪಡೆದನು. ಹೀಗೆ ಶಾಂತನಾಗಿಯೇ ಕ್ರಾಂತಿಯನ್ನು ಮಾಡಿದ ಡಾರ್ವಿನ್‌ನ ಸಂಕ್ಷಿಪ್ತ ಪರಿಚಯ ಇಲ್ಲಿದೆ.]

★ ★ ★

ಕ್ರಿ. ಶ. ೧೮೬೦ನೆಯ ವರ್ಷ ಜೂನ ತಿಂಗಳ ಕೊನೆಯ ದಿನ. ಆಕ್ಸ‌ಫರ್ಡಿನಲ್ಲಿ ವಿಖ್ಯಾತ ಬ್ರಿಟಿಶ್ ಅಸೋಶಿಯೇಶನ್‌ದ ಸಭೆ ಕೂಡಿತ್ತು. ಸಭೆ ಕೂಡಿದ ಕಾರಣ ಡಾರ್ವಿನ್‌ನ "ಪ್ರಾಣಿ ಜಾತಿಗಳ ಉಗಮ" ಎಂಬ ಮಹಾಗ್ರಂಥದ ಜಾಹೀರು ಪ್ರಕಟನೆ—ಸಭೆಗೆ ಡಾರ್ವಿನ್‌ನು ಬಂದಿದ್ದಿಲ್ಲ. ಅವನ ಉಗ್ರ ಪ್ರತಿವಾದಿಗಳು ಅವನ ವಿರುದ್ಧ ಅಂದರೆ (ಅವನ ಸಿದ್ಧಾಂತದ ವಿರುದ್ಧ)

ದೊಡ್ಡ ದಾಳಿಯನ್ನೇ ಮಾಡಲಿಪ್ಪರು. ಈ ದಾಳಿಯ ದಂಡನಾಯಕನು ಆಕ್ಸ ಫರ್ಡದ ಮುಖ್ಯ ಗುರು ಬಿಶಪ್ ವಿಲ್ಬರ ಫೋರ್ಸನೇ ಆಗಿದ್ದನು. ವ್ಯಾಸಪೀಠದ ಮೇಲೆ ಡಾರ್ವಿನ್‌ನ ಸಮರ್ಥನೆಗಾಗಿ ಹೂಕರ, ಹಕ್ಸಲಿ ಇವರೀರ್ವರೂ ಮಹಾ ವಿಜ್ಞಾನಿಗಳು ಸಜ್ಜಾಗಿ ಕುಳಿತಿದ್ದರು. ಸಭೆಯ ವಾತಾವರಣದಲ್ಲಿ ಉತ್ಸುಕತೆಯ ಮಿಂಚು ಸಂಚರಿಸಿತು. ಎಲ್ಲೆಡೆಯಲ್ಲಿಯೂ ಆವೇಶ ಉದ್ರೇಕಗಳು ಅತಿರೇಕವಾಗಿ ಕಂಡು ಬರುತ್ತಿದ್ದವು.



ಸಭೆಯು ಆರಂಭವಾಯಿತು. ಬಿಶಪ್ ವಿಲ್ಬರ ಫೋರ್ಸನು ಸಮಯಕ್ಕೆ ಸರಿಯಾಗಿ ಭಾಷಣಕ್ಕೆ ಎದ್ದುನಿಂತು ಪೂರ್ತಿ ಅರ್ಧ ತಾಸು ಅಪ್ರತಿಮ ಆವೇಶ ಮತ್ತು ಆಡಂಬರದೊಡನೆ ಮಾತನಾಡಿದನು. ತನ್ನ ಭಾಷಣವು ಮುಗಿಯಲು ಬಂದಾಗ ನಂಜಿನ ನಗೆಯಲ್ಲಿ ಅಣಕ ಮಾಡುತ್ತ ತನ್ನ ಪಕ್ಕದಲ್ಲಿ ಕುಳಿತ ಹಕ್ಸಲಿಯ ಕಡೆಗೆ ಹೊರಳಿ ಹೀಗೆ ಕೇಳಿದನು. "ಸ್ವಾಮಿ, ತಾವು ಮಂಗನಿಂದ ಇಳಿದು ಬಂದಿರುವಿರೆಂದು ಸಾಧಿಸುತ್ತೀರಿ. ಈ ಕಪಿವಂಶವು ಬಂದದ್ದು ತಮ್ಮ ಅಜ್ಜನ 'ಕುಲದಿಂದಲೋ ಅಜ್ಜಿಯ ಕುಲದಿಂದಲೋ?" ಕೊನೆಗೆ ಡಾರ್ವಿನ್‌ನ ಅಭಿಪ್ರಾಯಗಳು ಬೈಬಲದ ದೈವೀ ವಾಣಿಗೆ ವಿರುದ್ಧವಾಗಿವೆ ಎಂದು ಸಾರಿ ತನ್ನ ಭಾಷಣ ಮುಗಿಸಿದನು. ಅನೇಕ ಧರ್ಮ ಗುರುಗಳು ಚಪ್ಪಾಳೆ ಹಾಕಿದರು. ಹಲವು ಭಾವಿಕ ಮಹಿಳೆಯರು ಹರ್ಷದಿಂದ ಕರವಸ್ತ್ರಗಳನ್ನು ಹಾರಾಡಿಸಿದರು.

ಬಿಶಪ್‌ನ ಭೀಷಣ ಭಾಷಣ ಮುಗಿದ ಕೂಡಲೇ ಸಭೆಯಲ್ಲೆಲ್ಲ ಹಕ್ಸಲೆಯ ಹೆಸರಿನ ಕೂಗುಗಳ ಕಲ್ಲೋಲವೆದ್ದಿತು. ಅಧ್ಯಕ್ಷರ ಕರೆ ಬಂದೊಡನೆ ಹಕ್ಸಲಿ ತನ್ನ ಎಂದಿನ ಹರಿತವಾದ ಶೈಲಿಯಲ್ಲಿ ಭಾಷಣವನ್ನು ಆರಂಭಿಸಿ, ಬಿಶಪ್ ವಿಲ್ಬರ ಫೋರ್ಸನು ಈ ವಾದವಿವಾದದಲ್ಲಿ ಬಾಯಿ ಹಾಕಲು ಎಷ್ಟು ಅಯೋಗ್ಯನೂ ಅನಧಿಕಾರಿಯೂ ಆಗಿರುವನೆಂಬುದನ್ನು ಸಿದ್ಧಪಡಿಸಿದನು. ಕೊನೆಗೆ—"ನಾನು ಮಂಗನನ್ನೇ ನನ್ನ ಪೂರ್ವಜನೆಂದು ಒಪ್ಪಿಕೊಳ್ಳುವದು ಲೇಸೆಂದು ಎಣಿಸುವನು. ಆ ಉಗಮದಿಂದ ಹುಟ್ಟಿ ಬಂದೆನೆಂಬುದಕ್ಕೆ ನನಗೆ ನಾಚಿಕೆ ಎನಿಸುವದಿಲ್ಲ. ಆದರೆ

ಯಾವನು ತನ್ನ ಸಂಸ್ಕೃತಿಯ ಮತ್ತು ವಾಗ್ಮಿತೆಯ ಶಕ್ತಿಯನ್ನೆಲ್ಲ ಮೂಢಭಾವನೆಯ ಹಾಗು ಅಸತ್ಯದ ಸೇವೆಗಾಗಿ ದುರುಪಯೋಗಕ್ಕೆ ಒಡ್ಡಿದನೋ ಅಂಥವನಿಂದ ಹುಟ್ಟಿದವನೆಂದು ಅಂದರೆ ನನಗೆ ನಾಚಿಕೆಯೇ ಅನಿಸೀತು."

ಈ ಮಾತು ಮುಗಿದಪ್ಪೇ ದಡ ಸಭೆಯಲ್ಲಿ ಒಮ್ಮೆಲೇ ಮಹಾ ಕೋಲಾಹಲ ವೆದ್ದಿತು! ಕೆಲವರು ಎದ್ದು ನಿಂತು ನಿಷೇಧದಿಂದ ಕೂಗಾಡಿದರು. ಕೆಲವರು ಸಂತೋಷದಿಂದ ಕೈ ತಟ್ಟಿ ಕೇಕೆ ಹಾಕಿದರು. ಒಬ್ಬ ಮಹಿಳೆಯು ಅಲ್ಲಿಯೇ ಆನಂದಾತಿರೇಕದಿಂದ ಎಚ್ಚರದಪ್ಪಿ ಬಿದ್ದು ಎಂದೂ ಇಲ್ಲದ ಮುಂದೂ ಇಲ್ಲದ ಖ್ಯಾತಿಯನ್ನು ಗಳಿಸಿದಳು. ಧರ್ಮ ಗುರುಗಳ ಕರಿನಿಲುವಂಗಿಗಳ ಕಾರ್ಮೋಡ ಗಳಿಂದ ಅತ್ಯಂತ ಅಪವಿತ್ರ ಸಿಟ್ಟಿನ ಸಿಡಿಲು, ಗುಡುಗು ಕೇಳಬರತೊಡಗಿದವು.

ಆಗ ಡಾರ್ವಿನ್ನನು ಎಲ್ಲಿ ಇದ್ದನು ? ಏನು ಮಾಡುತ್ತಿದ್ದನು ? ಒಂದು ಹಳ್ಳಿ ಯಲ್ಲಿ ಕುಳಿತು ತನ್ನ ಸಂಶೋಧನೆಯನ್ನು ಮುಂದುವರಿಸಿದ್ದನು. ಡಾರ್ವಿನ್ ಚಿಕ್ಕವನಿದ್ದಾಗ ಮುಂದೆ ಅವನು ಪುಸ್ತಕ ಬರೆದು ಬಿರುಗಾಳಿಯನ್ನೇ ಎಬ್ಬಿಸುವ ನೆಂದು ಯಾರೂ ನಂಬಿರಲಿಲ್ಲ. ಕ್ರಿ. ಶ. ೧೮೦೯ರಲ್ಲಿ ಡಾ. ರಾಬರ್ಟ ಡಾರ್ವಿ ನ್‌ನಿಗೆ ಶ್ರೂಸಬರಿ ಎಂಬಲ್ಲಿ ಚಾರ್ಲಸ್ ಡಾರ್ವಿನ್ ಎಂಬ ಮಗನು ಹುಟ್ಟಿದನು. ಚಾರ್ಲಸ್ ಡಾರ್ವಿನ್‌ನ ಅಜ್ಜನಾದ ಇರ್ಯಾಸ್ಮಸ್ ಡಾರ್ವಿನ್‌ನು ಸುಪ್ರಸಿದ್ಧ ಡಾಕ್ಟರ ನಾಗಿದ್ದನಲ್ಲದೆ " ಪರಿಣಾಮವಾದ ಅಥವಾ ವಿಕಾಸವಾದ"ವನ್ನು ನಂಬಿದ್ದನು. ಅವನ ಈ ನಂಬಿಗೆಯು ಬರೀ ನಂಬಿಗೆಯಾಗಿಯೇ ಉಳಿದಿತ್ತು. ಯಾಕಂದರೆ ಅವನ ಕಾಲ ಮಾನದ ಅನೇಕ ಶಾಸ್ತ್ರಜ್ಞರು ಸೃಷ್ಟಿಯ ಪೃಥಗುತ್ಪತ್ತಿಯ ಸಿದ್ಧಾಂತವನ್ನು ನಂಬಿದ್ದರು. ಸಿದ್ಧಾಂತವು ಹೇಳುವದೇನಂದರೆ ಪ್ರತಿಯೊಂದು ಜೀವ ಜಾತಿಯೂ ಪ್ರಾಣಿವರ್ಗವೂ ಈಗ ಇದ್ದ ಸ್ಥಿತಿಯಲ್ಲಿಯೂ, ರೀತಿಯಲ್ಲಿಯೂ ಅನಾದಿಯಿಂದಲೂ ಪ್ರತ್ಯೇಕವಾಗಿಯೇ ಉತ್ಪನ್ನವಾಗಿದ್ದು ಹಾಗೆಯೇ ಅವಿಚ್ಛಿನ್ನವಾಗಿ ಅದು ನಡೆದು ಬಂದಿದೆ. ಈ ಸಿದ್ಧಾಂತವನ್ನು ಅಲ್ಲಗಳೆಯುವದೆಂದರೆ ಆಗ ಧರ್ಮ, ನೀತಿಗಳನ್ನು ಅಲ್ಲಗಳೆದಂತೆಯೇ ಆಗುತ್ತಿತ್ತು. ಈ ಸಿದ್ಧಾಂತವನ್ನು ಚಾರ್ಲಸ್ ಡಾರ್ವಿನ್‌ನು ವಿಕಾಸವಾದ ಪರಿಣಾಮವಾದವೆಂಬ ತನ್ನ ಸಿದ್ಧಾಂತವನ್ನು ಪ್ರತಿಪಾದಿಸಿ ಜಗತ್ತಿ ನಲ್ಲಿಯೇ ದೊಡ್ಡ ಬಿರುಗಾಳಿಯನ್ನೇ ಎಬ್ಬಿಸಿದನು. ಮೇಲೆ ವರ್ಣಿಸಲ್ಪಟ್ಟ ಸಭೆಯು ಡಾರ್ವಿನ್‌ನ ಗ್ರಂಥಗಳಿಂದ ಹೊರಟ ಆಗಿನ ಕಾಲದ ಬಿರುಗಾಳಿಯ ಒಂದು ದೃಶ್ಯಮಾತ್ರವೇ ಆಗಿದೆ.

ಡಾರ್ವಿನ್‌ನು ಸಣ್ಣವನಿದ್ದಾಗ ಯಾರೂ ಅವನು ಮುಂದೆ ಇಂಥ ಕ್ರಾಂತಿ ಕಾರನಾಗುವನೆಂದು ತಿಳಿದಿರಲಿಲ್ಲ. ಡಾರ್ವಿನ್ನನ ತಂದೆ ಅವನನ್ನು ತನ್ನಂತೆಯೇ ಡಾಕ್ಟರನನ್ನಾಗಿ ಮಾಡಲು ನಿಶ್ಚಯಿಸಿದ್ದನು. ಆದರೆ ಡಾರ್ವಿನ್ನನ ಒಲವುಗಳನ್ನು ಅವನು ಗುರುತಿಸಿರಲಿಲ್ಲ. ಡಾರ್ವಿನ್‌ನಲ್ಲಿ ಮೊದಲಿನಿಂದಲೂ ನಿಸರ್ಗದ ಕಡೆಗೆ, ಗಿಡ–ಬಳ್ಳಿಗಳ ಕಡೆಗೆ ಹೆಚ್ಚು ಲಕ್ಷ್ಯವಿತ್ತು. ಅದೇ ಅವನನ್ನು ಮುಂದೆ ದೊಡ್ಡ ಕ್ರಾಂತಿಕಾರಕ ಸಿದ್ಧಾಂತವನ್ನು ಪ್ರತಿಪಾದಿಸಲು ಹಚ್ಚಿತ್ತು. ಈ ಒಲವಿನ ಬಗ್ಗೆ ಡಾರ್ವಿನ್ ಹೀಗೆ ಹೇಳಿದ್ದಾನೆ:

“ನಾನು ಶಾಲೆಗೆ ಹೋಗಲು ತೊಡಗುವಷ್ಟರಲ್ಲಿ, ನಿಸರ್ಗದ ಚರಿತ್ರೆ ನಿರೀಕ್ಷಣೆಯು ಮತ್ತು ವಸ್ತುಸಂಗ್ರಹದ ನನ್ನ ಅಭಿರುಚಿಯು ಚೆನ್ನಾಗಿ ಬೆಳೆದಿತ್ತು. ಗಿಡ–ಬಳ್ಳಿಗಳ ಗುರುತು ಹಚ್ಚಿ ಅವುಗಳ ಹೆಸರುಗಳನ್ನು ನಾನು ಕಲಿತೆನು. ಎಲ್ಲ ಬಗೆಯ ವಸ್ತುಗಳನ್ನು ಕಲೆಹಾಕುವ ಚಟವು ನನ್ನಲ್ಲಿ ಬಲಿಯಿತು..............ಈ ಸಂಗ್ರಹದ ಆವೇಶ ನನ್ನಲ್ಲಿ ಬಲು ಬಲಿಷ್ಠವಾಗಿತ್ತು. ಬಲಿಷ್ಠವಿದ್ದಂತೆಯೇ ಅದು ಕೇವಲ ನನಗೆ ಸಹಜವಾಗಿತ್ತು.” ಇದು ಅವನು ಶಾಲೆಯಲ್ಲಿದ್ದಾಗಿನ ಮಾತು. ಅವನು ೧೮೨೮ರಲ್ಲಿ ಕೇಂಬ್ರಿಜ್‌ದ ಕ್ರೈಸ್ತ ಕಾಲೇಜನ್ನು ಸೇರಿದನು. ಅಲ್ಲಿಯೂ ಪದವಿಯನ್ನು ಪಡೆಯಲು ಅಗತ್ಯವಿದ್ದಷ್ಟೇ ಅಭ್ಯಾಸ ಮಾಡಿ ಉಳಿದ ವೇಳೆಯನ್ನೆಲ್ಲ ಶಿಕಾರಿ, ಕುದುರೆಯ ಸವಾರಿ ಹೆಚ್ಚಾಗಿ ಕ್ರಿಮಿ–ಕೀಟಕಗಳ ಸಂಗ್ರಹದ ಕಾರ್‍ಯದಲ್ಲಿ ಕಳೆಯುತ್ತಿದ್ದನು. ಅದರ ಬಗ್ಗೆ ಅವನು ಹೀಗೆ ಹೇಳಿದ್ದಾನೆ—“ಕೇಂಬ್ರಿಜ್‌ದಲ್ಲಿಯ ಯಾವ ವ್ಯಾಸಂಗವೂ ಈ ಕೀಟಕ ಸಂಗ್ರಹದ ಕಾರ್ಯದಷ್ಟು ಉತ್ಸಾಹ ವನ್ನುಂಟು ಮಾಡುತ್ತಿರಲಿಲ್ಲ. ಬರೇ ಕಲೆಹಾಕುವದೊಂದೇ ನನ್ನ ಆವೇಶ ವಾಗಿತ್ತು................ಅಂದಿನ ನನ್ನ ಉತ್ಸಾಹದ ಆವೇಶವು ಹೇಗಿತ್ತೆಂಬುದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತೇನೆ. ಒಂದು ದಿನ, ಒಂದು ಹಳೆಯ ಮರದ ತೊಗಟೆಯನ್ನು ಹರಿದು ತೆಗೆಯಲಾಗಿ ಒಳಗೆ ಎರಡು ಅಪರೂಪದ ಕೀಟಕ ಗಳನ್ನು ಕಂಡೆನು; ಒಂದೊಂದು ಕೈಯಲ್ಲಿ ಒಂದೊಂದನ್ನು ಕೂಡಲೇ ಎತ್ತಿ ಕೊಂಡೆನು. ಆಗ ಮೂರನೆಯದೊಂದನ್ನು ನೋಡಿದೆನು. ಅದು ಹೊಸ ಜಾತಿಯ ಕೀಟಕವಿತ್ತು. ಅದನ್ನು ಕಳೆದುಕೊಳ್ಳುವದು ಹೇಗೆ ? ಆಗ ನನ್ನ ಬಲಗೈಯೊಳಗಿನ ಕೀಟಕವನ್ನು ಬಾಯಿಯಲ್ಲಿ ಹಾಕಿಕೊಂಡೆನು. ಮೂರನೆಯದರ ಕಡೆಗೆ ಕೈ ಚಾಚುವಷ್ಟರಲ್ಲಿ, ಬಾಯಿಯಲ್ಲಿಯ ಆ ಕೀಟಕವು ಒಂದು ಅತಿ ಉಗ್ರವಾದ ಉರಿಯುವ ದ್ರವವನ್ನು ಚೆಲ್ಲಿತು. ಅದರಿಂದ ನನ್ನ ನಾಲಿಗೆಯೆಲ್ಲ ಸುಟ್ಟು

ಹೋಯಿತು! ಆ ನೋವಿನ ಉರಿಗೆ ಆ ಕೀಟಕವನ್ನೇ ಉಗುಳಿಬಿಟ್ಟೆನು. ಇತ್ತ ಈ ಗಡಿಬಿಡಿಯಲ್ಲಿ ಮೂರನೆಯ ಕೀಟಕವನ್ನು ಕಳೆದುಕೊಂಡೆನು" ಹೀಗಿತ್ತು ಚಾರ್ಲಸನ ಆವೇಶ.

ಕೇಂಬ್ರಿಜ್‌ದಲ್ಲಿದ್ದಾಗಲೇ ಚಾರ್ಲಸನು ಹಂಬೋಲ್ಟ್ ಎಂಬ ನಿಸರ್ಗ ವಿಮರ್ಶಕನ "ವೈಯಕ್ತಿಕ ಕಥನ" ಎಂಬ ಪುಸ್ತಕವನ್ನು ಓದಿದನು. ಕೂಡಲೇ ಸಸ್ಯ ಮತ್ತು ಜೀವ ಶಾಸ್ತ್ರಗಳ ಅಭ್ಯಾಸದ ಉತ್ಸಾಹವು ಅವನಲ್ಲಿ ಭುಗಿಲೆದ್ದಿತು. ಅದೇ ಸಮಯಕ್ಕೆ ಅವನು ತನ್ನ ಕಾಲೇಜಿನ ಸಸ್ಯಶಾಸ್ತ್ರದ ಪ್ರಾಧ್ಯಾಪಕನಾದ ಹೆನ್‌ಸ್ಲೋ ಎಂಬವನ ಗೆಳೆತನ ಮಾಡಿದನು. ಈ ಹೆನ್‌ಸ್ಲೋ ಡಾರ್ವಿನ್ನನನ್ನು ಭೂಗರ್ಭಶಾಸ್ತ್ರದ ಉಪನ್ಯಾಸಗಳನ್ನು ಕೇಳಲು ಮನವೊಲಿಸಿದನು. ಮುಂದೆ ಹೆನ್‌ಸ್ಲೋನ ಒತ್ತಾಯದಿಂದ ಚಾರ್ಲಸ್ ಡಾರ್ವಿನ್ನನು ೧೮೩೧ನೆಯ ಡಿಸೆಂಬರ ೨೭ನೆಯ ದಿನ ಬಿಗ್ಲೇ ಹಡಗವನ್ನೇರಿ ದಕ್ಷಿಣ ಅಮೇರಿಕೆಗೆ ಪ್ರಯಾಣ ಮಾಡಿದನು. ಬಿಗ್ಲೇ ಹಡಗವು ದಕ್ಷಿಣ ಅಮೇರಿಕೆ ಹಾಗು ಆಸ್ಟ್ರೇಲಿಯಾ ಖಂಡಗಳನ್ನು ಸುತ್ತಾಡಿ ಬಂದಿತು. ಈ ಪ್ರಯಾಣದಲ್ಲಿ ಡಾರ್ವಿನ್‌ನು ಭೂಗರ್ಭಶಾಸ್ತ್ರ, ಪ್ರಾಣಿ ಶಾಸ್ತ್ರಗಳ ಪರಿಪೂರ್ಣ ಜ್ಞಾನವನ್ನು ಪಡೆದನಲ್ಲದೆ, ತನ್ನ ವಿಚಾರಗಳನ್ನು ಪರಿಣಾಮವಾದದ ಕಡೆಗೆ ಹೊರಳಿಸಿದನು.

ಪರ್ಯಟನ ಮುಗಿಸಿ ಮರಳಿದ ಮೇಲೆ ೧೮೩೯ ರಲ್ಲಿ ತನ್ನ ಸೋದರಮಾವನ ಮಗಳಾದ ಎಮ್ಮಾ ವೆಜ್‌ವುಡ್‌ಳನ್ನು ಮದುವೆಯಾಗಿ ಲಂಡನ್‌ದಲ್ಲಿ ಇರಹತ್ತಿದನು. ಆದರೆ ಪಟ್ಟಣದ ಗದ್ದಲವು ಅವನಿಗೆ ಸಹಿಸಲಸಾಧ್ಯವಾಗಿ ೧೮೪೨ರಲ್ಲಿ ಕೆಂಟ ಪ್ರಾಂತದ ಡೌನೆ ಎಂಬ ಪ್ರಶಾಂತವಾದ ಹಳ್ಳಿಗೆ ಹೋಗಿ ವಾಸಮಾಡಿ ತನ್ನ ಪರಿಣಾಮವಾದದ ಬಗ್ಗೆ ವಿಚಾರಿಸಹತ್ತಿದನು. ಆಗಲೇ ಅವನು ತನ್ನ ಸಿದ್ಧಾಂತ ವನ್ನು ರೂಪಿಸಿದ್ದನು. ಆದರೂ ಅದರ ಬಗ್ಗೆ ಇನ್ನೂ ವಿಚಾರಿಸುತ್ತಲೇ ಇದ್ದನು. ಹೀಗೆ ಅವನು ಎಷ್ಟು ದಿನ ವಿಚಾರಿಸುತ್ತಿದ್ದನೋ ಏನೋ ೧೮೫೮ರಲ್ಲಿ ಒಂದು ದಿನ ಮಲಾಯಾದಿಂದ ವಾಲೇಸ ಎಂಬ ವಿಖ್ಯಾತ ಬ್ರಿಟಿಶ್ ನಿಸರ್ಗ ಸಂಶೋಧಕನು ತನ್ನ ಒಂದು ಪ್ರಬಂಧವನ್ನು ಡಾರ್ವಿನ್‌ನಿಗೆ ಕಳಿಸಿದನು. ಅದರಲ್ಲಿ ಅವನು ಬರೆದ ವಿಚಾರಗಳು ಡಾರ್ವಿನ್‌ನ ವಿಚಾರಗಳಂತೆಯೇ ಇದ್ದವು. ಅವುಗಳನ್ನು ಓದಿ ನೋಡಿ ಡಾರ್ವಿನ್ನನಿಗೆ ಆಶ್ಚರ್ಯವೂ ದಿಗ್ಭ್ರಮೆಯೂ ಆಯಿತು. ಆದರೆ ಡಾರ್ವಿನ್‌ನು ಇದರಿಂದ ಅಸೂಯೆ ಪಡದೆ ತನ್ನ ಹಾಗು ವಾಲೇಸನ ಸಿದ್ಧಾಂತ

ಗಳನ್ನು ಒಂವೇ ಹೊತ್ತಿಗೆ ಪ್ರಕಟಿಸಿದನು. ಕೂಡಲೆ ಯುರೋಪಖಂಡದಲ್ಲೆಲ್ಲ ಬಿರುಗಾಳಿಯೆದ್ದಿತು. ಆದರೆ ಡಾರ್ವಿನ್‌ನು ಅದನ್ನು ಲಕ್ಷಿಸದೆ ತನ್ನ ಸಿದ್ಧಾಂತಕ್ಕಾಗಿ ಹೊಸ ಹೊಸ ಆಧಾರಗಳನ್ನು ಹುಡುಕುತ್ತ ಅವುಗಳನ್ನು ಪ್ರಕಟಿಸುತ್ತಲೇ ಇದ್ದನು. ಹೀಗೆ ೧೮೮೨ರಲ್ಲಿ ಎಪ್ರಿಲ ೧೯ ದಿನಾಂಕದವರೆಗೆ ಅವನು ಸತ್ಯಸಂಶೋಧನೆಯನ್ನು ಮಾಡುತ್ತಲಿದ್ದು ಅಂದು ತನ್ನ ಇಹಲೋಕ ಯಾತ್ರೆಯನ್ನು ಮುಗಿಸಿದನು.

**ಶಬ್ದಾರ್ಥ :**

ವ್ಯಾಸಪೀಠ- ಸಭೆಯಲ್ಲಿ ಮುಖ್ಯ ಅತಿಥಿಗಳು ಕೂಡುವ, ಮಾತನಾಡುವ ಸ್ಥಳ; ಅಣಕವಾಡು- ಹಂಗಿಸು; ಅನಧಿಕಾರಿ- ಹಕ್ಕು, ಅಧಿಕಾರ ಇಲ್ಲದವ; ಇಹಲೋಕ ಯಾತ್ರೆಯನ್ನು ಮುಗಿಸು-ಮರಣವನ್ನು ಹೊಂದು; ಆಕ್ಸ್‌ಫರ್ಡ- ಇಂಗ್ಲಂಡಿನ ಪ್ರಸಿದ್ಧ ವಿಶ್ವವಿದ್ಯಾಲಯದ ಪಟ್ಟಣ.

**ಪ್ರಶ್ನೆ :**

೧. ಆಕ್ಸ್‌ಫರ್ಡಿನಲ್ಲಿ ಕೂಡಿದ ಸಭೆಯಲ್ಲಿ ಏನೇನು ನಡೆಯಿತು ? ಅಷ್ಟು ಕೋಲಾಹಲ ಉಂಟಾಗಲು ಕಾರಣವೇನು ?

೨. ಚಾರ್ಲಸ್ ಡಾರ್ವಿನ್‌ನು ಪ್ರತಿಪಾದಿಸಿದ ಸಿದ್ಧಾಂತವಾವುದು ? ಪೃಥಗುತ್ಪತ್ತಿ ಯೆಂದರೇನು ?

೩. ಡಾರ್ವಿನ್‌ನಲ್ಲಿ ಕ್ರಿಮಿಕೀಟಕಗಳ ಸಂಗ್ರಹ ಪ್ರವೃತ್ತಿ ಬಲವಾಗಿತ್ತೆಂಬುದನ್ನು ನೀವು ಹೇಗೆ ತಿಳಿಯುವಿರಿ ? ಉದಾಹರಣೆ ಸಹಿತ ಹೇಳಿರಿ.

೪. ಡಾರ್ವಿನ್‌ನು ತನ್ನ ಸಿದ್ಧಾಂತವನ್ನು ಏಕೆ ಮತ್ತು ಯಾವಾಗ ಪ್ರಕಟಿಸಿದನು ? ವಾಲೇಸನ ಸಿದ್ಧಾಂತವನ್ನು ಪ್ರಕಟಿಸಿ, ಅವನು ತನ್ನಲ್ಲಿರುವ ಯಾವ ಗುಣವನ್ನು ವ್ಯಕ್ತಮಾಡಿದನು.

**ವ್ಯಾಕರಣ:**

**ರೂಢನಾಮ**

(ಅ) ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಪದಗಳನ್ನು ನಿರೀಕ್ಷಿಸಿರಿ.

(೧) ಆಕೆಯನ್ನು **ಕುದುರೆ**ಯ ಸವಾರಿಯಲ್ಲಿ ಸರಿಗಟ್ಟುವವರು ಯಾರೂ ಇರಲಿಲ್ಲ.

(೨) ಅದೊಂದು ಚಿಕ್ಕ **ಗ್ರಾಮ**.

(೩) ಡಾರ್ವಿನ್‌ನಲ್ಲಿ ಮೊದಲಿನಿಂದಲೂ **ಗಿಡಬಳ್ಳಿ**ಗಳ ಕಡೆಗೆ ಲಕ್ಷವಿತ್ತು.

ಮೇಲಿನ ವಾಕ್ಯಗಳಲ್ಲಿಯ ಕುದುರೆ, ಗ್ರಾಮ, ಗಿಡಬಳ್ಳಿ ಈ ದಪ್ಪಕ್ಕರದ ಪದಗಳು ನಾಮಪದಗಳಾಗಿವೆ. ಇವುಗಳನ್ನು **ರೂಢನಾಮ**ಗಳೆಂದು ಕರೆಯುತ್ತಾರೆ. ಯಾಕಂದರೆ ಇವು ಆ ವಸ್ತುಗಳಿಗೆ ಬಹು ಪ್ರಾಚೀನ ಕಾಲದಿಂದಲೂ ರೂಢಿಯಾಗಿ ಬಂದಿರುವ ಹೆಸರನ್ನು ಹೇಳುತ್ತವೆ.

ಪದಾರ್ಥಗಳಿಗೆ ರೂಢಿಯಿಂದ ಬಂದ ಹೆಸರುಗಳೇ ರೂಢನಾಮಗಳು.

(ಬ) ಈ ಪಾಠದಲ್ಲಿ ಬಂದ ಹತ್ತು ರೂಢನಾಮಗಳನ್ನು ಗುರುತಿಸಿ ಬರೆಯಿರಿ.

**ಟಿಪ್ಪಣೆ:**

ವಿಕಾಸವಾದ ಅಥವಾ ಪರಿಣಾಮವಾದ- ಜೀವಿವಂಶಗಳು ಪ್ರತ್ಯೇಕ ಪ್ರತ್ಯೇಕವಾಗಿ ಸೃಷ್ಟಿಯಾಗದೆ ಹಿಂದಿನ ರೂಪಗಳಿಂದಲೇ ಕೆಲವು ಮಾರ್ಪಾಟುಗಳೊಡನೆ ವಿಕಾಸವಾಗುವದು.

# ೧೦. ಪಂಪಾಪತಿಯ ಕರುಣೆ

[ವಿಜಯನಗರ ಸಾಮ್ರಾಜ್ಯ ಸ್ಥಾಪನೆಯು ಕನ್ನಡಿಗರ ಚಿರಂಜೀವ ಪಟ್ಟವಾಗಿದೆ. ಈ ಸಾಮ್ರಾಜ್ಯ ಸ್ಥಾಪನೆಯಿಂದ ಹೊಸ ಬೆಳಕು ಕನ್ನಡನಾಡಿನಲ್ಲಿ ಪ್ರಜ್ವಲಿಸಿತು. ಕನ್ನಡಿಗರ ಕೀರ್ತಿ ತುತ್ತತುದಿಗೇರಿತು. 'ಪಂಪಾಪತಿಯ ಕರುಣೆ' ಯಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯನ್ನು ಮಾಡಲು ಭುವನೇಶ್ವರಿ ಹೇಗೆ ಸಹಾಯಕಳಾದಳೆಂಬುದು ತಿಳಿಯುವುದು. ಈ ದೃಶ್ಯವನ್ನು ರಂ. ಶ್ರೀ. ಮುಗಳಿಯವರು ಬರೆದ 'ವಿಜಯನಗರ ಸಾಮ್ರಾಜ್ಯ' ದಿಂದ ಆಯ್ದುಕೊಂಡಿದೆ.]

★ ★ ★

ಕಂಪಣ— (ತನ್ನಲ್ಲಿ) ಕಟ್ಟಿಹಾಕಿದ ಬಿರುಗಾಳಿಯಂತೆ ಈ ಬಿಡಾರದ ಮುಂಬದಿಯ ಕಾವಲಿಗನಾಗಿ ಕುಳಿಕುಳಿತು ಬೇಸತ್ತೆನು. ವೀರಬಲ್ಲಾಳ ದೇವರ ಸನ್ನಿಧಿ ಸೇವೆಗೆ ಇರೆಂದು ನನಗೆ ಕಟ್ಟುಮಾಡಿ, ತಾತ ಬುಕ್ಕ, ದೊಡ್ಡತಾತ ಹರಿಹರರು ತಮ್ಮ ಅಕ್ಕರೆಯ ನಾಯಿಗಳ ಕೂಡ ಈ ಮಾತಂಗ ಪರ್ವತದಾಚೆ ಹಿರಿಬೇಟೆಗೆ ಹೋದರು. ಬಲ್ಲಪ್ಪದಣ್ಣಾಯಕರೊಡನೆ ಹೊಯ್ಸಳ ರಾಜ್ಯದ ಮಾತುಕತೆಯಾಡುತ್ತ ಕೂಡುವೆನೆಂದರೆ ಅವರನ್ನು ಬಲ್ಲಾಳ ದೊರೆಗಳು ಆನೆಗೊಂದಿಯ ಸ್ಥಿತಿಗತಿಗಳನ್ನು ಅರಿತುಕೊಂಡು ಬರಲು ಅಟ್ಟಿದರು. ಈ ಕಾಯುವ ಕೆಲಸವನ್ನು ನಾನು ಇನ್ನೆಂದಿಗೂ ಕೈಕೊಳ್ಳಲಾರೆ. ಮಬ್ಬುಗತ್ತಲೆಯಾಯಿತು. ಬೇಟೆಗೆ ಹೋದ

ಹಿರಿಯರು ಇನ್ನೂ ಬರಲಿಲ್ಲವೇಕೆ ? (ಸುತ್ತುಮುತ್ತು ನೋಡುತ್ತ ಗುಡಿಯ ಕಡೆ ನಿಟ್ಟಿಸಿ) ಅದೇನು ಬೆಳಕಲ್ಲಿ ? ತಂದೆ ವಿರೂಪಾಕ್ಷನ ರಾತ್ರಿಯ ಸೇವೆಗೆಂದು ಸಜ್ಜಾದ ದೀವಟಿಗೆಯೇ ? ಅಲ್ಲ, ಹಿಡಿಯುವವರು ಯಾರೂ ಇಲ್ಲದೆ ತಾನಾಗಿ ಮುಂದಲೆ ಯುತ್ತಿರುವುದು. ಅಹ! ಕಣ್ಣು ಕೊರೆಯುವ ಹೊಳಹು ! (ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ವಿರೂಪಾಕ್ಷ ಗುಡಿಯ ಮಹಾದ್ವಾರದಿಂದ ಕೈಕೋಲುಳ್ಳ ಮೈಮುದುಡಿದ ಮುದುಕಿಯು ಮೆಲ್ಲನೆ ಬರುವುದನ್ನು ಕಂಡು) ಓ! ಇವಳಾವಳೋ ಮುದುಕಿ,ಮುತ್ತೈದೆ.

ಮುದುಕಿ— (ನೆರಳಾಟದ ದನಿಯಲ್ಲಿ) ಮಗೂ, ನನ್ನನ್ನು ಕೇಳುವವರು ಯಾರೂ ಇಲ್ಲವೆ ?

ಕಂಪಣ— ಏನು ತಾಯಿ ಏನು ಬೇಕಾಗಿದೆ ?

ಮುದುಕಿ— ಎಲ್ಲಾ ಬೇಕಾಗಿದೆ, ಮಗೂ, ಎಲ್ಲಾ ಕೊಡುವವರು ದಿಕ್ಕಿಲ್ಲ.

ಕಂಪಣ— ಹೀಗೇಕೆ ಆಡುವಿಯಮ್ಮ ? ನಾವಿರುವಾಗ ನಿನಗೇನು ಕಡಿಮೆ ಯಾಯಿತು ಹೇಳು ?

ಮುದುಕಿ— ಅಯ್ಯೋ, ಹುಸಿಹೆಮ್ಮೆಯ ಹಸುಳೆ. ರಾಮೇಶ್ವರದ ಗುಡಿ ಯಿಂದ ಹಂಪೆಯ ಗೋಪುರದ ವರೆಗೆ ದಕ್ಷಿಣ ದೇಶವನ್ನೆಲ್ಲ ಅಲೆದಾಡಿದೆ. ಹೆಣ ಬಿದ್ದ ರಣರಂಗವನ್ನು ತುಳಿದಂತೆ ಆಯ್ತು. ಜೀವವಿಲ್ಲ ! ಜೀವವಿಲ್ಲ !

ಕಂಪಣ— ಹರೆಯದ ಕೆಚ್ಚನ್ನು ಕೆರಳಿಸಬೇಡ, ತಾಯೇ. ನಿನಗೆ ಬೇಕೇನು ಉಸಿರು ?

ಮುದುಕಿ— ಮಗೂ, ನನಗೆ ನಿನ್ನಂಥ ಕ್ಷತ್ರಿಯ ನಕ್ಷತ್ರಗಳು ಬೇಕು ಲೆಕ್ಕವಿಲ್ಲದಷ್ಟು ಬೇಕು.

ಕಂಪಣ— ಅದೇಕೆ ತಾಯಿ ?

ಮುದುಕಿ— ಅದೇಕೆ ! ಈ ನಾಡು ಹೇಡಿಗಳ ಬೀಡಾಗಿದೆ. ಇವರ ಧರ್ಮ ನಿರ್ನಾಮವಾಗಿದೆ. ಇವರ ಗುಡಿಗಳೂ ಮೂರ್ತಿಗಳೂ ಕೊಲೆಗಡಕರು ಪುಟಿಸಿದ ರಕ್ತದ ಸೆಲೆಯಲ್ಲಿ ಜಳಕ ಮಾಡುತ್ತಿವೆ.

ಕಂಪಣ— ಅದೆಲ್ಲಿ, ಅದೆಲ್ಲಿ ?

ಮುದುಕಿ— ಎಲ್ಲೆಲ್ಲಿ ನೋಡಿದಲ್ಲಿ ಮಗು, ಮನುಷ್ಯರಿಂದ ಕಿಕ್ಕಿರಿದ ಆ ಮಧುರಾ ಪಟ್ಟಣವು ಈಗ ಹುಲಿಗಳ ಹೊದರಾಗಿ ಹುಲಿಯೂರೆಂದು ಹೆಸರು

ಗೊಂಡಿದೆ. ಭಕ್ತರಿಗೆ ಅಭಯವನ್ನು ಕೊಡುವ ಶ್ರೀ ರಂಗನಾಥನ ವಿಗ್ರಹವು ಮೇಲಿಂಪ ಬೀಳಲಿರುವ ಛಪ್ಪರದ ಭಯದಲ್ಲಿ ನಿಂತಿದೆ. ಅಕಟ ! ಧರ್ಮ ಕಥೆ ನಿಂತಿತು, ಚರಿತ್ರ ಕಳಚಿತು, ಪುಣ್ಯ ತೀರಿತು, ಸಭ್ಯತೆ ಮಾಯವಾಯಿತು, ಮತ್ತೇನು ಕಲಿಯೊಬ್ಬನೇ ಈ ನೆಲದಲ್ಲಿ ಧನ್ಯನಾದನು.

ಕಂಪಣ— ತಾಯಿ, ನಮ್ಮ ನಾಡು ಇಷ್ಟು ನಿರ್ಗತಿಕವಾಯ್ತೇ ? ಹೇಳು, ಬೇಗ ಹೇಳು ನಾನೇನು ಮಾಡುವುದು ?

ಮುದುಕಿ— ಹೇಳುವಂತೆ ಮಾಡುವಿಯಾ ? ಪಾಂಡ್ಯರಾಳಿದ ಮಧುರೆ ಈಗ ವಿಧುರೆಯಾಗಿ ಸುಲ್ತಾನರ ಕೈವಶವಾಗಿ ಹೋಗಿರುವಳು. (ತನ್ನ ಹತ್ತಿರ ಬಚ್ಚಿಟ್ಟ ಖಡ್ಗವ ಕೊಟ್ಟು) ಇಗೋ ಈ ಪಾಂಡ್ಯವಂಶದ ದಿವ್ಯ ಖಡ್ಗವನ್ನು ತೆಗೆದುಕೋ. ಹುಕ್ಕ–ಬುಕ್ಕರು ಈ ಹಂಪೆಯಲ್ಲಿ ವಿಜಯ ಸಾಮ್ರಾಜ್ಯವನ್ನು ಕಟ್ಟುವರು. ನೀನು ಈ ಖಡ್ಗಬಲದಿಂದ ಆ ಸಾಮ್ರಾಜ್ಯದ ಸಂರಕ್ಷಕರಲ್ಲಿ ಒಬ್ಬನಾಗು. ಇದನ್ನು ಹಿರಿದೊಡನೆ ನಿನ್ನಲ್ಲಿ ಸೋಲದ ಬಲ್ಮೆ ಬರುವುದು. ಹಿಂಗದ ಹುಮ್ಮಸ್ಸು ನಿನ್ನ ವೈರಿಗಳಲ್ಲಿ ಜೀಕಾಡುವುದು. ನಿನಗೆ ಗೆಲುವಾಗಲಿ ಕಂಪಣ !

(ಹಿಂದೆ ಹಿಂದೆ ಸರಿಯುತ್ತ ಮುದುಕಿ ಮಾಯವಾಗುವಳು)

ಕಂಪಣ— (ಸ್ವಗತ) ಏನು ಅದ್ಭುತವಿದು ! ಎಂಥ ಅಚ್ಚರಿಯಿದು ! ಸಿಡಿಲಿನಂತೆ ಮೊಳಗಿ ಮಿಂಚಿನಂತೆ ಎಲ್ಲಿಯೋ ಗುಡಿಯೊಳಗೆ ಮಾಯವಾದಳು ಅವಳು ! ಯಾರಿರಬಹುದು ಆಕೆ ? (ಯೋಚಿಸುತ್ತ ಹೊಳೆಯುವ ಖಡ್ಗವನ್ನು ನಿರುಕಿಸಿ) ಈ ಖಡ್ಗವು ಅವಳಿಗೆ ಹೇಗೆ ದೊರೆಯಿತೋ ! ಈ ಅಚ್ಚರಿಯ ಸುದ್ದಿಯನ್ನು ಹಿರಿಯರಿಗೆ ತಿಳಿಸಲೇಬೇಕು. (ಬಲ್ಲಾಳರನ್ನು ನೋಡಿ) ಬಲ್ಲಾಳ ದೇವರಸರು ಇತ್ತಲೇ ದಯಮಾಡುತ್ತಿರುವರು.

ಬಲ್ಲಾಳ— ಏನು ಕಂಪಣ, ನಿನ್ನನ್ನು ಬೇಟೆಗೆ ಹೋಗಗೊಡಲಿಲ್ಲವೆಂದು ನಮ್ಮ ಬೀಡಿನ ಬೇಟೆಯಾಡಲಿಕ್ಕೆ ನಡೆದಿರುವಿಯಾ ? ಕೈಯಲ್ಲಿ ಮಿರುಗುವ ಕತ್ತಿಯೆಲ್ಲಿಯದು ?

ಕಂಪಣ— ಒಂದು ಅದ್ಭುತವಾಯ್ತು, ದೊರೆಗಳೇ. ನನಗೆ ಹೇಳುವುದಕ್ಕೆ ಬಾಯಿ ಸಾಲದು.

ಬಲ್ಲಾಳ— ಏನು, ಏನಯ್ಯ ಅದು !

ಕಂಪಣ— ಇದನ್ನು ಹಿಡಿದಿರುವ ನನಗೆ ಈಗ ಮುಗಿಲು ಮುಟ್ಟಿದ ಸ್ಥೈರ್ಯವು ಬಂದಿದೆ. ನಮ್ಮ ವೈರಿಗಳನ್ನು ಬರಸಿಡಿಲಿನಂತೆ ಬಡಿದು ನೆಲಕ್ಕೆ ಚೆಲ್ಲುವ ಬಲವು ನನ್ನಲ್ಲಿ ಉಕ್ಕಿದೆ.

ಬಲ್ಲಾಳ— ಹೀಗೋ? ಅದು ಹೇಗಾಯಿತಯ್ಯ?

ಕಂಪಣ— ಹೇಳಬೇಕೆಂದರೆ ನನ್ನ ಬಾಯಿಗಿಂತ ನನ್ನ ಉತ್ಸಾಹವು ಮುಂದೋಡುತ್ತಿದೆ, ದೊರೆಗಳೇ.

ಬಲ್ಲಾಳ— ಅದೋ, ಅಲ್ಲಿ ನಿನ್ನ ತಾತಂದಿರಾದ ಹರಿಹರ–ಬುಕ್ಕರು ಬೇಟೆಯಿಂದ ಮರಳಿ ಬಂದರು. ನಮ್ಮೆಲ್ಲರಿಗೂ ನಿನ್ನ ಪವಾಡವನ್ನು ಹೇಳು.

(ಹರಿಹರ-ಬುಕ್ಕರು ಪ್ರಸನ್ನ ಮುಖದಿಂದ ಪ್ರವೇಶಿಸುತ್ತಾರೆ.)

ಬಲ್ಲಾಳ— ಹು! ಇಲ್ಲಿ ನೋಡಿರಿ, ಕಂಪಣನ ಕೈಯಲ್ಲಿಯ ಮಿಂಚು-ಮರಿಯನ್ನು.

ಬುಕ್ಕ— (ಕಂಪಣನ ಹತ್ತರ ಧಾವಿಸಿ) ನಿಜವಾಗಿ ಇದೆಲ್ಲಿಯ ಖಡ್ಗ, ಮಗು ಕಂಪಣ? ಯಾರಿದನ್ನು ಕೊಟ್ಟರು ನಿನಗೆ?

ಕಂಪಣ— ಹಿರಿಯರೇ, ವಿರೂಪಾಕ್ಷನ ಗುಡಿಯೊಳಗಿಂದ ಮುದುಕಿಯೊಬ್ಬಳು ಬಂದು, ಮ್ಲೇಚ್ಛರು ಹಾಳುಗೆಡಹಿದ ಮಧುರೆಯನ್ನು ಬಣ್ಣಿಸಿ, ಅದನ್ನುಳಿಸಲು ನಾನೇ ತಕ್ಕವನೆಂದು ಹೇಳಿ ಪಾಂಡ್ಯರ ಈ ದಿವ್ಯ ಖಡ್ಗವನ್ನು ನನಗೆ ಇತ್ತು ಮಟಮಾಯವಾದಳು. ಅವಳು ಹೇಳಿದಂತೆ ಇದನ್ನು ಹಿಡಿದ ಕ್ಷಣದಿಂದ ನನ್ನ ಮೈಯಲ್ಲಿ ಮಿತಿಮೀರಿದ ಬೀರಕಾವು ಉಕ್ಕೇರುತ್ತಿದೆ.

ಬುಕ್ಕ— ಎಂಥ ಚಮತ್ಕೃತಿಯಿದು! ಅವಳು ತಾಯಿ ಭುವನೇಶ್ವರಿಯೇ ಇರಬೇಕು.

ಹರಿಹರ— ಸತ್ಯವಾಗಿ, ಪ್ರಭುಗಳೇ ಪಂಪಾಪತಿಯ ಕರುಣೆ ಕುದಿವರಿಯಿತು.

**ಶಬ್ದಾರ್ಥ :**

ಮುಂದಲೆ– ಮುಂದೆಬರು; ಹಸುಳೆ– ಮಗು; ಬಲ್ಮೆ– ಶಕ್ತಿ; ನಿರ್ಗತಿಕ–ಯಾರೂ ದಿಕ್ಕಿಲ್ಲದ; ಮಿಂಚುಮರಿ– ಸಣ್ಣ ಮಿಂಚಿನಂತೆ ಶಕ್ತಿಯಿರುವ ಖಡ್ಗ; ಕುದಿವರಿ–ಹಬ್ಬು;

**ಪ್ರಶ್ನೆ:**

೧. ಕಂಪಣ ಕಾವಲುಗಾರನ ಕೆಲಸವನ್ನು ಇನ್ನೆಂದಿಗೂ ಕೈಕೊಳ್ಳಲಾರೆ ಎಂದು ಏಕೆ ಹೇಳುತ್ತಾನೆ ?

೨. ಮುದುಕಿಯನ್ನು ಕೇಳುವವರು ಯಾರೂ ಇರಲಿಲ್ಲವೇಕೆ ?

೩. ಮುದುಕಿಗೆ ಏನು ಬೇಕಾಗಿತ್ತು ?

೪. ಆಗ ಕನ್ನಡನಾಡಿನ ಸ್ಥಿತಿ ಹೇಗಿದ್ದಿತು ? ಮುದುಕಿಯು ಹೇಳಿದ ಮಾತುಗಳಿಂದ ಸಂಗ್ರಹಿಸಿ ಬರೆಯಿರಿ ?

೫. ಕಂಪಣನಿಗೆ ಮುದುಕಿಯು ಕೊಟ್ಟ ಖಡ್ಗ ಎಲ್ಲಿಯದು ? ಅದರ ಶಕ್ತಿ ಎಂಥಹದು?

೬. ಖಡ್ಗವನ್ನು ಸ್ವೀಕರಿಸಿದ ಮೇಲೆ ಕಂಪಣನಿಗೆ ಹೇಗೆ ಅನಿಸಿತು ?

೭. ಆ ಮುದುಕಿಯು ಯಾರು ?

೮. ಕೆಳಗಿನ ಪದಗಳ ಸ್ವಾರಸ್ಯವನ್ನು ವಿವರಿಸಿ ಬರೆಯಿರಿ.
೧. ಕಟ್ಟಿ ಹಾಕಿದ ಬಿರುಗಾಳಿ, ೨. ಮಿಂಚುಮರಿ, ೩. ಬರಸಿಡಿಲು.

**ವ್ಯಾಕರಣ:**

## ಅಂಕಿತನಾಮ

(೧) **ಚಾರ್ಲಸನ** ಒಲವುಗಳನ್ನು ಅವನ ತಂದೆ ಗುರುತಿಸಲಿಲ್ಲ.

(೨) ಇಲ್ಲಿ ನೋಡಿರಿ **ಕಂಪಣನ** ಕೈಯಲ್ಲಿಯ ಮಿಂಚು ಮರಿಯನ್ನು.

(೩) **ಶಾರದಾದೇವಿ**ಯವರು **ಜಯರಾಮವಟಿ**ಯಲ್ಲಿ ಜನ್ಮ ತಳೆದರು.

ಇಲ್ಲಿ ದಪ್ಪ ಅಕ್ಷರಗಳಲ್ಲಿ ಕಾಣುವ ಚಾರ್ಲಸ, ಕಂಪಣ ಎಂಬ ಪದಗಳು ಪುರುಷರ ಹೆಸರುಗಳಾಗಿವೆ. ಶಾರದಾದೇವಿ ಎಂಬುದು ಸ್ತ್ರೀಯ ಹೆಸರಾಗಿದೆ. ಈ ಹೆಸರುಗಳು ಒಬ್ಬ ವಿಶಿಷ್ಟ ವ್ಯಕ್ತಿಯನ್ನು ಗುರುತಿಸಿ ಹೇಳುವಂಥ ನಾಮವಾಚಕಗಳು. ಇದರಂತೆ ಜಯರಾಮವಟಿ ಎಂಬುದು ಒಂದು ಊರಿನ ಹೆಸರು. ಇದು ಒಂದು ವಿಶಿಷ್ಟವಾದ ಸ್ಥಳವನ್ನು ಗುರುತಿಸಿ ಹೇಳುವಂಥ ನಾಮವಾಚಕವು.

ಹೀಗೆ ಒಬ್ಬ ವ್ಯಕ್ತಿಯನ್ನಾಗಲಿ ಒಂದು ಪ್ರದೇಶವನ್ನಾಗಲಿ ಗುರುತಿಸುವದಕ್ಕೆ ಇಟ್ಟ ಹೆಸರುಗಳನ್ನು **ಅಂಕಿತನಾಮ**ವೆಂದು ಕರೆಯುತ್ತಾರೆ.

ರೂಢನಾಮ ಹಾಗೂ ಅಂಕಿತನಾಮಗಳಲ್ಲಿ ಇದ್ದ ಅಂತರವೆಂದರೆ–ರೂಢನಾಮಗಳು ಒಂದೇ ಬಗೆಯ ಹಲವು ವಸ್ತುಗಳನ್ನು ಹೇಳುತ್ತವೆ. ಅಂಕಿತನಾಮಗಳು ಒಂದೇ ಬಗೆಯ ಹಲವು ವಸ್ತುಗಳಲ್ಲಿ ಒಂದನ್ನು ಮಾತ್ರ ಹೇಳುತ್ತವೆ.

ಕೆಳಗಿನ ಉದಾಹರಣೆ ನೋಡಿರಿ.

ತುಂಗಭದ್ರೆಯು ಭಾರತದ ನದಿಗಳಲ್ಲಿ ಒಂದು.

ಇಲ್ಲಿ ನದಿ ಎಂಬುದು ರೂಢನಾಮ. ಯಾಕಂದರೆ ಅದು ಒಂದೇ ಬಗೆಯ ಹಲವು ವಸ್ತುಗಳನ್ನು ಹೇಳುತ್ತದೆ. ತುಂಗಭದ್ರೆ ಎಂಬುದು ಹಲವು ನದಿಗಳಲ್ಲಿ ಒಂದೇ ಒಂದು ವಿಶಿಷ್ಟವಾದ ನದಿಯನ್ನು ಗುರುತಿಸಿ ಹೇಳುತ್ತದೆ. ಇದರಂತೆ ಇನ್ನೊಂದು ಉದಾಹರಣೆ ನೋಡಿರಿ.

ಶ್ರೀ ರಾಮಕೃಷ್ಣರು ಶ್ರೇಷ್ಠ ಪುರುಷರಲ್ಲಿ ಒಬ್ಬರು.

ಇಲ್ಲಿ ಪುರುಷ ಎಂಬುದು ರೂಢನಾಮ. ಯಾಕಂದರೆ ಅದು ಒಂದೇ ಬಗೆಯ ಹಲವು ವ್ಯಕ್ತಿಗಳನ್ನು ಸೂಚಿಸುತ್ತದೆ. ಶ್ರೀ ರಾಮಕೃಷ್ಣ ಎಂಬುದು ಅಂಕಿತನಾಮ. ಯಾಕಂದರೆ ಅದು ಹಲವು ಶ್ರೇಷ್ಠ ಪುರುಷರಲ್ಲಿ ಒಬ್ಬರನ್ನು ಮಾತ್ರ ಗುರುತಿಸಿ ಹೇಳುತ್ತದೆ.

(ಬ) ಈ ಪಾಠದಲ್ಲಿ ಬಂದ ಹತ್ತು ಅಂಕಿತನಾಮುಗಳನ್ನು ಗುರುತಿಸಿ ಹೇಳಿರಿ.

# ೧೧. ಮುದ್ರಣಾಲಯ

[ಇಪ್ಪತ್ತನೆಯ ಶತಮಾನವು ಮಾನವ ಜನಾಂಗಕ್ಕೆ ಅನೇಕ ಸುಖ-ಸಲಕರಣೆಗಳನ್ನು ಒದಗಿಸಿ ಕೊಟ್ಟಿದೆಯಾದರೂ—ಮುದ್ರಣಾಲಯವೇ ಅವುಗಳಲ್ಲಿ ಮಹತ್ವದ್ದೆಂದು ಎದೆ ತಟ್ಟಿ ಹೇಳಬಹುದು ! ಮುದ್ರಣಾಲಯ ಮುಖೇನ ತೀರ ಸಾಮಾನ್ಯನೂ ಕೂಡ ಪ್ರಸಿದ್ಧ ಪುರುಷನಾಗಬಲ್ಲ. ಮಾನವನ ಜಾಗ್ರತಿಯ ಕೇಂದ್ರಸ್ಥಾನವು ಮುದ್ರಣಾಲಯವಾಗಿದೆಯೆಂದರೆ ಅತಿಶಯೋಕ್ತಿಯಲ್ಲ. ಅಲ್ಲಿ ನಡೆಯುವ ಕಾರ್ಯರೂಪ, ಕೆಲಸಗಾರರ ಕೈಚಳಕ, ಮಾಲಕನ ಲೀಲಾವಿನೋದ ಹಾಗೂ ವೈಭವಯುಕ್ತ ರೀತಿಯನ್ನು ನೀವು ಈ ಪಾಠದಲ್ಲಿ ಓದಿ ನಗಬಹುದು.]

★ ★ ★

ಸಂಸ್ಕೃತಿಯ ಕೇಂದ್ರವೆಂದು ವಿಖ್ಯಾತವಾದ ಪಟ್ಟಣಕ್ಕೆ ಪ್ರಾದೇಶಿಕ ಗ್ರಂಥಾಲಯ, ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳು ಅವಶ್ಯಕವೆನಿಸುವಂತೆ, ಇವೆಲ್ಲ ಶಿಕ್ಷಣ ಸಂಸ್ಥೆಗಳಿಗೂ ಒಂದಿಲ್ಲೊಂದು ಬಗೆಯಿಂದ ಜೀವಕಳೆ ತುಂಬುವ ಇನ್ನೊಂದು ಪ್ರಮುಖ ಸಂಸ್ಥೆಯೆಂದರೆ ಮುದ್ರಣಾಲಯವೇ ಸರಿ. ಒಂದು ವೇಳೆ ನಗರದಲ್ಲಿ ಅಸಂಖ್ಯ ಚಲಚಿತ್ರಗಳೂ, ನಾಟಕ, ಸರ್ಕಸ ಕಂಪನಿಗಳು ಇರದಿದ್ದರೂ

ಸಾಗೀತು. ಆದರೆ ಪ್ರಗತಿಯ ಕುರುಹು ಎಂಬ ದೃಷ್ಟಿಯಿಂದ ಮುದ್ರಣಾಲಯದ ಅವಶ್ಯಕತೆಯನ್ನು ನಾವು ಕಡೆಗಣಿಸಲಾಗದು. ಇದರಿಂದ ಸಾಮಾನ್ಯತಃ ದೈನಿಕ ಜೀವನಕ್ಕೆ ಕೊಂಚ ಉಲಿವು ಉಂಟಾಗಿದೆ ಎಂಬ ಕಲ್ಪನೆ ಮೊಳಗಿದರೂ ಅದರ ವಿಶಿಷ್ಟ ಸ್ವರೂಪ, ಅಲ್ಲಿಯ ಕೆಲಸಗಾರರ ವೈಯಕ್ತಿಕ ಸ್ಥಾನಮಾನ, ಕಾರ್ಯರಂಗದ ರಭಸವ ಅರಿವು ಆದಾಗ ಮಾತ್ರ ಅದರ ಹೆಚ್ಚಳಕ್ಕೆ ಯಾರೂ ತಲೆದೂಗದಿರರು. 'ಖಡ್ಗಕ್ಕಿಂತಲೂ ಲೇಖನಿಯಲ್ಲಿಯೇ ಹೆಚ್ಚಿನ ಶಕ್ತಿ ಹುದುಗಿದೆ, ಎಂದು ಮನವರಿಕೆ ಮಾಡಿಕೊಂಡ ಇಪ್ಪತ್ತನೆಯ ಶತಮಾನದ ಯುವಕ–ಯುವತಿಯರು, ಮುದ್ರಣಾಲಯದ ಹಿರಿಮೆಯ ಬಗೆಗೆ ಎಂದೂ ತರ್ಕ–ವಿತರ್ಕ ಹೂಡಲಾರರು.



ವ್ಯಾಪಾರ ವ್ಯವಹಾರದ ಜೀವಾಳವಾದ ಭವ್ಯ ನಗರಗಳ ಗಂಡುಮೆಟ್ಟಿನ ಭಾಗದಲ್ಲಿ ರಾಜಬೀದಿಗೆ ಹೊಂದಿ 'ಮುದ್ರಣಾಲಯ' ಎಂಬ ಮುದ್ದು ಅಕ್ಕರಗಳ (?) ಹಳೆಯ ಹಲಗೆ ತೂಗಾಡುತ್ತಿರುವ ದೃಶ್ಯವು ತೀರ ಸಾಮಾನ್ಯ. ಆ ಕಟ್ಟಡವು ಒಡೆಯನದೇ ಇರಲಿ, ಇಲ್ಲವೆ ಅದಕ್ಕಾಗಿ ಅವನು ಬೇರೆಯವರಿಗೆ ,ತಿಂಗಳೊಂದಕ್ಕೆ ಬಾಡಿಗೆ ಸಲ್ಲಿಸುತ್ತಿರಲಿ, ಅದು ಅತಿ ಪ್ರಶಸ್ತವಾಗಿರುವಲ್ಲಿ ಸಂದೇಹವಿಲ್ಲ.

ಮುದ್ರಣಾಲಯದಿಂದ ಸುಮಾರು ಕೂಗಳತೆಯ ಮೇಲೆ ಒಂದು ಚಲಚ್ಚಿತ್ರದ ಮಾದರಿಯ ಕಟ್ಟಡ ಕಂಗೊಳಿಸುತ್ತಿದ್ದರೆ, ತೀರ ಸಮೀಪದಲ್ಲಿ ಹಾಗೂ ಸುತ್ತು

ಮುತ್ತಲು ಚಹಾ, ಕಾಫಿ, ಸೋಡಾವಾಟರಿನ ಅಂಗಡಿಗಳಿಗೇನೂ ಕೊರತೆ ಬರುವಂತಿಲ್ಲ. ಒಂದು ವೇಳೆ ಇಂತಹ ಫಲಾಹಾರದ ಅಂಗಡಿಗಳ ಖಾನೆಸುಮಾರಿ ಸುಲಭ ಸಾಧ್ಯವೆನಿಸಿದರೂ ಎಲೆ, ಅಡಿಕೆ, ಬೀಡಿ ಅಂಗಡಿಗಳ ಲೆಕ್ಕ ಮಾಡಲು ಚಿತ್ರಗುಪ್ತರೇ ಬೇಕು. ಇಷ್ಟೊಂದು ರಭಸದ ವಾತಾವರಣ ಸಾಲದೋ ಏನೋ ಎಂಬಂತೆ ಸಮೀಪವರ್ತಿಯಾಗಿ ಅಲ್ಲೊಂದು ಇಲ್ಲೊಂದು ಸ್ಟುಡಿಯೋ, ಕಲಾ-ಮಂದಿರಗಳು ತಲೆ-ಎತ್ತಿ ನಿಂತಿರುವದುಂಟು—ಕಾಲಪುರುಷನ ದಾಳಿಗೆ ಎದೆಗೊಟ್ಟು ನಿಂತ, ಶಿಲಾಪ್ರತಿಮೆಗಳಂತೆ ! ಕಣ್ಣಿನ ನೋಟ ಹರಿಯುವ ವರೆಗಿನ ಅಕ್ಕ–ಪಕ್ಕದ ಸಾಲುಗಳಲ್ಲಿ ಅಂಚೇಕಚೇರಿ, ಬಸ್ ನಿಲ್ದಾಣ, ಟಾಂಗಾ ನಿಲ್ದಾಣ, ಗೋಪುರ, ಗಡಿಯಾರದ ಸಾರ್ವಜನಿಕ ಕಟ್ಟಡಗಳು ಇದ್ದು ಮನೋಹಾರಿಯಾಗಿ ಕಾಣುವವು.

ಸಾಮಾನ್ಯತಃ ಮುದ್ರಣಾಲಯದ ಸುತ್ತುಮುತ್ತಲಿನ ಈ ಬಗೆಯ ದೃಶ್ಯ, ವೈಭವದ ಸೊಬಗನ್ನು ಮನವಾರೆ ಸವಿದು ಒಳಗೆ ಕಾಲಿಟ್ಟು ಸ್ವಲ್ಪ ಸೂಕ್ಷ್ಮವಾಗಿ ಅವಲೋಕಿಸಿದರೆ ಅಲ್ಲಿಯ ಸತತೋದ್ಯೋಗ, ಯಾಂತ್ರಿಕ ಜೀವನದ ಉನ್ಮಾದ ಎಂಥವನನ್ನೂ ಕ್ಷಣಕಾಲ ದಂಗುಗೊಳಿಸುವವು; ಊಹಾಲೋಕಕ್ಕೆ ಒಯ್ಯುವವು. ಒಂದೆಡೆ ಮೊಳೆ ಜೋಡಿಸುವವರು ತಮ್ಮ ವಿಲಕ್ಷಣ ಸಾಮ್ರಾಜ್ಯವಾದ ಅಕ್ಷರಗಳ ರಾಶಿಯಲ್ಲಿ ತಲೆಹಾಕಿ, ಆಗಾಗ ತಂಬಾಕು ಬಾರು ಮಾಡುತ್ತ ಹರಟುತ್ತ ಕೆಲಸದ ನಟನೆ ಮಾಡುತ್ತಿರುವರು; ಅದೂ ಮಾಲಕನು ಸಮೀಪದಲ್ಲಿ ಹಾಯ್ದು ಹೋದಾಗ ! ಬೇರೊಂದೆಡೆಗೆ ಕಾಗದ ಹೊಲಿಯುವವರು ಬೀಡಿ ಹಚ್ಚಿ ಕೂಲಿಯಾಳಿನಂತೆ ಸಾವಧಾನವಾಗಿ ತಮ್ಮ ಕೆಲಸ ಸಾಗಿಸುತ್ತಿರುವರು. ಕಾಗದ ಕೊರೆಯುವವನ ಕೆಲಸ ಯಂತ್ರವನ್ನವಲಂಬಿಸಿದ್ದರೂ ಆಗಾಗೆ ಅವನು ಪರಿಶ್ರಮವನ್ನು ಮಾಡುತ್ತಿರುವನು. ಎಲ್ಲಕ್ಕೂ ಹೆಚ್ಚು ತಾಳ್ಮೆ ವಹಿಸಿ ಜಗತ್ತಿನಲ್ಲಿ ಅಂಗ ಸೌಷ್ಠವಕ್ಕೆ ವಿಶೇಷ ಮನ್ನಣೆ ಇದೆ ಎಂದು ಸಾರುವಂತೆ ಹಣ ಮುಂಗಡ ತೆಗೆದುಕೊಂಡು ತನ್ನ ವಿಜೃಂಭಣೆಯ ಚಹಾಪಾರ್ಟಿ ಮುಗಿದೊಡನೆ ಕೆಲಸಕ್ಕೆ ಹತ್ತಿ ಗಂಭೀರ ಮುಖಮುದ್ರೆಯಿಂದ ಮಾಲಕನಿಗೂ ಸೊಪ್ಪು ಹಾಕದೆ ಕಾರ್ಯ ನಿರ್ವಹಿಸುವವನು ಪ್ರಿಂಟರನು. ಅವನೇ ಮುದ್ರಣಾಲಯದ ಅನಭಿಷಕ್ತ ಸಮ್ರಾಟ ಇಲ್ಲವೆ ಏಕಮೇವಾದ್ವಿತೀಯ ಆಧಾರಸ್ತಂಭ ! ಯಾಕಂದರೆ ಮಾಲಕನು ಎಷ್ಟೇ ಹೆಚ್ಚು ಹಣ ಗೊತ್ತುಮಾಡಿ ಆರ್ಡರ ತರಿಸಿಕೊಂಡಿದ್ದರೂ ಮೊಳೆ ಜೋಡಿಸುವವನು ಎಂತಹ ಅಸಾಮಾನ್ಯ ಕಲಾ-ಕೌಶಲ್ಯ ಉಪಯೋಗಿಸಿದ್ದರೂ ಪ್ರಿಂಟರನೊಬ್ಬನು ಕಾಣೆಯಾದರೆ ಅನರ್ಥ.

ಹೀಗೆ ಮುದ್ರಣಾಲಯದ ಉಳಿವು ಕೆಲಸಗಾರರನ್ನವಲಂಬಿಸಿದೆ ಎಂಬ ಕಲ್ಪನೆ ಮಾಲಕನಿಗಿದ್ದರೂ ಅವನ ರೀತಿ–ನೀತಿಗಳು ಮಾದರಿಯವು. ಸಾಮಾನ್ಯತಃ ಶ್ರೇಷ್ಠ ಅರ್ಥ ಸಚಿವನಿಗೆ, ಕುಶಲ ರಾಜಕಾರಣಿಗೆ, ಜಾಗತಿಕ ತಕ್ಕಡಿಗೆ ಝೋಲಿ ಹೊಡಿಸುವ ಸರ್ವಾಧಿಕಾರಿಗೆ ಒಂದು ವೇಳೆ ಅವನಂತಹ ಆತ್ಮವಿಶ್ವಾಸ, ಬುದ್ಧಿಮತ್ತೆ ಇರಲಿಕ್ಕಿಲ್ಲ. ಯಾರು ಬಂದರೂ ಕುಳಿತುಕೊಂಡೆ ತನ್ನ ವ್ಯವಹಾರವನ್ನು ನಡಿಸಿ ಹೇಗೆ ಊರ್ಜಿತಾವಸ್ಥೆಗೆ ಮುಟ್ಟಬೇಕೆಂಬ ಕಲೆ ಅವನಿಗೆ ಯಾರೂ ಕಲಿಸುವ ಕಾರಣವಿಲ್ಲ. ದೊಡ್ಡ ಗ್ರಂಥಮಾಲೆಯ ಮರ್ಯಾದಸ್ಥ ಪ್ರಕಟನೆಗಾರರು ಬಂದದ್ದಾದರೆ ತಟ್ಟನೆ ಸಮೀಪದ ಉದ್ದರಿಯ ಅಂಗಡಿಗೆ ಚಹಾ ಸಿಗರೇಟಿನ ಆರ್ಡರ ಕಳಿಸುವನು. ಚಿಲ್ಲರೆ ಕೆಲಸ ಬಂದರೆ, ಅಂದಿನ ಅಥವಾ ಹಿಂದಿನ ದಿನ ಪತ್ರಿಕೆ ಓದುವದರಲ್ಲಿ ತಲೆಹಾಕಿದಂತೆ ತೋರಿಸಿ ಆಗೊಮ್ಮೆ, ಈಗೊಮ್ಮೆ ವರಕೊಟ್ಟಂತೆ ಮಾತನಾಡುತ್ತ ಕೆಲಸ ಹಿಡಿದುಕೊಳ್ಳಲೆತ್ನಿಸುವನು. 'ಬಹುತರವಾಗಿ ಇಂತಹ ಗಿರಾಕಿಗಳಿಂದಾಗಬೇಕಾದುದೇನು ?' ಎಂಬ ಠೀವಿ ಆತನಲ್ಲಿ ಕಂಡುಬರುವದರಲ್ಲೇ ನಚ್ಚರಿ ! ಅಂತೇ ಮಾಲಕನು ಈ ಬಗೆಯ ಕಿರುಕುಳ ಗಿರಾಕಿಗಳ ಉದ್ದರಿ ಲೆಕ್ಕಕ್ಕೂ ತಪ್ಪು ಮೊಳೆ ಜೋಡಿಸುವ ಕಲೆ (?) ಸಾಧಿಸಿಕೊಂಡ ಹೊಸ ಕೆಲಸಗಾರರ ಜಾಣ್ಮೆಗೂ ಗಂಟು ಹಾಕುವನು ! ಅಹುದು ಮಾಲಕನು ಕೆಲಸದಲ್ಲಿ ಎಷ್ಟು ಜಾಗರೂಕನಿದ್ದರೂ, ಕೆಲಸಗಾರರಿಂದ ಎಷ್ಟು ಹೆಚ್ಚಿನ ಕೆಲಸ ತೆಗೆದುಕೊಳ್ಳುವ ಸ್ಥೈರ್ಯ ಉಳ್ಳವನಾಗಿದ್ದರೂ ಕಾಲಕ್ಕನುಗುಣವಾಗಿ ತಗ್ಗಿ ನಡೆಯದಿದ್ದರೆ ಅವನ ಔದ್ಯೋಗಿಕ ಕೇಂದ್ರ ಕುಸಿಯುವದೇ ಸಹಜ. ಅಂತೇ ಗ್ರೇಟ ಇಂಡಿಯನ್ ಸರ್ಕಸ, ಸಾಗ್ರ ಸಂಗೀತ ನಾಟಕ ಮಂಡಳಿ, ಮುದ್ದಾಂ ಜಾತ್ರೆಗಾಗಿ ತರಿಸಿದ ಮಾರಾಮಾರಿ ಚಿತ್ರಪಟ, ಸಾರ್ವಜನಿಕ ಉಪನ್ಯಾಸ, ವಿವಾಹ ಮಹೋತ್ಸವ ಮೊದಲಾದವುಗಳ ನಿಮಿತ್ತ ವಿಶೇಷ ಬಿಡುವಿನ ಹೊಸ ಪತ್ರಿಕೆ ಸಿದ್ಧಗೊಳಿಸಲೇಬೇಕು.

ಇರಲಿ, ಬೇರೆಯವರಿಗೆ ತಡಮಾಡಬಾರದೆಂದು ಕಟ್ಟಪ್ಪಣೆ ಮಾಡುವ ಮಾಲಕನೂ ಸಹ ಆಗೀಗ ತಡಮಾಡಿ ಬರುವದು ಇಲ್ಲವೆ ಪೂರ್ಣ ತಪ್ಪಿಸಿ ಬಿಡುವದೂ ಸಹ ಸ್ವಾಭಾವಿಕ. ಪಾಪ ! ಅವನಾದರೂ ಒಬ್ಬ ಸಮಾಜ ಜೀವಿಯಲ್ಲವೇ. ಮುದ್ರಣಾಲಯದ ಹೊರಗೆ ವಿಸ್ತೃತ ಪ್ರಪಂಚವಿರುವದೆಂದು ತಿಳಿಯದಷ್ಟು ಹೆಡ್ಡನೆ ಅವನು ! ಎಷ್ಟೇ ಆದರೂ ಅವನಿಗೆ ನೂರಾರು ರಸಿಕ ಗೆಳೆಯರು, ಅಸಂಖ್ಯ ಸಾರ್ವನಿಜಕ ಚಟುವಟಿಕೆಗಳು, ಸುಸಂಸ್ಕೃತನಾದ ಅವನಿಗೂ ನಗರ ಸಭೆಯ ಚುನಾವಣೆ, ರಾಜಕಾರಣ, ಸಂಘ–ಸಂಸ್ಥೆ, ನಾಟಕ, ಚಲಚಿತ್ರ,

ನಿರುದ್ದಿಶ್ಯ ಪ್ರವಾಸ, ವಿಲಾಸ, ತಲೆಹರಟೆ ಮೊದಲಾದವುಗಳಲ್ಲಿ ಅಪೂರ್ವ ಆಸ್ಥೆ ಇರಬೇಡವೇ! ತಾನು ಎರಡನೆಯವರಿಗೆ ವೇಳೆಕೊಟ್ಟು ಅನಿವಾರ್ಯವಾಗಿ ಕೆಲಸ ಮಾಡಿರದಂತೆ ತನ್ನ ಮೇಲೂ ಸೇಡು ತೀರಿಸಿಕೊಳ್ಳುವ ಅಸಂಖ್ಯ ಉದ್ಯೋಗಿಗಳಿರುವರಲ್ಲ. ಅವರೊಡನೆ ಮುದ್ರಣಾಲಯದ ಒಡೆಯನ ಯಾವವೀ ಕಲಹ ಕಟ್ಟಿಟ್ಟದ್ದೇ! ಅವರೆಲ್ಲ ಬಿಡುವರೇ? ಪಾಪ! ಮುದ್ರಣಾಲಯದ ಬಡ ಮಾಲಕನ ಉದ್ದರಿ ಲೆಕ್ಕವನ್ನು ಕಂಪನಿ ನಾಟಕಗಳ ಹನುಮಂತನ ಬಾಲದಂತೆ ವ್ಯವಸ್ಥಿತವಾಗಿ ಬೆಳಸಿ ಬಿಡುವರು. ಹೀಗಿದೆ ಮಾಲಕನ ಸ್ಥಿತಿ!

ಮುದ್ರಣಾಲಯದ ಬಡ ಕಟ್ಟಡದಲ್ಲಿ ಉತ್ತಮ ಖುರ್ಚಿ, ಮೇಜುಗಳು, ಕಪಾಟುಗಳ ನಿರಂತರ ಕೊರತೆ ಇದ್ದರೂ ಬರಹೋಗುವ ಜನರು ನಿರಾಶೆಗೆ ತುತ್ತಾಗುವದು ನಡೆದಿದ್ದರೂ ಮಾಲಕನು ತಾನು ಸಮಾಜಸೇವೆಯ ಹೊಣೆ ಹೊತ್ತಿರುವೆನೆಂಬ ಪ್ರಾಮಾಣಿಕ ಬುದ್ಧಿಯಿಂದ ಮಡಿಯುತ್ತಿದ್ದರೂ ಯಂತ್ರಗಳು ಹಳೆಯವಾಗಿ ಅಂದಗೇಡಿ ಆಕಾರ ತಳೆದಿದ್ದರೂ ಸಂಸ್ಕೃತಿಯ ರಕ್ಷಣೆಯ ನೈಜ ಆಧಾರಸ್ತಂಭವೆನಿಸಿದಾಗಂತೂ ಅದರ ಹೆಚ್ಚಳಕ್ಕೆ ತಲೆಬಾಗದವರೇ ವಿರಳ. ಅಂತೇ ವಿವೇಕಿಗಳು ಮುದ್ರಣಾಲಯದ ಮಹತಿಯನ್ನು ಮನವರಿಕೆ ಮಾಡಿಕೊಂಡು ಅದರ ಸಾಮಾಜಿಕ ಅಂತಸ್ತನ್ನು ಮಾರ್ಮಿಕವಾಗಿ ಬಣ್ಣಿಸುತ್ತಿರುಬಹುದಲ್ಲವೇ?

ಮುದ್ರಣಾಲಯವಿಲ್ಲದಿದ್ದರೆ ನಮಗೆ ಗತಿಯಿಲ್ಲ.

**ಶಬ್ದಾರ್ಥ :**

ದೈನಿಕ ಜೀವನ– ನಿತ್ಯದ ಬಾಳು; ಹುದುಗು– ಅಡಗು; ಅವಲೋಕಿಸು– ನೋಡು; ಉನ್ಮಾದ– ಆವೇಶ; ದಂಗುಗೊಳಿಸು– ಚಕಿತಗೊಳಿಸು; ಅನಭಿಷಕ್ತ– ಪಟ್ಟಗಟ್ಟದ; ಜಾಗತಿಕ– ಜಗತ್ತಿಗೆ ಸಂಬಂಧಿಸಿದ; ನಿರುದ್ದಿಶ್ಯ– ಯಾವಕಾರಣವಿಲ್ಲದೆ; ಮಹತಿ– ಮಹತ್ವ, ಘನತೆ.

**ಪ್ರಶ್ನೆ:**

೧. ಸಾಂಸ್ಕೃತಿಕ ಕೇಂದ್ರಕ್ಕೆ ಕಳೆಕಟ್ಟುವ ಮುಖ್ಯ ಸಂಸ್ಥೆಯಾವದು? ಏಕೆ?
೨. ಮುದ್ರಣಾಲಯದ ಶಕ್ತಿಯು ದೊಡ್ಡದು ಏಕೆ?
೩. ಮುದ್ರಣಾಲಯದ ಕಟ್ಟಡದ ವರ್ಣನೆಯನ್ನು ಹೇಳಿರಿ.
೪. ಅಲ್ಲಿ ಕೆಲಸ ಮಾಡುವವರು ಯಾರು ಯಾರು?
೫. ಪ್ರಿಂಟರನು ಅನಭಿಷಕ್ತ ಸಾಮ್ರಾಟನು ಏಕೆ?

೬. ಮಾಲಕನು ತನ್ನ ವ್ಯವಹಾರವನ್ನು ಹೇಗೆ ನಾಗಿಸುವನು ?
೭. ಮಾಲಕನ ಬೇರೆ ಬೇರೆ ಚಟುವಟಿಕೆಗಳಾವವು ?
೮. ಏನಾದರೂ ಮುದ್ರಣಾಲಯವಿಲ್ಲದೆ ನಮಗೆ ಗತಿಯಿಲ್ಲ ಯಾಕೆ ?
೯. ಸ್ಪಷ್ಟೀಕರಿಸಿರಿ : ೧. ಖಡ್ಗಕ್ಕಿಂತಲೂ ಲೇಖನಿಯಲ್ಲಿಯೇ ಹೆಚ್ಚಿನ ಶಕ್ತಿ ಹುದುಗಿದೆ. ೨. ಅವನೇ ಮುದ್ರಣಾಲಯದ ಅನಭಿಷಕ್ತ ಸಾಮ್ರಾಟ್ ಇಲ್ಲವೇ ಏಕಮೇವಾದ್ವಿತೀಯ ಆಧಾರಸ್ತಂಭ.

## ಅನ್ವರ್ಥಕನಾಮ

(ಅ) (೧) ನಮ್ಮೂರಿನಲ್ಲಿ ಹಿಂದಕ್ಕೆ ನಾಗಪ್ಪನೆಂಬ ಒಬ್ಬ **ಒಕ್ಕಲಿಗ**ನಿದ್ದನು.
(೨) ಎಲ್ಲಮ್ಮ ದೇವಿಯು **ಜೋಗಿಣಿ**ಯ ವೇಷ ತೊಟ್ಟು ಬಂದಳು.

ಮೇಲಿನ ವಾಕ್ಯಗಳಲ್ಲಿಯ ದಪ್ಪಕ ರದ ಪದಗಳನ್ನು ನಿರೀಕ್ಷಿಸಿರಿ. ಮೊದಲನೆಯ ವಾಕ್ಯದಲ್ಲಿ ಒಕ್ಕಲಿಗ ಎಂಬುದು ನಾಗಪ್ಪನನ್ನು ಸೂಚಿಸುತ್ತದೆ. ನಾಗಪ್ಪ ಎಂಬುದು ಅಂಕಿತನಾಮ. ಆ ಹೆಸರನ್ನು ಅವನ ತಂದೆತಾಯಿಗಳು ಅವನಿಗೆ ಇಟ್ಟಿದ್ದಾರೆ. ಆದರೂ ಈಗ **ಒಕ್ಕಲಿಗ** ಎಂಬ ಇನ್ನೊಂದು ಹೆಸರೂ ಅವನಿಗೆ ಬರುತ್ತದೆ. ಯಾಕಂದರೆ ಅವನು ಒಕ್ಕಲುತನವನ್ನು ಮಾಡುತ್ತಿದ್ದನು. ತಾಯಿ-ತಂದೆಗಳಿಂದ ನಾಗಪ್ಪ ಎಂಬ ಹೆಸರು ಬಂದಂತೆ ಅವನು ಮಾಡುವ ಉದ್ಯೋಗದಿಂದ **ಒಕ್ಕಲಿಗ** ಎಂಬ ಹೆಸರು ಬಂದಿತು. ಇದರಂತೆ ಎರಡನೆಯ ವಾಕ್ಯದಲ್ಲಿ **ಜೋಗಿಣಿ** ಎಂಬುದು ಎಲ್ಲಮ್ಮ ದೇವಿಯನ್ನು ಸೂಚಿಸುತ್ತದೆ. ಎಲ್ಲಮ್ಮ ದೇವಿಯೆಂಬುದು ಅಂಕಿತನಾಮ. **ಜೋಗಿಣಿ** ಎಂಬುದು ಉದ್ಯೋಗದಿಂದ ಬಂದ ಹೆಸರು.

ಹೀಗೆ ಒಂದು ಉದ್ಯೋಗದಿಂದಾಗಲಿ, ಜೀವನದ ರೀತಿಯಿಂದಾಗಲಿ ಅಥವಾ ಇನ್ನಾವುದಾದರೂ ರೀತಿಯಿಂದಾಗಲೀ ಒಬ್ಬ ವ್ಯಕ್ತಿಗೆ ಬಂದ ಹೆಸರನ್ನು ಅನ್ವರ್ಥಕ ನಾಮವೆಂದು ಕರೆಯುತ್ತಾರೆ.

(ಬ) ಕೆಳಗಿನ ವಾಕ್ಯಗಳಲ್ಲಿ ಬಂದ ಅನ್ವರ್ಥಕನಾಮಗಳನ್ನು ಗುರುತಿಸಿ ಅವು ಏಕೆ ಅನ್ವರ್ಥಕನಾಮಗಳೆಂಬುದಕ್ಕೆ ಕಾರಣ ಕೊಡಿರಿ.
(೧) ಚಾರ್ಲಸ್ ಡಾರ್ವಿನ್‌ನು ಒಬ್ಬ ಶ್ರೇಷ್ಠ ವಿಜ್ಞಾನಿ.
(೨) ಭೀಮಪ್ಪನು ಒಳ್ಳೆಯ ಕುಂಬಾರನಾಗಿದ್ದಾನೆ.
(೩) ಅವನನ್ನು ಜನರು ಹೆಳವನೆಂದು ಕರೆಯುತ್ತಾರೆ.
(೪) ಅಕ್ಕಸಾಲಿಗನು ಚಿನ್ನದ ಒಡವೆಗಳನ್ನು ಮಾಡುತ್ತಾನೆ.
(೫) ಇವನು ಒಳ್ಳೆಯ ಮುದ್ರಕನಾಗಿದ್ದಾನೆ.

# ೧೨. ಆಫ್ರಿಕೆಯ ಹೃದಯದಲ್ಲಿ

[ಡೇವ್ಹಿಡ್ ಲಿವ್ಹಿಂಗಸ್ಟನ್ ಆಫ್ರಿಕಾ ಖಂಡದ ಒಳಪ್ರದೇಶವನ್ನು ಶೋಧಿಸಿದ ಮಹಾಧೀರ; ಸಾಹಸಿ. ಅವನು ೧೮೧೩ರಲ್ಲಿ ಇಂಗ್ಲಂಡದಲ್ಲಿ ಹುಟ್ಟಿದ. ಮುಂದೆ ಧರ್ಮಪ್ರಚಾರಕನಾಗಿ ಆಫ್ರಿಕೆಗೆ ಬಂದು ಅಲ್ಲಿಯ ಕಾಡು ಜನರಿಗೆ ಕ್ರೈಸ್ತ ಧರ್ಮದ ದೀಕ್ಷೆಯನ್ನು ಕೊಡಲು ಪ್ರಯತ್ನಿಸುತ್ತ, ಆಫ್ರಿಕೆಯ ಅಂತರ್ಭಾಗವನ್ನು ಶೋಧಿಸಿದ. ಆ ಶೋಧನೆಯಲ್ಲಿಯೇ ಮಡಿದ. ಇಲ್ಲಿ ಅವನ ಆಫ್ರಿಕೆಯ ಒಳನಾಡಿನ ಪ್ರವಾಸದ ಒಂದು ಭಾಗ ಬಂದಿದೆ.]

★ ★ ★



ಆಫ್ರಿಕೆಯಲ್ಲಿ ಬಂದಿಳಿದಾಗ ಅವನು ಇನ್ನೂ ೭೦೦ ಮೈಲು ಪ್ರವಾಸ ಮಾಡ ಬೇಕಿತ್ತು—ಅವನು ನೇಮಕವಾದ ಮಿಶನ್ ಸಂಸ್ಥೆಯ ಕೇಂದ್ರಕ್ಕೆ. ಆ ಕೇಂದ್ರವು ಬೆಚುವನ್‌ಲ್ಯಾಂಡ್ ಪ್ರಾಂತದಲ್ಲಿ ಇತ್ತು. ಅಲ್ಲಿಗೆ ಅವನನ್ನು ಒಯ್ಯಲು ಅನುಕೂಲ ವಾಹನವೆಂದರೆ ಎತ್ತಿನ ಬೆನ್ನೇ. ವೃಷಭ ವಾಹನನಾಗಿ ಲಿವ್ಹಿಂಗಸ್ಟನ್ ಆ ದೀರ್ಘ ಯಾತ್ರೆಯನ್ನು ಮುಗಿಸಿದನು.

ಲಿವ್ಹಿಂಗಸ್ಟನ್‌ನ ಧರ್ಮಪ್ರಸಾರ ಹಾಗೂ ಅಂತರ್ದೇಶೀಯ ಪ್ರವಾಸ ಇವೆರಡೂ ಜತೆಯಾಗಿಯೇ ಸಾಗಿದವು. ಬೆಚುವನ್‌ಲ್ಯಾಂಡದ ಕುರುಮನನ್‌ದಿಂದ ಆತ ಒಳನಾಡಿನಲ್ಲಿ ಹೆಜ್ಜೆ ಇಟ್ಟನು. ಅದರ ಉದ್ದೇಶ ಒಳನಾಡಿನ ತಲೆಕಾಡುಗಳಲ್ಲಿ ವಾಸಿಸುವ ನಿಗ್ರೋ ಬಣಗಳಿಗೆ ಕ್ರೈಸ್ತ ಧರ್ಮದ ದೀಕ್ಷೆ ಕೊಡುವದಾಗಿತ್ತು. ಒಂದು ಕೈಯಲ್ಲಿ ಬೈಬಲ್; ಇನ್ನೊಂದು ಕೈಯಲ್ಲಿ ರೈಫಲ್. ತಲೆಯಲ್ಲಿ ಜಿಜ್ಞಾಸೆ; ಎದೆಯಲ್ಲಿ ಗೆಲುವಿನಾಸೆ. ಈ ಚತುರಂಗ ಬಲದೊಂದಿಗೆ ಆಫ್ರಿಕಾದ ದಂಡ ಕಾರಣ್ಯಗಳಲ್ಲಿ ಡೆವಿಡ್ ಲಿವ್ಹಿಂಗಸ್ಟನ್‌ನ ದಂಡಯಾತ್ರೆ ಆರಂಭವಾಯಿತು.

ಮೊದಲನೆಯ ಪ್ರವಾಸ ೧೮೪೧ರಲ್ಲಿ ನಡೆಯಿತು. ಪ್ರತಿಯೊಂದು ಪ್ರವಾಸದಲ್ಲಿಯೂ ತನ್ನ ಅನುಭವ ಅವಲೋಕನೆಯನ್ನೆಲ್ಲ ಅವನು ಬರೆದಿಡುತ್ತಿದ್ದನು. ಭೂಮಿಯ ಅದರು–ಪದರು ಗಿಡಮರಗಳ ಪರಿಜ್ಞಾನ, ಸೃಷ್ಟಿವೈಚಿತ್ರ್ಯದ

ವಿವರ, ಇವೆಲ್ಲ ದೃಷ್ಟಿಯಿಂದ ಪ್ರವಾಸ ಮಾಡಿದ. ಪ್ರದೇಶಗಳ ನಿರೀಕ್ಷಣೆ ಮಾಡಿ ಕಂಡದ್ದನ್ನೆಲ್ಲ ತಲೆಗೊಟ್ಟು ಕಲೆಹಾಕುತ್ತಿದ್ದನು. ಕುರುಮನನ್‌ದಲ್ಲಿ ತನಗಾಗಿ ತನ್ನದೇ ಶ್ರಮದಿಂದ ಆತ ಒಂದು ಮನೆಯನ್ನು ಕಟ್ಟಿಕೊಂಡನು. ಅಲ್ಲಿಂದ ೨೦೦ ಮೈಲು ದೂರ 'ಮಾಖೋಟ್ಸಾ' ಎಂಬಲ್ಲಿ ಇನ್ನೊಬ್ಬ ಮಿಶನರಿ ಇದ್ದನು. ಅವನ ಹೆಸರು ಡಾ. ರಾಬರ್ಟ್ಸ್ ಮೋಫಾಟ. ಆತನ ಮಗಳಾದ ಮೇರಿ ಮೋಫಾಟಳೊಡನೆ ಲಿವ್ಹಿಂಗಸ್ಟನ್ ಮದುವೆ ಮಾಡಿಕೊಂಡನು.

ಇದೇ ಸಮಯ ಲಿವ್ಹಿಂಗಸ್ಟನ್ ಒಂದು ಭೀಷಣ ಗಂಡಾಂತರದಲ್ಲಿ ಸಿಕ್ಕು ಪ್ರಾಣಾಪಾಯದಿಂದ ಕೂದಲೆಳೆಯಷ್ಟೇ ಅವಕಾಶದಲ್ಲಿ ಪಾರಾದನು. ಆತ ಸಾತ್ವಿಕ ನಿದ್ದಷ್ಟೇ ಶೂರ ಸಾಹಸಿ. ಒಮ್ಮೆ ಬೇಟೆಯಾಡುವಾಗ ಒಂದು ಸಿಂಹವನ್ನು ಗುಂಡಿಕ್ಕಿ ಗಾಯಗೊಳಿಸಿದನು. ಆಗ ಆ ಕೆರಳಿದ ಕೇಸರಿಯು ಅವನ ಮೇಲೆ ಜಿಗಿದು ಅವನನ್ನು ನೆಲಕ್ಕೆ ಉರುಳಿಸಿತು. ಬೇಟೆಯ ನಾಯಿ ಬೆಕ್ಕನ್ನು ಹೇಗೋ ಹಾಗೆ ನುಗ್ಗು ನುಗ್ಗಾಗಿ ಮಾಡಿತು. ಒಂದು ಭುಜದ ಮಾಂಸವನ್ನು ಎಲುವಿನ ತನಕವೂ ಹರಿದು ಕಚ್ಚಿ ತಿಂದು ಬಿಟ್ಟಿತು, ಮುಂದೆ ಅವನ ಜೀವಮಾನದಲ್ಲಿಯೇ ಆ ಎಡತೋಳು ಜರ್ಜರವಾಗಿಯೇ ಉಳಿಯಿತು !

ಒಳನಾಡಿನಲ್ಲಿ "ಗಾಮಿ" ಎಂಬ ಸರೋವರವಿದೆಯೆಂಬ ವಾರ್ತೆ ಇತ್ತು. ಅದನ್ನು ಹುಡುಕಿ ನೋಡಲು ೧೮೪೯ರಲ್ಲಿ ಲಿವ್ಹಿಂಗಸ್ಟನ್ ಇಬ್ಬರು ಆಂಗ ಶಿಕಾರಿಗಳ ಸಂಗಡ ಹೊರಟನು. ಹೊರಟ ದಾರಿಯಲ್ಲಿ—ಅಗಸ್ತ್ಯ ಋಷಿಗೆ ವಿಂಧ್ಯಪರ್ವತವು ಅಡ್ಡಗಟ್ಟಿದಂತೆ ಕಾಲಹಾರಿಯಾದ ಕಲಹಾರಿ ಮರುಭೂಮಿ ನಡುವೆ ಹಬ್ಬಿನಿಂತಿತ್ತು. ಆದರೆ ಎದೆಗಾರರು ಮುಂದಿಟ್ಟ ಹೆಜ್ಜೆಗೆ ಅಡ್ಡಬರುವ ಅಡ್ಡಿಯಾದರೂ ಯಾವದು ? ಲಿವ್ಹಿಂಗಸ್ಟನ್ ಮರುಭೂಮಿಯನ್ನು ಮರಳಿ ನೋಡದೆ ದಾಟಿದನು. ಮುಂದೆ ರೆಟಗಾ ಎಂಬ ಹೊಸದೊಂದು ಹೊಳೆಯಲ್ಲಿ ಡೋಣಿಯಿಂದ ದೂರ ಹಾಯ್ದು "ಗಾಮಿ" ಸರೋವರವನ್ನು ಆ ಸಾಹಸಿಯು ಹುಡುಕಿ ಕಂಡನು. ಆ ಸರೋವರವೇ ಲಿವ್ಹಿಂಗಸ್ಟನ್‌ನ ಮೊತ್ತ ಮೊದಲಿನ ಶೋಧ.

ಮರುವರ್ಷ ಲಿವ್ಹಿಂಗಸ್ಟನ್ ಮತ್ತೆ ಉತ್ತರಾಭಿಮುಖನಾದನು. ಆದರೆ "ಟ್ಸೇಟ್ಸೇ" ನೊಣಗಳ ಉಪಹತಿಯು ಅವನನ್ನು ತಡೆಯಿತು. ಝಾಂಬೇಜಿ ಮಹಾನದಿಯನ್ನು ಮೊದಲು ಕಂಡುಕೊಂಡ ಭಗೀರಥನು ಲಿವ್ಹಿಂಗಸ್ಟನ್‌ನೇ.

೧೮೫೧ರಲ್ಲಿ ಆತನು ಶೆಶೆಕೋ ಎಂಬಲ್ಲಿ ಹೋಗಿದ್ದನು. ಅಲ್ಲಿಯೇ ಲಿನಿಯಾಂತಿ ಯೆಂಬಲ್ಲಿಯ ಮಾಕೊಲೊಲೋ ಎಂಬ ನಿಗ್ರೋ ಬಣದ ಮುಖ್ಯಸ್ಥನು ಅವನನ್ನು ಅನುಗ್ರಹದಿಂದ ಸ್ವಾಗತಿಸಿದನು. ಅನಂತರ ಲಿವ್ಹಿಂಗಸ್ಟನ್ ತನ್ನ ಹೆಂಡತಿ ನಾಲ್ವರು ಮಕ್ಕಳನ್ನು ಇಂಗ್ಲಂಡಿಗೆ ಕಳುಹಿಸಲು ಕೇಪಟೌನಿಗೆ ಒಯ್ದು ತಲ್ಪಿಸಿದನು. ಮರುವರ್ಷವೇ ಆತನು ಕೈಕೊಂಡ ಸಂಚಾರವು, ಅವನ ಹೆಸರು ಭೂಗೋಲದ ಸುತ್ತಲೂ ಮೊಳಗುವಂತೆ ಮಾಡಿತು. ಅವನು ಮೊದಲು ಕೊಲೊಬೆಂಗಕ್ಕೆ ಹೋದನು. ಆದರೆ ಅಲ್ಲಿಯ ಅವನ ಮನೆಯನ್ನು "ಬೋಅರ"ರು ಸುಟ್ಟು ಹಾಕಿದ್ದರು. ಅಲ್ಲಿಯ ನಿಗ್ರೋ ವಸಾಹತುಗಾರರಲ್ಲಿ ಅನೇಕರನ್ನು ಕೊಂದು ಹಾಕಿದ್ದರು. ಊರನ್ನು ಕೊಳ್ಳೆ ಹೊಡೆದಿದ್ದರು. ಆ ಭಣಗುಡುವ ಶೂನ್ಯ ಮನೆ-ಮಾರನ್ನು ನೋಡಿ ಖಿನ್ನನಾಗಿ ಆತ ಕಾಡು-ಮೇಡಗಳ ಕಡೆಗೆ ಓಗೊಟ್ಟು ಉತ್ತರಕ್ಕೆ ಹೊರಟನು.

ಈ ಯಾತ್ರೆಯಲ್ಲಿ ಮೇಲೆ ಹೇಳಿದ ನಿಗ್ರೋ ಬಣವು ಅವನಿಗೆ ತುಂಬ ನೆರ ವಾಯಿತು. ೨೭ ಜನರನ್ನು ಜತೆಗೆ ಕೊಟ್ಟಿತು. ಅಂಗೊಲಾ ದಂಡೆಯ ಲೊಅಂಡಾ ಎಂಬ ಸ್ಥಾನವನ್ನು ಗುರಿಯಾಗಿ ಇಟ್ಟುಕೊಂಡು ಆ ಅಜ್ಞಾತವಾದ ಅರಣ್ಯಾಂತರದಲ್ಲಿ ಹೊಸ ದಾರಿಯನ್ನೂ ಹಣೆಬರಹವನ್ನೂ ಹುಡುಕಿಕೊಂಡು ಹೊರಟನು. ಝಾಂಬೇಜಿಯ ಗುಂಟ ಪ್ರವಾಸ ಮಾಡಿದನು; ದಾರಿಯಲ್ಲಿ ವಿಚಿತ್ರ ಅನುಭವಗಳನ್ನು ಇದು ರಿಸಬೇಕಾಯಿತು. ತಮ್ಮ ತಮ್ಮೊಳಗೆ ಬಡಿದಾಡುವ ಕಾಡು ಬಣಗಳ ಸೀಮೆ ಯೊಳಗಿಂದ ಸಾಮದಾನಗಳಿಂದ ತುಳ್ಮೆ-ಜಾಣ್ಮೆಗಳಿಂದ ದಾರಿ ತೆಗೆದನು, ನಡುವೆ ಸಣ್ಣ ಜ್ವರ ಬೇರೆ ಅವನನ್ನು ಹಣ್ಣು ಮಾಡಿತು. ಅಲ್ಲಿಯ ಗಿರಿಕಂದರಗಳು ಏನು ಭವ್ಯ! ಏನು ಭಯಾನಕ! ಅಲ್ಲಿಯ ವನಸ್ಪತಿಗಳ ವೈವಿಧ್ಯವೇನು! ವೈಪುಲ್ಯ ವೆಷ್ಟು! ವೈಭವವೆಂತಹದು! ನಿಸರ್ಗದ ನಿಸ್ಸೀಮ, ನಿಷ್ಠೆಯ ಭಕ್ತನಾದ ಲಿವ್ಹಿಂಗ ಸ್ಟನ್‌ನು ಆನಂದಮುಗ್ಧನಾದನು.

ಆದರೆ ಅವನ ಜತೆಯಲ್ಲಿ ನಡೆದ ನಿಗ್ರೋ ಜನರ ಮೇಲೆ ಈ ಕಗ್ಗಾಡಿನ ಪ್ರಭಾವ ವಿಪರೀತವಾಯಿತು. ಅವರು ಎದೆಗೆಟ್ಟರು; ಹೆದರಿ ಹುಚ್ಚೆದ್ದರು; ತಮ್ಮ ನಾಯಕನ ಅಪ್ಪಣೆ ಮುರಿದು ಅಂಕೆಮೀರಿ ಬಂಡನ್ನೇ ಹೂಡಿದರು. ಆದರೆ ಧೀರ ಶಾಂತ ಲಿವ್ಹಿಂಗಸ್ಟನ್ ಕಂಗೆಡಲಿಲ್ಲ. ತನ್ನ ಇಚ್ಛಾಶಕ್ತಿಗೆ ಬಂಡುಗಾರರನ್ನೇ ಮಣಿಸಿ, ಒಲಿಸಿ ಮುಂದಿನ ಪಯಣಕ್ಕೆ ಅಣಿಗೊಳಿಸಿದನು. ಕೊನೆಗೂ ೧೮೫೪ರ

ಮೇ ತಿಂಗಳಲ್ಲಿ ಪಶ್ಚಿಮ ಕರಾವಳಿಯ ಅಂಗೋಲಾ ಸೀಮೆಯನ್ನು ತಲ್ಪಿದನು. ಅಲ್ಲಿಂದಲೆ ಆತನು ಇಂಗ್ಲಂಡಕ್ಕೆ ಹೋಗಲು ಬರುತ್ತಿತ್ತು; ಅವನಿಗಾಗಿ ಹಡಗವೂ ಸಿದ್ಧವಿತ್ತು. ಆದರೆ ಆತನ ನಂಬಿಗಸ್ತಿಕೆ ಅವನನ್ನು ಹಿಂದಿರುಗುವಂತೆ ಮಾಡಿತು. ಜತೆಗೆ ಬಂದ ನಿಗ್ರೋ ಸಂಗಡಿಗರನ್ನು ಮರಳಿ ಅವರ ಸೀಮೆಗೆ ಒಯ್ಯಲು ಲಿವ್ವಿಂಗಸ್ಟನ್ ತಿರುಗಿ ಹೊರಟನು. ಆಫ್ರಿಕೆಯನ್ನು ಪೂರ್ವಾಭಿಮುಖವಾಗಿ ದಾಟುವ ದೃಢನಿರ್ಧಾರವನ್ನು ಅದಕ್ಕೆ ತಕ್ಕ ಧೈರ್ಯವನ್ನು ಆತ ಪ್ರಕಟಿಸಿದನು.

ಅದೇ ವರ್ಷದ ನವ್ಹಂಬರದಲ್ಲಿ ಈ ಪ್ರವಾಸವೀರನು ಒಂದು ಅದ್ಭುತ ಶೋಧವನ್ನು ಮಾಡಿ ಜಗತ್ತಿನ ಚಿರಕಾಲದ ಬೆರಗಿಗೆ ಕಾರಣನಾದನು. ಆ ಶೋಧವೆಂದರೆ ವ್ಹಿಕ್ಟೋರಿಯಾ ತಡಸಲಿನ ಶೋಧ! ಈ ಜಲಪಾತದ ಮೂಲ ಹೆಸರು—ಅಲ್ಲಿಯ ಆದಿವಾಸಿಗಳಿಟ್ಟ ಹೆಸರು. "ಮೊಸಿಯೊತುನ್ಯಾ" ಎಂದು. ಇದು ತುಂಬ ಕಾವ್ಯಮಯವಾದ ಹೆಸರು; ಇದರ ಅರ್ಥ ತಿಳಿದೊಡನೆಯೇ ನೀವೂ ಒಪ್ಪಿ ತಲೆದೂಗುವಿರಿ! ಈ ವಿಚಿತ್ರ ಶಬ್ದದ ಅರ್ಥ "ಮುಳುಗುವ ಹೊಗೆ" ಹೇಗಿದೆ ಕಾಡು ಮಿದುಳಿನ ಕವಿಕಲ್ಪನೆ! ಅಲ್ಲಿಂದ ಮುಂದೆ ಲಿವ್ವಿಂಗಸ್ಟನ್ ಗಡ್ಡೆ ಗೆಣಸು, ಕಾಡು ಜೇನುಗಳ ಮೇಲೆ ಜೀವಿಸುತ್ತ ಪ್ರತಿಕೂಲ ದೇಶಗಳಲ್ಲಿ ಪ್ರಯಾಸ ದಿಂದ ಸಾಗುತ್ತ ಸಾಯುವಷ್ಟು ಸೋತು ಕ್ವಿಲಿಮನೆ ಎಂಬಲ್ಲಿಗೆ ಮುಟ್ಟಿದನು. ಆ ಸ್ಥಾನವಾದರೂ ಎಂತಹದು? ಆದಿವಾಸಿಗಳು ನರಬಲಿಯನ್ನು ಕೊಡುವ ವಧಸ್ಥಾನ!

ಆ ವರ್ಷದ ಕೊನೆಗೆ ಲಿವ್ವಿಂಗಸ್ಟನ್ ಇಂಗ್ಲಂಡಕ್ಕೆ ಮರಳಿದನು.

**ಶಬ್ದಾರ್ಥ :**

ಅಂತರ್ದೇಶೀಯ- ಒಳನಾಡಿನ; ರೈಫಲ್– ಬಂದೂಕು; ಜಿಜ್ಞಾಸೆ– ಲವಲವಿಕೆ; ದಂಡಯಾತ್ರೆ– ದಾಳಿ; ಅವಲೋಕನೆ– ನಿರೀಕ್ಷಣೆ; ಪರಿಜ್ಞಾನ– ವಿಶೇಷವಾದ ಜ್ಞಾನ, ವಿವರವಾದ ಜ್ಞಾನ; ಕಾಲಹಾರಿ– ವೇಳೆಗಳೆಯುವ; ಅನುಗ್ರಹ– ದಯೆ; ಸಾಮ– ತಾಳ್ಮೆ, ಸೈರಣೆ; ನಿಸ್ಸೀಮ– ಹೆಚ್ಚಿನ.

**ಪ್ರಶ್ನೆ:**

೧. ಎತ್ತಿನ ಬೆನ್ನ ಮೇಲೆ ಅವನು ಎಷ್ಟು ದೂರ ಪ್ರವಾಸ ಮಾಡಿದನು? ಏಕೆ?

೨. ಅವನ ಚತುರಂಗಬಲ ಯಾವದಾಗಿತ್ತು? ಅವನು ಎಂಥ ದಂಡಯಾತ್ರೆಗೆ ಹೊರಟಿದ್ದನು?

೩. ಲಿವ್ವಿಂಗಸ್ಟನ್ ಎಂಥ ಗಂಡಾಂತರದಲ್ಲಿ ಸಿಕ್ಕಿದ್ದನು ? ಅದರ ಪರಿಣಾಮ ವೇನಾಯಿತು ?
೪. ಅವನ ಮೊತ್ತಮೊದಲಿನ ಶೋಧವಾವುದು ? ಅದನ್ನು ಅವನು ಹೇಗೆ ಶೋಧಿಸಿದನು ?
೫. ವಿಕ್ಟೋರಿಯಾ ತಡಸಲನ್ನು ಅವನು ಯಾವಾಗ ಶೋಧಿಸಿದನು ? ಅದನ್ನು ಶೋಧಿಸುವಾಗ ಅವನು ಪಟ್ಟ ಸಂಕಟಗಳನ್ನು ಎದುರಿಸಿದ ಎಡರು– ತೊಡರು ಗಳನ್ನು ವಿವರಿಸಿರಿ.
೬. ಕೆಳಗಿನ ಮಾತುಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.
೧. ದಂಡಯಾತ್ರೆ, ೨. ಉಪಹತಿ, ೩. ಕೊಳ್ಳೆ ಹೊಡೆ, ೪. ಎದೆಗೆಡು.

**ವ್ಯಾಕರಣ :**

**ಭಾವವಾಚಕನಾಮ**

(ಅ) (೧) ನೀಗ್ರೋ ಟೊಳಣದ ಮುಖ್ಯಸ್ಥನು ಅವನನ್ನು **ಅನುಗ್ರಹ**ದಿಂದ ಸ್ವಾಗತಿಸಿದನು.
(೨) ಆದರೆ ಆತನ **ನಂಬಿಗಸ್ತಿಕೆ** ಅವನನ್ನು ಹಿಂದಿರುಗುವಂತೆ ಮಾಡಿತು.
(೩) ಆಫ್ರಿಕೆಯನ್ನು ಪೂರ್ವಾಭಿಮುಖವಾಗಿ ದಾಟುವ ದೃಢ **ನಿರ್ಧಾರ**ವನ್ನು ಅದಕ್ಕೆ ತಕ್ಕ **ಧೈರ್ಯ**ವನ್ನು ಆತ ಪ್ರಕಟಿಸಿದನು.

ಮೇಲಿನ ವಾಕ್ಯಗಳಲ್ಲಿ ಬರುವ ದಪ್ಪಕ್ಕರದ ಪದಗಳನ್ನು ನಿರೀಕ್ಷಿಸಿರಿ. ಈ ಪದಗಳು ನಾಮಪದಗಳಾಗಿವೆ. ಆದರೆ ಅವು ಈಗ ನೀವು ಕಲಿತ ರೂಢ, ಅಂಕಿತ, ಅನ್ವರ್ಥಕ ನಾಮಗಳಲ್ಲ. ಯಾಕಂದರೆ ಅನುಗ್ರಹ, ನಂಬಿಗಸ್ತಿಕೆ, ನಿರ್ಧಾರ, ಧೈರ್ಯ ಇವು ಯಾವ ಒಂದು ವಸ್ತುಗಳಿಗೆ ರೂಢಿಯಿಂದಾಗಲೀ ಉದ್ಯೋಗದಿಂದಾಗಲೀ ಬಂದ ಹೆಸರು ಗಳಲ್ಲ. ಅಂಕಿತನಾಮಗಳಂತೆ ಇವು ಒಂದು ವ್ಯಕ್ತಿಯನ್ನಾಗಲೀ ಪ್ರದೇಶವನ್ನಾಗಲಿ ಗುರುತಿಸಿ ಹೇಳುವದಿಲ್ಲ, ಆದರೂ ಇವು ನಾಮಪದಗಳಾಗಿವೆ. ಯಾಕಂದರೆ ಅನುಗ್ರಹ, ನಂಬಿಗಸ್ತಿಕೆ, ನಿರ್ಧಾರ, ಧೈರ್ಯ ಇವು ಹೆಸರುಗಳಾಗಿವೆ. ಆದರೆ ಈ ಹೆಸರುಗಳು ವಸ್ತು, ಪ್ರದೇಶ, ವ್ಯಕ್ತಿ ಮೊದಲಾದವುಗಳನ್ನು ಸೂಚಿಸದೆ ಮನುಷ್ಯನ ಅಂತರಂಗ ದಲ್ಲಿಯ **ಭಾವ**ವನ್ನು ಸೂಚಿಸುತ್ತವೆ.

ಹೀಗೆ ಭಾವವನ್ನು ಸೂಚಿಸುವ ನಾಮುಗಳಿಗೆ **ಭಾವನಾಮು**ಗಳೆಂದು ಹೆಸರು.

ರೂಢ, ಅಂಕಿತ, ಅನ್ವರ್ಥಕನಾಮಗಳು ವಸ್ತುಗಳನ್ನು ಸೂಚಿಸುವದರಿಂದ ಇವು ಗಳನ್ನು **ವಸ್ತುವಾಚಕ**ಗಳೆಂದೂ ಭಾವನಾಮಗಳು ಬರೀ ಭಾವ, ಕಲ್ಪನೆ, ವಿಚಾರ ಮುಂತಾದವುಗಳನ್ನು ಸೂಚಿಸುವದರಿಂದ ಇವುಗಳನ್ನು **ಭಾವವಾಚಕ**ಗಳೆಂದೂ ಕರೆಯುತ್ತಾರೆ.

(ಬ) ಈ ಪಾಠದಲ್ಲಿ ಬಂದ ಹತ್ತು ಭಾವನಾಮುಗಳನ್ನು ಗುರುತಿಸಿ ಹೇಳಿರಿ.

೧೩. 


[ನಮ್ಮ ಉಡಿಗೆ-ತೊಡಿಗೆಗಳಲ್ಲಿ ಚೆಲುವನ್ನು ತಂದು ಕೊಡುವದು ಸೂಚಿಶಿಲ್ಪ ಕಲೆ. ಸೂಚಿಶಿಲ್ಪವಲ್ಲಿ ಸೌಂದರ್ಯದ ನೋಟವಿದೆ. ಒಂದು ರೀತಿಯ ಸೊಬಗಿದೆ. ಈ ಕಲೆಯು ಸ್ತ್ರೀಯರಿಗೂ, ಪುರುಷರಿಗೂ ಸಾಧಿಸುವಂತಹದಿದೆ. ಕೈಕೆಲಸದ ಈ ಕಸುಬನ್ನು ಒಳ್ಳೇ ರೀತಿಯಿಂದ ಬೆಳೆಯಿಸಲು ಕರ್ನಾಟಕದಲ್ಲಿ ಸಾಧ್ಯವಿದೆ. ಸೂಚಿಶಿಲ್ಪ ಕಲೆಗೆ ಜೀವನದಲ್ಲಿ ಮಹತ್ವವಾದ ಸ್ಥಾನವಿದೆ. ಶ್ರೀಮತಿ ಸರೋಜಿನಿ ಮಹಿಷಿಯವರು ಕರ್ನಾಟಕದ ಸುರಿತ ಲೇಖಿಕೆಯರಿದ್ದು, ಈ ವಿಷಯದ ಬಗ್ಗೆ ತಮ್ಮ ಅನುಭವ ಪೂರ್ಣ ಮಾತುಗಳನ್ನು ಈ ವಾರದಲ್ಲಿ ಹೇಳಿರುವರು.]

★ ★ ★

ಮನುಷ್ಯನು ಬೇಟೆಗಾಗಿ ಅಲೆದಲೆದು ಚರ್ಮವನ್ನುಟ್ಟು, ಉಪಜೀವಿಸುತ್ತಿದ್ದ ಪ್ರಾಚೀನ ಯುಗವೊಂದಿತ್ತು. ಹಾಗೆ ಕಾಡು ಸ್ಥಿತಿಯಲ್ಲಿ ಅಲೆದಾಡುವದನ್ನು ಬಿಟ್ಟು ಜನಾಂಗವನ್ನು ರಚಿಸಿ ನಾಗರಿಕರಾಗಿ ನೆಲೆಸತೊಡಗಿದಂದಿನಿಂದ ಅವರ ಆಹಾರ, ವೇಷ, ಭೂಷಣ, ರುಚಿಗಳೆಲ್ಲವುಗಳಲ್ಲಿಯೂ ವ್ಯತ್ಯಾಸವಾಗುತ್ತಲೇ ಇದೆ; ಪ್ರಯೋಗ ನಡೆದೇ ಇದೆ. ಅರ್ಥಾತ್ ಮಾನವ ಜೀವನವೇ ಪ್ರಯೋಗ ಪರಂಪರೆ, ಬರೇ ಕರಿಯ ಮಣ್ಣಿನ ಪಾತ್ರೆಗಳನ್ನು ನೋಡಿ ಬೇಸತ್ತ ದ್ರಾವಿಡರು ಅವುಗಳ ಮೇಲೆ ಎಲೆ, ಹೂಗಳ ಚಿತ್ರಗಳನ್ನು ಕೊರೆದರಂತೆ !

ವೇಷದ ವಿಚಾರದಲ್ಲಂತೂ ಆಧುನಿಕ ಜನಾಂಗವು ಅಸಹನೀಯ ಸ್ಥಿತಿಯನ್ನೇ ಮುಟ್ಟಿದೆ. ಯಾವನೊಬ್ಬ ಮನುಷ್ಯನ ವೇಷದಿಂದ ಅವನ ಕುಲ, ಜಾತಿ, ಉದ್ಯೋಗ, ದೇಶಗಳನ್ನು ಗುರುತಿಸಬಹುದು, ಕಲಾನೈಪುಣ್ಯದಿಂದ ಬಟ್ಟೆಗಳನ್ನು ಸಿದ್ಧಗೊಳಿಸಿ, ಆಯಾವ್ಯಕ್ತಿಗಳ ಸೌಂದರ್ಯವನ್ನು ಹೆಚ್ಚಿಸುವದರಲ್ಲಿ ಸೂಚಿಶಿಲ್ಪಿಯು ತೋರಿಸುವ ಜಾಣ್ಮೆಗಂತೂ ಅಳತೆಯೇ ಇಲ್ಲ. ಮನುಷ್ಯನು ತಾನು ತಾನಾಗಿರದೆ ಸೂಚಿಶಿಲ್ಪಿಯಿಂದ ನಿರ್ಮಿತನಾಗುತ್ತಿದ್ದಾನೆ. ಸೂಚಿಶಿಲ್ಪಿಯು ಮೈಯಳತೆಗೆ ಸರಿಯಾಗಿ ಬಟ್ಟೆಗಳನ್ನು ಹೊಲಿಯುವದಲ್ಲದೆ, ಮೈಯಲ್ಲಿದ್ದ ಕುಂದುಕೊರತೆಗಳು

ಮುಚ್ಚುವಂತೆಯೂ ಹೊಲೆಯುತ್ತಾನೆ. ಮೈಗೆ ಒಪ್ಪುವ ಬಣ್ಣವನ್ನಾರಿಸಿ ವಿವಿಧ ಬಗೆಯ ಬೆಡಗಿನಿಂದ ಉಡುಪನ್ನು ತಯಾರಿಸಿ, ಶರೀರದ ಸೌಂದರ್ಯವನ್ನು ಹೆಚ್ಚಿಸುವದೂ ಅವನ ಕೆಲಸವೇ. ಸೂಚಿಶಿಲ್ಪಿಯ ಕೌಶಲ್ಯ ಎಷ್ಟೆಷ್ಟು ಯಾವ ಬಟ್ಟೆಯಲ್ಲಿ ಹೆಚ್ಚೋ ಅಷ್ಟು, ಆ ಬಟ್ಟೆ ವೀರನಿಗಾಗಿ, ಸಿರಿವಂತನಿಗಾಗಿ ಸಿದ್ಧವಾದದ್ದು. ಆ ಹೊಲಿದ ಬಟ್ಟೆಗಳಲ್ಲಿಯೂ ಬಗೆಬಗೆಯ ಬಣ್ಣಗಳಲ್ಲಿ ನಿಸರ್ಗ ಸೌಂದರ್ಯವನ್ನೂ ಅರಳಿಸಿ ಸೂಕ್ಷ್ಮ ನಿರೀಕ್ಷಣೆಯ ಶಕ್ತಿಯನ್ನೂ, ಕಲಾನೈಪುಣ್ಯವನ್ನೂ ಒಟ್ಟಿಗೇ ವ್ಯಕ್ತ ಮಾಡಬಹುದು. ಇದೇ ಕಸೂತಿಯ ಕಲೆ.

ಈ ಕಸೂತಿಯ ಕಲೆ ಮಾನವ ಜನಾಂಗದಲ್ಲೇ ಹಬ್ಬಿಕೊಂಡಿದೆ. ಆದರೆ ಜಗತ್ತಿನ ವಿವಿಧ ಭಾಗಗಳ ಜನರ ಅಭಿರುಚಿಯು ಅಲ್ಲಿಯ ನೈಸರ್ಗಿಕ ವಾತಾವರಣಕ್ಕೂ, ಧಾರ್ಮಿಕ ವಿಚಾರಗಳಿಗೂ ಹೊಂದಿಕೊಂಡು ಬೆಳೆಯುವದರಿಂದ, ಬೇರೆ ಬೇರೆ ಸ್ಥಳಗಳಲ್ಲಿ ಭಿನ್ನ ಭಿನ್ನವಾಗಿದೆ. ಇಂಗ್ಲೀಷ ಕಸೂತಿಯ ಕಲೆಯು ಕಡಿಮೆಯ ವೇಳೆಯಲ್ಲಿ ಯಂತ್ರಗಳ ಸಹಾಯದಿಂದ ವಿಶೇಷ ಆಡಂಬರವಿಲ್ಲದೆ ವ್ಯಕ್ತವಾಗುತ್ತದೆ; ಆದರೆ ಅದೇ ಭಾರತದ ಕಸೂತಿ ವಿವಿಧ ಬಣ್ಣಗಳ ಮೆರಗಿನಿಂದ ಬೆಳ್ಳಿ, ಬಂಗಾರಗಳ ಕಡ್ಡಿಯ ಕುಸುರಿನ ಕೆಲಸಗಳಿಂದ ಅಂದವಾಗಿ ಮೂಡಿ ಬರುತ್ತದೆ. ಭಾರತದಲ್ಲಿಯೂ ಮೊದಲಿಗೆ ಕಸೂತಿಯ ಕಲೆಯು ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿಯೇ ಇತ್ತು. ಉತ್ತರ ಭಾರತವು ದಕ್ಷಿಣ ಭಾರತಕ್ಕಿಂತ ಈ ಕಲೆಗೆ ಹೆಚ್ಚಿನ ಅವಕಾಶವನ್ನು ಕೊಟ್ಟಿದೆ; ಇದಕ್ಕೆ ಉತ್ತರದ ನಿಸರ್ಗ ಸೌಂದರ್ಯವೂ ಕಾರಣವಾಗಿದೆ. ಕಸೂತಿಯ ಕಲಾ ಸಾಧನೆಯನ್ನು ಮನೆಯಲ್ಲಿಯೇ ಕುಳಿತು ಮಾಡಬಹುದಾದ್ದರಿಂದ, ಬಿಡುವಿನ ಸಮಯದಲ್ಲಿ ಅನೇಕ ಮಹಿಳೆಯರು ಕಸೂತಿಯನ್ನು ಹಾಕಿ ಮನೆಗೆ ಆರ್ಥಿಕ ಸಹಾಯವನ್ನೂ ಮಾಡುತ್ತಿದ್ದಾರೆ. ಆದರೆ ಕಸೂತಿಯ ಕಲೆ ಮಹಿಳೆಯರದೇ ಅಲ್ಲ; ಕಲೆ ಸುಲಭಶ್ರಮದ್ದಾದುದರಿಂದ, ನಯವಾಗಿದ್ದುದರಿಂದ ಮತ್ತು ಮನೆಯಲ್ಲಿಯೇ ಕುಳಿತು ಮಾಡಬಹುದಾದುದರಿಂದ, ಮಹಿಳೆಯರಲ್ಲಿಯೇ ಹೆಚ್ಚಾಗಿ ಆಶ್ರಯವನ್ನು ಪಡೆದಿದೆ. ಇತ್ತೀಚೆಗೆ ಇದರ ಕಡೆಗೆ ಲಕ್ಷ್ಯವನ್ನು ಪೂರೈಸಿದ ಪುರುಷರ ಸಂಖ್ಯೆಯೂ ಕಡಿಮೆಯಿಲ್ಲ. ದಿಲ್ಲಿ, ಮುಲ್ತಾನಗಳ ಕಡೆ ಪ್ರಚಾರದಲ್ಲಿರುವ ಲೋಹ ಧಾತುಗಳ ಎಳೆಗಳಿಂದ ನಿರ್ಮಿತವಾಗುವ "ಝರ್ದೋಶಿ" ಮತ್ತು "ಶಿಲ್ಮಾಶಿತಾರಾ" ಎಂಬ ಕಸೂತಿಗಳನ್ನು ಹೆಚ್ಚಾಗಿ ಪುರುಷರೇ ಮಾಡುತ್ತಾರೆ.

ಉತ್ತರದಲ್ಲಿಯ ಮಣಿಪುರದ ಸ್ತ್ರೀಯರು ಮಾಡುವ ರೇಶಿಮೆ ಹೊಲಿಗೆಯ ಕಸೂತಿ ನೋಡತಕ್ಕವಂತಹದು. ಕಲಾಬತ್ತಿನ ಕಸೂತಿಯ ಪ್ರಚಾರವು ಇತ್ತೀಚಿನದು. ಬನಾರಸ, ಪುಣೆ, ಬೆಂಗಳೂರಗಳಲ್ಲಿ ಇದರ ಪ್ರಸಾರ ಹೆಚ್ಚಾಗಿದೆ. ಬನಾರಸದ ಶೀರೆಗಳಂತೂ ಭಾರತೀಯ ಮಹಿಳೆಯರ ಮನವನ್ನೇ ಸೂರೆಗೊಂಡಿವೆ ! ಕಚ್ಛ, ಕಾಠೇವಾಡಗಳು ಸರಪಳಿಯ ಹೊಲಿಗೆಯಿಂದಲೇ ಎಲೆ, ಹೂಗಳ ನಯವಾದ ಕಸೂತಿಯನ್ನು ಹಾಕುವಲ್ಲಿ ಹೆಸರುಗೊಂಡಿವೆ.

ಕನ್ನಡ ಜನಾಂಗದಲ್ಲಿ ನಾಗರಿಕರ ಕಸೂತಿಯ ಕಲೆ ಒಂದು ವಿಧವಾದರೆ, ಹಳ್ಳಿಗರಲ್ಲಿ ಮತ್ತೊಂದು ವಿಧವಾಗಿರುವದು. ಕನ್ನಡಿಯ ಸಣ್ಣ ಸಣ್ಣ ತುಂಡುಗಳನ್ನು ಸೇರಿಸಿ ಸರಪಳಿಯ ಹೊಲಿಗೆಯಿಂದ ಹೊಲಿಯುವದು ಇಂದಿಗೂ ಲಂಬಾಣಿ ಸ್ತ್ರೀಯರಲ್ಲಿ ಕಂಡುಬರುತ್ತದೆ. ಕರಿಯ ಚಂದ್ರಕಾಳಿಯ ಸೀರೆಯಲ್ಲಿ ಎಳೆ ಎಣಿಸಿ ಕಸೂತಿ ಹಾಕುವದು, ಈ ನಾಡಿನಲ್ಲಿ ಹಿಂದಿನಿಂದಲೂ ಪ್ರಚಾರದಲ್ಲಿದೆ. ಈ ಕಸೂತಿಯ ರೇಶಿಮೆಯನ್ನು ಸೆರಗಿನ ತುದಿಯ ಎಳೆಗಳಿಂದಲೇ ತೆಗೆದುಕೊಳ್ಳುತ್ತಿದ್ದರಂತೆ. ಇತ್ತೀಚೆಗೆ ಈ ರೇಶಿಮೆಯು ಮೈಸೂರಿನಿಂದ ಬರುತ್ತದೆ. ಸ್ವಲ್ಪ ಒರಟಾಗಿ ಕಾಣುತ್ತದೆ. ಕಸೂತಿ ಯಂತ್ರದ ಸಹಾಯದಿಂದ ಅಲ್ಪ ವೇಳೆಯಲ್ಲಿ ಸಿದ್ಧವಾಗುವ ಕಸೂತಿಯ ಮುಂದೆ ಈ ಎಳೆ ಎಣಿಸಿ ಹಾಕುವ ಕಸೂತಿಯು ಹಿಂದೆ ಬಿದ್ದಿತು; ಈಗ ಮತ್ತೆ ಆ ಕಲೆಯು ಕನ್ನಡನಾಡಿನ ಒಳಹೊರಗಿನ ಜನರ ಆದರವನ್ನು ಪಡೆಯಹತ್ತಿದೆ. ಹಿಂದಕ್ಕೆ ಕೇವಲ ಈ ಕಸೂತಿಯ ಕಲಾಸಾಧನೆಗಾಗಿ ತಮ್ಮ ದೃಷ್ಟಿಯನ್ನೂ, ಜೀವನವನ್ನೂ ಮೀಸಲಾಗಿರಿಸಿದ ಮಹಿಳೆಯರಿದ್ದರೆಂದ ಬಳಿಕ, ಕನ್ನಡನಾಡಿನ ಕಲಾಭಿರುಚಿಯನ್ನು ಕುರಿತು ಹೆಚ್ಚಿಗೆ ಹೇಳುವದೇನು ?

ಬಟ್ಟೆಯ ಉಳಿತಾಯವಾಗಬೇಕೆಂದು ಜಾಣ್ಮೆಯಿಂದ ಕತ್ತರಿಸಿ, ಉಳಿದ ಸಣ್ಣ ತುಂಡುಗಳನ್ನು ಸೂಚಿಶಿಲ್ಪಿ ಮತ್ತೆ ಜೋಡಿಸುತ್ತಾನೆ. ಹೀಗೆ ಜೋಡಿಸುವಲ್ಲಿ ಕಸೂತಿಯ ಕಲೆಯ ಜ್ಞಾನ ಅವನಿಗೆ ಅವಶ್ಯ. ಸಿಕ್ಕ ಹಾಗೆ ತುಂಡುಗಳನ್ನು ಜೋಡಿಸಿದರೆ ಅಂದವಾಗಲಾರದು. ಬಣ್ಣ ಕೂಡುವಂತೆ, ವಿಶಿಷ್ಟ ಆಕಾರ ಉಂಟಾಗುವಂತೆ ಜೋಡಿಸಬೇಕಾಗುವದು. ಅಂದರೆ ದಿನದ ಉಡುಪಿನಲ್ಲಿಯೂ ಕಸೂತಿಗೆ ಸ್ಥಾನವು ಇದ್ದೇ ಇದೆ.

ಸದ್ಯದ ಯಾಂತ್ರಿಕ ಯುಗದಲ್ಲಿ ಮಾನವ ಜೀವನದಲ್ಲಿಯೇ ಯಂತ್ರವು ಪ್ರಮುಖ ಭಾಗವನ್ನು ಆಕ್ರಮಿಸಿದೆ. ಹಾಗೆಯೇ ಕಸೂತಿಯ ಕಲೆಯ ಕ್ಷೇತ್ರದಲ್ಲಿಯೂ ಯಂತ್ರವು ಪ್ರವೇಶಿಸಿ, ಕೈಕಲೆಯನ್ನು ಹಿಂದೂಡಲು ಯತ್ನಿಸಿದೆ.

ಆದರೆ ಇವೆರಡರಿಂದಲೂ ಮೂಡುವ ಕಲೆಯಲ್ಲಿ ತುಂಬ ಅಂತರವಿದೆ. ಕೈ ಕಸೂತಿಯ ನಯವನ್ನೂ ಸೌಂದರ್ಯವನ್ನೂ ಅರಿತ ಎಷ್ಟೋ ಜನರು ಕನ್ನಡನಾಡಿನ ಈ ಕೈಯ ಕಸೂತಿ ಕಲೆಗೆಯೇ ಪ್ರೋತ್ಸಾಹವನ್ನು ಕೊಡುತ್ತಿದ್ದಾರೆ. ಆದರೆ ಬರೀ ಪ್ರೋತ್ಸಾಹನೆ ಸಾಲದು; ನಾಡಿನ ಜನರು ಕಲೆಯನ್ನು ಮೈಗೂಡಿಸಿಕೊಂಡು, ಸ್ವತಃ ಕಲಾವಿದರಾಗಲು ಯತ್ನಿಸಬೇಕು.

**ಶಬ್ದಾರ್ಥ :**

ಸೂಚಿಶಿಲ್ಪ-- ಹೊಲಿಗೆಯ ಕೆಲಸ; ಹೆಣಿಕೆಯ ಕೆಲಸ; ವ್ಯತ್ಯಾಸ– ಅಂತರ; ನೈಪುಣ್ಯ– ಜಾಣತನ; ವ್ಯಕ್ತವಾಗು– ಗೊತ್ತಾಗು; ಕಲಾಬತ್ತು– ಕಲೆಯನ್ನು ಸುಂದರವಾಗಿ ತೋರಿಸುವ ಜಾಣ್ಮೆ.

**ಪ್ರಶ್ನೆ :**

೧. 'ದ್ರಾವಿಡರು ಕರಿ ಪಾತ್ರೆಗಳ ಮೇಲೆ ಎಲೆ, ಹೂಗಳ ಚಿತ್ರಗಳನ್ನು ಕೊರೆದರಂತೆ' ಅದರ ಅರ್ಥವೇನು ?

೨. ಮನುಷ್ಯನು ಸೂಚಿಶಿಲ್ಪಿಯಿಂದ ನಿರ್ಮಿತನಾಗುತ್ತಾನೆಂದು ಹೇಗೆ ಹೇಳಬೇಕು ?

೩. ಕಸೂತಿ ಕಲೆಯಿಂದ ಮಹಿಳೆಯರಿಗೆ ಏನು ಪ್ರಯೋಜನವಿದೆ ?

೪. ಉತ್ತರದಲ್ಲಿ ಯಾವ ಕಸೂತಿ ಕೆಲಸಗಳನ್ನು ಪುರುಷರು ಮಾಡುತ್ತಿದ್ದಾರೆ ?

೫. ಯಾವ ಕಸೂತಿಗಳು ಪ್ರಸಿದ್ಧವಿವೆ ?.

೬. ಹಳ್ಳಿಗಳಲ್ಲಿಯ ಕಸೂತಿ ಕೆಲಸ ಯಾವ ರೀತಿಯದಿದೆ ?

೭. ದಿನದ ಉಡುಪಿನಲ್ಲಿ ಕಸೂತಿಗೆ ಇರುವ ಸ್ಥಾನ ಯಾವದು ?

೮. ಯಾಂತ್ರಿಕ ಯುಗದಲ್ಲಿ ಕಸೂತಿಯ ಕೈಕೆಲಸ ಹೇಗೆ ಬೆಳೆಯಬಲ್ಲದು ?

**ವ್ಯಾಕರಣ :**

## ಪುನರವಲೋಕನ

ಕೆಳಗಿನ ವಾಕ್ಯಗಳಲ್ಲಿಯ ನಾಮಪದಗಳನ್ನು ಗುರುತಿಸಿರಿ ಮತ್ತು ಅವು ಎಂಥ ನಾಮಪದಗಳು ಎಂಬುದನ್ನು ಸಕಾರಣವಾಗಿ ಹೇಳಿರಿ.

೧. ಅಮೇರಿಕಾ ಖಂಡದ ಅನೇಕ ಭಾಗಗಳಲ್ಲಿ ಕಲ್ಲೆಣ್ಣೆಯು ಜಿಡ್ಡು ಜಿಡ್ಡಾದ ಜವಳು ನೀರಿನಂತೆ ನೆಲದ ಮೇಲೆ ಹರಿಯುತ್ತಿತ್ತು.

೨. ಅವರ ಪ್ರೇಮಕ್ಕೆ ಅವರ ಬ್ರಹ್ಮಚರ್ಯೆ ಎಂದೂ ಅಡ್ಡಗಲ್ಲಾಗಿ ನಿಲ್ಲಲಿಲ್ಲ.

೩. ಸರೋಜಿನಿದೇವಿ ಭಾರತದ ಶ್ರೇಷ್ಠ ಕವಯಿತ್ರಿ.

೪. ಈ ಪಾಳಿಯ ದಂಡನಾಯಕನು ಬಿಶಪ್ ವಿಲ್ಬರ ಫೋರ್ಸನೇ ಆಗಿದ್ದನು.

೫. ಸಾಮಾನ್ಯತಃ ಶ್ರೇಷ್ಠ ಅರ್ಥ ಸಚಿವನಿಗೆ, ಕುಶಲ ರಾಜಕಾರಣಿಗೆ, ಜಾಗತಿಕ ತಕ್ಕಡಿಗೆ ಝೋಲಿ ಹೊಡಿಸುವ ಸರ್ವಾಧಿಕಾರಿಗೆ ಒಂದು ವೇಳೆ ಅವನಂತಹ ಆತ್ಮವಿಶ್ವಾಸ ಬುದ್ಧಿ ಮತ್ತೆ ಇರಲಿಕ್ಕಿಲ್ಲ.

೬. ಕಲಾ ನೈಪುಣ್ಯದಿಂದ ಬಟ್ಟೆಗಳನ್ನು ಸಿದ್ಧಗೊಳಿಸಿ ಆಯಾ ವ್ಯಕ್ತಿಗಳ ಸೌಂದರ್ಯ ವನ್ನು ಹೆಚ್ಚಿಸುವದರಲ್ಲಿ ಸೂಚಿಶಿಲ್ಪಿಯು ತೋರಿಸುವ ಜಾಣ್ಮೆಗಂತೂ ಅಳತೆಯೇ ಇಲ್ಲ.

## ಪ್ರಬಂಧ ಪಾಠ ೨.

## ಅನುಭವಗಳ ವರ್ಣನೆ

(ಅ) ಈಗಾಗಲೇ ನೀವು ಪ್ರಸಂಗಗಳನ್ನು ಹೇಗೆ ಬಣ್ಣಿಸಿ ಬರೆಯಬೇಕೆಂಬುದನ್ನು ಕಲಿತಿರುವಿರಿ. ಇದರಂತೆ ಅನುಭವಗಳನ್ನು ವರ್ಣಿಸಲು ನೀವು ಕಲಿಯಬೇಕು.

ಪ್ರಸಂಗದ ವರ್ಣನೆಗೂ ಅನುಭವದ ವರ್ಣನೆಗೂ ಇರುವ ಅಂತರವೆಂದರೆ ಪ್ರಸಂಗ ದಲ್ಲಿ ಹೊರಗಿನ ಸಂಗತಿಗಳ ವರ್ಣನೆಗೆ ಹೆಚ್ಚು ಮಹತ್ವವಿರುತ್ತದೆ. ಅನುಭವದಲ್ಲಿ ಮನಸ್ಸಿನ ಮೇಲೆ ಉಂಟಾಗುವ ಪ್ರಭಾವ ಮನಸ್ಸಿನಲ್ಲಿ ಹುಟ್ಟುವ ಭಾವನೆಗಳಿಗೆ ಹೆಚ್ಚು ಮಹತ್ವವಿರುತ್ತದೆ. ಆದ್ದರಿಂದ ಪ್ರಸಂಗದ ವರ್ಣನೆಯಲ್ಲಿ ಬಾಹ್ಯ ಸಂಗತಿಗಳ ಕಡೆಗೂ ಅನುಭವದ ವರ್ಣನೆಯಲ್ಲಿ ಆಂತರಿಕ ವಿಷಯದ ಕಡೆಗೂ ಹೆಚ್ಚು ಗಮನ ಕೊಡಬೇಕು. ಅನುಭವದಲ್ಲಿ ವಿಶೇಷವಾಗಿ **ಕರುಣೆ, ಪ್ರೇಮ, ಉತ್ಸಾಹ, ಆನಂದ, ದ್ವೇಷ** ಮೊದ ಲಾದ ಮನಸ್ಸಿನ ಹಲವು ಭಾವಗಳೇ ಹೆಚ್ಚು ಪ್ರಬಲವಾಗಿರುತ್ತವೆ. ಇನ್ನು ಅನುಭವದ ವರ್ಣನೆ ಹೇಗೆ ಮಾಡಬೇಕೆಂಬುದನ್ನು ತಿಳಿಯಬೇಕಾದರೆ ಕೆಳಗಿನ ಕೆಲವು ಉದಾ ಹರಣೆಗಳು ನಿಮಗೆ ಸಹಾಯ ಮಾಡುವವು.

ಚಾರ್ಲಸ ಡಾರ್ವಿನ್‌ನಿಗೆ ಕ್ರಿಮಿಕೀಟಗಳ ಬಗ್ಗೆ ಇದ್ದ **ಉತ್ಸಾಹ, ಆವೇಶ** ಗಳ ಅನುಭವವನ್ನು ಅವನೇ ತನ್ನ ಮಾತುಗಳಲ್ಲಿ ಬಣ್ಣಿಸಿರುವದನ್ನು ನೀವು ೯ನೆಯ ಪಾಠದಲ್ಲಿ ಈಗಾಗಲೇ ಓದಿದ್ದೀರಿ. ಈಗ ಅದನ್ನು ಇನ್ನೊಮ್ಮೆ ಓದಿನೋಡಿರಿ. ಅಂದರೆ ಉತ್ಸಾಹ ಮತ್ತು **ಆವೇಶ**ಗಳ ಅನುಭವದ ವರ್ಣನೆಯ ಕಲ್ಪನೆ ನಿಮಗೆ ಬರುವದು.

ಕಂಪಣನಿಗೆ ಬಂದ **ಅಚ್ಚರಿ**ಯ ಅನುಭವ **ಅದ್ಭುತ**ದ ಅನುಭವ ೧೦ನೆಯ ಪಾಠ ದಲ್ಲಿ ವರ್ಣಿಸಲ್ಪಟ್ಟಿದೆ. ಅದನ್ನು ಇನ್ನೊಮ್ಮೆ ಓದಿ ನೋಡಿರಿ.

೧೨ನೆಯ ಪಾಠದಲ್ಲಿ ಲಿವ್ಹಿಂಗಸ್ಟನ್‌ನಿಗೆ ಸಿಂಹದಿಂದ ಉಂಟಾದ **ಭಯ**ದ ಅನು ಭವದ ವರ್ಣನೆಯನ್ನು ನೀವು ಕಾಣುವಿರಿ.

ಹೀಗೆ ಅನುಭವದ ವರ್ಣನೆಗಳ ಈ ಮೂರು ಉದಾಹರಣೆಗಳ ಸಹಾಯದಿಂದ ನಿಮಗೆ ಬಂದ ಅನುಭವಗಳನ್ನು ಬಣ್ಣಿಸಲು ಪ್ರಯತ್ನಿಸಿರಿ.

(ಬ) ಕೆಳಗೆ ಕೊಟ್ಟವುಗಳಲ್ಲಿ ಬೇಕಾದ ಒಂದನ್ನು ಬರೆಯಿರಿ.

೧. ಲಕ್ಕುಂಡಿಯಂಥ ಒಂದು ಐತಿಹಾಸಿಕ ಸ್ಥಳವನ್ನು ನೋಡಲಿಕ್ಕೆ ಹೋದಾಗ ನಿಮಗಾದ ಅನುಭವದ ವರ್ಣನೆ.

೨. ಒಂದು ದಿನ ಪತ್ರಿಕೆಯ ಕಾರ್ಯಾಲಯವನ್ನು ನೋಡಲಿಕ್ಕೆ ಹೋದಾಗ ನಿಮಗಾದ ಅನುಭವದ ವರ್ಣನೆ.

೩. ನೀವು ಮಾಡಿದ ಒಂದು ಪ್ರವಾಸದಲ್ಲಿ ನಿಮಗೆ ಬಂದ ಅನುಭವದ ವರ್ಣನೆ.

೪. ನಿಮ್ಮ ಶಾಲೆಯ ವಾಕ್‌ಸ್ಪರ್ಧೆಯಲ್ಲಿ ನೀವು ಪ್ರಥಮ ಬಹುಮಾನ ದೊರಕಿಸಿದಾಗ ನಿಮಗಾದ ಅನುಭವದ ವರ್ಣನೆ.

೫. ನಿಮ್ಮ ಹುಟ್ಟು ಹಬ್ಬದ ದಿನ ನಿಮಗೆ ಬಂದ ಅನುಭವದ ವರ್ಣನೆ.

೬. ಓಡುವ ಪಂದ್ಯಾಟದಲ್ಲಿ ನೀವು ಸೋತಾಗ ನಿಮಗೆ ಬಂದ ಅನುಭವದ ವರ್ಣನೆ.

## ೧೪. ನಾಡಹಬ್ಬ

[ಹಿಂದುಗಳು ಉತ್ಸವ ಪ್ರಿಯರು. ಆದರೆ ಪ್ರತಿಯೊಂದು ಹಬ್ಬದ ಹಿನ್ನೆಲೆಯನ್ನು ನಾವು ನೋಡಿದರೆ ಉತ್ಸವಕ್ಕಿಂತಲೂ ನಾಡು, ಹಾಗು ನುಡಿಯ ಘನತೆಯೇ ಅಲ್ಲಿ ಎದ್ದು ಕಾಣುವದು. ನಮ್ಮ ವಿಶಾಲವಾದ ಭಾರತದಲ್ಲಿ ನಾನಾಬಗೆಯ ಜನರು ವಾಸಿಸಿರುವರು. ಆ ಆ ಭಾಗದ ಹಬ್ಬದ ವೈಶಿಷ್ಟ್ಯ ಬೇರೆ ಬೇರೆ ಇರಬಹುದು. ಆದರೆ ಇಡೀ ಭಾರತಕ್ಕೆ ಅನ್ವಯಿಸುವಂತಹ ಅನೇಕ ಹಬ್ಬಗಳು ಇರುವವು. ಈ ಹಬ್ಬಗಳು ನಾಡಿನ ಸಂಸ್ಕೃತಿಯನ್ನು ಎತ್ತಿ ತೋರಿಸುವವು. ಅವುಗಳ ಬಗ್ಗೆ ಕರ್ನಾಟಕ ಕುಲಪುರೋಹಿತರಾದ ಶ್ರೀಮಾನ್ ಆಲೂರ ವೆಂಕಟರಾಯರು ಹೇಳಿದುದನ್ನು ನೋಡಿರಿ.]

★ ★ ★

ನಾಡಹಬ್ಬವೆಂದರೇನು? ನಾಡಹಬ್ಬವೆಂದರೆ ನಾಡಿನ ಸಲುವಾಗಿ ಅಂದರೆ ನಮ್ಮ ಕನ್ನಡ ನಾಡಿನ ಸಲುವಾಗಿ ಕರ್ನಾಟಕದವರು ಆಚರಿಸುವ ವಿಶೇಷ ಹಬ್ಬ. ದೇವರ ಅವತಾರಗಳಾದ ರಾಮ ಕೃಷ್ಣಾದಿಗಳು ಹುಟ್ಟಿದ ದಿನಗಳನ್ನು ಆನಂದದ ದಿನಗಳೆಂದು ಆಚರಿಸುವ ಪದ್ಧತಿ. ಇಡೀ ಭರತಖಂಡದಲ್ಲಿ ಈ ರೂಢಿಯಿದೆ.

ಹಾಗೇ ಕರ್ನಾಟಕದಲ್ಲಿಯೂ ಇಂದಿಗೂ ಇದು ಆಚರಿಸಲ್ಪಡುತ್ತದೆ. ಇತ್ತೀಚಿಗೆ ರಾಷ್ಟ್ರದಲ್ಲಿ ದೇಶಾಭಿಮಾನವನ್ನು ಹುಟ್ಟಿಸುವದಕ್ಕಾಗಿ ಗಣೇಶ ಉತ್ಸವಗಳನ್ನು ಧಾರ್ಮಿಕ ಮತ್ತು ರಾಷ್ಟ್ರೀಯ ಹೀಗೆ ವಿವಿಧ ಜಾಗ್ರತಿಗಾಗಿ ಬಳಸುವ ರೂಢಿಯು ೪೦ – ೫೦ ವರ್ಷಗಳ ಹಿಂದೆ ಲೋಕಮಾನ್ಯ ಟಿಳಕರಿಂದ ಪ್ರಾರಂಭವಾಯಿತು.



ಆಗ ಪ್ರಾರಂಭವಾದ ಗಣೇಶ ಉತ್ಸವಗಳು ಕರ್ನಾಟಕದಲ್ಲಿ ಇಂದಿಗೂ ಪ್ರಚಾರದಲ್ಲಿ ಅವೆ. ಹಿಂದೆ ಕರ್ನಾಟಕತ್ವದ ಜಾಗ್ರತಿಗಾಗಿ ಶ್ರೀ ವಿದ್ಯಾರಣ್ಯರ ಉತ್ಸವವು ಪ್ರಾರಂಭವಾಯಿತು. ಕರ್ನಾಟಕದ ಪ್ರಾಂತದಲ್ಲಿ ಕರ್ನಾಟಕದ ವಿಷಯವಾಗಿ ವಿಶೇಷ ಅಭಿಮಾನವು ಹುಟ್ಟಿ ಕರ್ನಾಟಕದ ಸರ್ವವಿಧ ಚಟುವಟಿಕೆಗಳಲ್ಲಿ ನವಚೈತನ್ಯ ಉಂಟಾಗಬೇಕೆಂಬುದೇ ಈ ಉತ್ಸವದ ಉದ್ದೇಶವಾಗಿತ್ತು. ೨೫ – ೨೬ ವರ್ಷಗಳ ಹಿಂದೆ ಕರ್ನಾಟಕದಲ್ಲಿ ನವರಾತ್ರಿಯನ್ನು ಕರ್ನಾಟಕದ ವಿಶೇಷ ಉತ್ಸವವೆಂದು ಆಚರಿಸಲ್ಪಡಲು ಮೊದಲಾಯಿತು. ಹೀಗೆ ವಿಸ್ತೃತ ಸ್ವರೂಪವನ್ನು ಹೊಂದಿದ ನವರಾತ್ರಿ ಉತ್ಸವಕ್ಕೇನೇ ನಾಡಹಬ್ಬ' ವೆಂಬ ಹೆಸರು. ಕರ್ನಾಟಕದ ಸರ್ವಾಂಗೀಣ ಉನ್ನತಿಯಾಗಬೇಕೆಂಬುದೇ ಅಂದರೆ ಧಾರ್ಮಿಕ, ರಾಷ್ಟ್ರೀಯ ಮತ್ತು ಸಾಮಾಜಿಕ ಹೀಗೆ ತ್ರಿವಿಧ ಜಾಗ್ರತಿಯೇ ಈ ನಾಡಹಬ್ಬದ ಮುಖ್ಯ ಉದ್ದೇಶ. ಯಾವದೇ ರಾಷ್ಟ್ರವಾಗಲಿ, ಪ್ರಾಂತವಾಗಲಿ ಅದರ ಸರ್ವವಿಧ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ, ಔದ್ಯೋಗಿಕ, ರಾಜಕೀಯ – ಉನ್ನತಿಯಾಗದಿದ್ದರೆ ಆ ರಾಷ್ಟ್ರವು ಎಂದೂ ಚೈತನ್ಯಯುಕ್ತವಾಗಲಾರದು. ಮನುಷ್ಯನ ಸರ್ವಾಂಗಗಳಲ್ಲಿಯೂ ಚೈತನ್ಯವು ಹರಿಯುತ್ತಿದ್ದರೇನೇ ಆತನು ಜೀವಂತನಿದ್ದುದಕ್ಕೆ ಸಾರ್ಥಕ. ನಾಡಿನ ವಿಚಾರವೂ ಹಾಗೆಯೆ.

ಈ ನವರಾತ್ರಿ ಹಬ್ಬವನ್ನೇ ನಮ್ಮ ಕರ್ನಾಟಕದ ನಾಡಹಬ್ಬವನ್ನಾಗಿ ನಮ್ಮ ಮುಖಂಡರು ಆರಿಸಿರುವುದರಲ್ಲಿ ಒಂದು ವಿಶೇಷ ಉದ್ದೇಶವಿದೆ. ಅದೆಂದರೆ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವದಲ್ಲಿ ಬಂದಾಗ ವಿಜಯನಗರದ ನಮ್ಮ ಅರಸರು ಈ ನವರಾತ್ರಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತ ಬಂದಿರುವರು. "ಮಹಾನವಮಿಯ ದಿಬ್ಬ" ವೆಂಬ ಹೆಸರಿನಿಂದ ಕರೆಯಲ್ಪಟ್ಟು ಇಂದಿಗೂ ಅಸ್ತಿತ್ವದಲ್ಲಿರುವ ಆ ಶಿಲಾಮಯ ಸುಂದರವಾದ ಮತ್ತು ವಿಸ್ತಾರವಾದ ಪೀಠವೇ

ಆದಕ್ಕೆ ಸಾಕ್ಷಿ. ಈ ನವರಾತ್ರಿ ಉತ್ಸವವೇ ದಸರಾ ಉತ್ಸವವೆಂಬ ಹೆಸರಿನಿಂದ ಇಂದಿಗೂ ಮೈಸೂರ ಸಂಸ್ಥಾನದಲ್ಲಿ ಅತ್ಯಂತ ವೈಭವದಿಂದ ಪಾಲಿಸಲ್ಪಡುತ್ತಿರುವುದು. ನಮ್ಮ ಮುಖಂಡರು ಈ ನವರಾತ್ರಿ ಉತ್ಸವವನ್ನೇ ಏಕೆ ಆರಿಸಿದರೆಂಬುದಕ್ಕೆ, ಈ ನಮ್ಮ ಐತಿಹಾಸಿಕ ಪರಂಪರೆಯೇ ಕಾರಣವು.

ಅಲ್ಲದೆ, ಈ ನಾಡಹಬ್ಬವು ನವರಾತ್ರಿಯ ಒಂಬತ್ತು ದಿವಸಗಳಲ್ಲಿಯೂ ಹತ್ತನೆಯ ತಿಥಿಯಾದ ದಸರೆಯ ದಿನವೂ ಹೀಗೆ ಒಟ್ಟು ಹತ್ತು ದಿನಗಳಲ್ಲಿ ನಡೆಯುತ್ತಿರುವುದರಿಂದ ಕರ್ನಾಟಕದ ಸರ್ವಾಂಗೀಣ ಜಾಗ್ರತಿಗೆ ಅತ್ಯುತ್ತಮವಾದ ಇಷ್ಟು ದೊಡ್ಡ ಹಬ್ಬ ಬೇರೊಂದಿಲ್ಲ. ಈ ಹತ್ತು ದಿನಗಳಲ್ಲಿ ಅನೇಕರ ಮನೆಗಳಲ್ಲಿ ಪರಮಾತ್ಮನ ಮತ್ತು ಮಹಾಲಕ್ಷ್ಮೀ ಅಥವಾ ತುಳಜಾಭವಾನಿ, ಅಂಬಾಭವಾನಿ ಮುಂತಾದ ಶಕ್ತಿದೇವತೆಗಳ ಪೂಜೆಯು ನಡೆಯುತ್ತದೆ. ಪುಸ್ತಕ ಪೂಜೆ,



ವ್ಯಾಸ ಪೂಜೆ, ದುರ್ಗಾಷ್ಟಮಿ ಮುಂತಾದವುಗಳು ಇದೇ ನವರಾತ್ರಿಯಲ್ಲಿಯೇ ಜರುಗುತ್ತವೆ. ಕ್ಷತ್ರಿಯರ ಹಬ್ಬವಾದ ದಸರೆಯೂ ಈ ಹಬ್ಬದಲ್ಲಿಯೇ. ಹೀಗೆ ಅನೇಕ ವಿಧದ ಧಾರ್ಮಿಕ ಪೂಜೆಗಳಿಗೆ ಇಂಬುಕೊಡುವ ಈ ದೀರ್ಘ ಮಹೋತ್ಸವವನ್ನು ಹೊಸ ಜಾಗ್ರತಿಯ ಸಲುವಾಗಿ ಆರಿಸಿಕೊಂಡರೆ ಆಶ್ಚರ್ಯವೇನು?

ಹಬ್ಬಗಳೆಂದರೆ ಕೇವಲ ಆನಂದದ ದಿನಗಳಷ್ಟೇ ಅಲ್ಲ. ರಾಮ – ಕೃಷ್ಣಾದಿಗಳ ಜಯಂತಿಗಳನ್ನು ಆಚರಿಸುವುದರಲ್ಲಿ ಆ ದಿವಸಗಳಲ್ಲಿ ರಾಮ – ಕೃಷ್ಣಾದಿಗಳ ಚರಿತ್ರವು ಆ ಒಂದು ದಿವಸವಾದರೂ ನಮ್ಮ ಕಣ್ಣುಮುಂದೆ ಕಟ್ಟಿದಂತಾಗಿ ನಮ್ಮ

ಶೀಲ – ಸ್ವಭಾವಗಳು ಸುಧಾರಿಸಲ್ಪಡಬೇಕೆಂಬುದೇ ಮುಖ್ಯ ಉದ್ದೇಶವಾಗಿತ್ತು. ಬುದ್ಧ, ಮಹಾವೀರ, ಶಿವಾಜಿ, ವಿದ್ಯಾರಣ್ಯ ಮುಂತಾದ ಮಹಾತ್ಮರ ಪುಣ್ಯ ತಿಥಿಗಳನ್ನು ಪಾಲಿಸುವುದರಲ್ಲಿ ನಮ್ಮ ಮತ್ತು ನಮ್ಮ ನಾಡಿನ ಉನ್ನತಿಯಾಗ ಬೇಕೆಂಬುದೇ ಉದ್ದೇಶ.

ಪರಮಾತ್ಮನು ಭೂಮಿಯಲ್ಲಿ ಅವತಾರ ಮಾಡುವದರಿಂದಲೇ ಆ ಅವ ತಾರ ಕಾರ್ಯವು ಸಫಲವಾಗುವದರಿಂದ ಆತನ ಅವತಾರಗಳ ಜಯಂತಿಯನ್ನು ಅಂದರೆ ಹುಟ್ಟಿದ ದಿನಗಳನ್ನು ಹಬ್ಬಗಳನ್ನಾಗಿ ಆಚರಿಸುತ್ತೇವೆ. ಮಹಾತ್ಮರು ಅಥವಾ ಮಹಾಪುರುಷರು ಹುಟ್ಟಿ, ಅನೇಕ ವರ್ಷ ಬಾಳಿ ತಮ್ಮ ವಿಶಿಷ್ಟ ಕಾರ್ಯ ಗಳನ್ನು ಸಫಲಗೊಳಿಸಿದಾಗ ಮಾತ್ರ ಅವರ ಜನ್ಮಗಳ ಸಾಫಲ್ಯ. ಆದಕಾರಣ ಅಂಥ ಮಹಾನುಭಾವರು ಮರಣಹೊಂದಿದ ದಿನಗಳನ್ನು ಪುಣ್ಯ ತಿಥಿಗಳೆಂದು ಪಾಲಿಸುತ್ತೇವೆ. ಮಾನವನು ಹುಟ್ಟಿದ ಮಾತ್ರಕ್ಕೆ ಆತನ ಜನ್ಮ ಸಾಫಲ್ಯವಾಗು ವದಿಲ್ಲ. ಆತನು ಬಾಳಿ ಧಾರ್ಮಿಕ ಅಥವಾ ರಾಷ್ಟ್ರೀಯ ಕಾರ್ಯಗಳನ್ನು ನೆರ ವೇರಿಸಿದ ಬಳಿಕ ಆತನ ಜನ್ಮ ಸಾಫಲ್ಯವಾಗುತ್ತದೆ.

ಈ ನವರಾತ್ರಿಯ ನಾಡಹಬ್ಬದಲ್ಲಿ ಕರ್ನಾಟಕಸ್ಥರು ತಮ್ಮ ನಾಡಿನ ಉನ್ನ ತಿಗೆ ಪೋಷಕವಾದ ಸರ್ವವಿಧ ಚಟುವಟಿಕೆಗಳನ್ನು ಕೈಕೊಳ್ಳುತ್ತಿರುವದರಿಂದ ಕರ್ನಾಟಕದ ಧಾರ್ಮಿಕತೆಗೆ ಮಾತ್ರವೇ ಅಲ್ಲ; ಸಾಂಸ್ಕೃತಿಕ, ಔದ್ಯೋಗಿಕ, ರಾಜಕೀಯ ಪ್ರಗತಿಗಳಿಗೆ ಸರ್ವವಿಧದಿಂದಲೂ ಸಹಾಯವಾಗುತ್ತದೆ.

ರಾಷ್ಟ್ರದಲ್ಲಿ ಚೈತನ್ಯ ಹುಟ್ಟಿಸುವದಕ್ಕಾಗಿ ಬೇಕಾಗುವ ಯಾವತ್ತೂ ಪ್ರಸಂಗ ಗಳನ್ನು ರಾಷ್ಟ್ರಹಿತಕ್ಕಾಗಿ ಉಪಯೋಗಿಸಿಕೊಳ್ಳುವುದು ದೇಶಾಭಿಮಾನಿಗಳ ಕರ್ತವ್ಯ. ವರ್ಷಾನುವರ್ಷ ಇಂಥ ಉತ್ಸವಗಳನ್ನು ಮಾಡುತ್ತ ಕೂಡ್ರುವದು ಸಾಧ್ಯವೂ ಅಲ್ಲ; ಇಷ್ಟವೂ ಅಲ್ಲ. ಹಾಗೆಯೇ ಭಾಷಣಾದಿಗಳನ್ನು ಮಾಡು ವುದರಿಂದ ಯಾವ ಮಹಾ ಕಾರ್ಯವಾದೀತೆಂದು ಹೀಯಾಳಿಸುವುದು ಹೀನ ಬುದ್ಧಿಯೇ ಸರಿ. ನಾಡಹಬ್ಬದಲ್ಲಿ ಕೇವಲ ಭಾಷಣಗಳನ್ನು ಮಾತ್ರವೇ ಏರ್ಪ ಡಿಸದೆ ಔದ್ಯೋಗಿಕ ಪ್ರದರ್ಶನ, ಖಾದಿ ಪ್ರದರ್ಶನ, ಸಂಗೀತಕಲೆ, ಚಿತ್ರಕಲಾ ಪ್ರದರ್ಶನ, ಸಮ್ಮೇಲನಗಳು, ಕರ್ನಾಟಕ ರಾಜಕೀಯ ಏಕೀಕರಣ ಮುಂತಾದ ಅನೇಕ ವಿಧದ ಚಟುವಟಿಕೆಗಳಿಗೆ ನಮ್ಮವರು ಆಸ್ಪದ ಕೊಡುತ್ತ ಬಂದಿರುವರು.

ಇವೆಲ್ಲ ಕಾರಣಗಳ ಮೂಲಕವಾಗಿ ಕರ್ನಾಟಕದವರು ಪ್ರತಿವರ್ಷ ಹಳ್ಳಿ– ಹಳ್ಳಿಗಳಲ್ಲಿಯೂ ಕೂಡ ಈ ನಾಡಹಬ್ಬವನ್ನು ತಪ್ಪದೇ ಆಚರಿಸುವುದು ಕನ್ನಡಿಗ ರೆಲ್ಲರ ಕರ್ತವ್ಯ.

**ಶಬ್ದಾರ್ಥ:**

ಸಾರ್ಥಕ – ಯೋಗ್ಯ; ಸರ್ವಾಂಗೀಣ – ಎಲ್ಲ ರೀತಿಯಿಂದ; ಇಂಬುಕೊಡು – ಸ್ಥಳಮಾಡಿಕೊಡು, ಅವಕಾಶಮಾಡಿಕೊಡು.

**ಪ್ರಶ್ನೆ:**

೧. ನಾಡಹಬ್ಬವೆಂದರೇನು ?
೨. ಭರತಖಂಡದಲ್ಲಿ ಅವುಗಳನ್ನು ಹೇಗೆ ಮತ್ತು ಏಕೆ ಆಚರಿಸುತ್ತಾರೆ ?
೩. ಲೋಕಮಾನ್ಯ ಟಿಳಕರು ಗಣೇಶನ ಹಬ್ಬವನ್ನು ಯಾವ ದೃಷ್ಟಿಯಿಂದ ಆಚರಿಸ ಹತ್ತಿದರು ?
೪. ಕರ್ನಾಟಕದವರ ನಾಡಹಬ್ಬವು ಯಾವದು ಮತ್ತು ಅದನ್ನು ಅವರು ಹೇಗೆ ಆಚರಿಸುವರು ?
೫. ನವರಾತ್ರಿಯಲ್ಲಿ ಯಾವ ಯಾವ ದೇವತೆಗಳ ಪೂಜೆ ನಡೆಯುವದು ?
೬. ಮಹಾಪುರುಷರ 'ಜಯಂತಿ' ಯನ್ನು ಆಚರಿಸುವ ಕಾರಣವೇನು ?
೭. ನಾಡಹಬ್ಬಗಳ ಉದ್ದೇಶವೇನು ?
೮. ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.
೧. ಸರ್ವಾಂಗೀಣ. ೨. ಸಫಲವಾಗು. ೩. ಜಯಂತಿ. ೪. ಪ್ರ

**ವ್ಯಾಕರಣ:**

## ಪುರುಷಾರ್ಥಕ ಸರ್ವನಾಮುಗಳು

(ಅ) ನೀವು ಹನೆಯ ಇಯತ್ತೆಯಲ್ಲಿ ಸರ್ವನಾಮವೆಂದರೇನು ಎಂಬುದನ್ನು ಕಲಿತಿರುವಿರಿ. ಈಗ ಸರ್ವನಾಮುಗಳಲ್ಲಿರುವ ಪ್ರಕಾರಗಳನ್ನು ಕಲಿಯೋಣ.

ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಪದಗಳನ್ನು ನಿರೀಕ್ಷಿಸಿರಿ.

ರಾಮನು ಗೋವಿಂದನನ್ನು ಕೇಳಿದನು "**ನೀನು** ಮೈಸೂರಿನ ನಾಡಹಬ್ಬದ ಉತ್ಸವವನ್ನು ನೋಡಿರುವಿಯಾ ?" ಗೋವಿಂದ ಹೇಳಿದನು "**ನಾನು** ಇನ್ನೂ ಮೈಸೂರಿಗೆ ಹೋಗಿಬಂದಿಲ್ಲ. ಮುಂದಿನ ವರುಷ ಹೋಗಿ ನೋಡಿ ಬರುತ್ತೇನೆ."

ಇಲ್ಲಿ ಬಂದ ದಪ್ಪಕ್ಕರದ ಪದಗಳನ್ನು ನೋಡಿರಿ. ಮೊದಲನೆಯ ವಾಕ್ಯದಲ್ಲಿ ಬಂದ **ನೀನು** ಎಂಬ ಪದವು ಗೋವಿಂದ ಎಂಬ ಪದದ ಬದಲಾಗಿ ಉಪಯೋಗಿಸಲ್ಪಟ್ಟಿದೆ. ಎರಡನೆಯ ವಾಕ್ಯದಲ್ಲಿ ಬಂದ **ನಾನು** ಎನ್ನುವ ಪದವಾದರೂ ಗೋವಿಂದ ಎಂಬ ಪದದ ಬದಲಾಗಿಯೇ ಉಪಯೋಗಿಸಲ್ಪಟ್ಟಿದೆ. ಗೋವಿಂದ ಎಂಬುದು ನಾಮಪದ. ಆದ್ದರಿಂದ ಅದರ ಬದಲಾಗಿ ಉಪಯೋಗಿಸಲ್ಪಟ್ಟ **ನಾನು**. **ನೀನು** ಎಂಬ ಪದಗಳು ಸರ್ವನಾಮುಗಳು. **ನಾನು, ನೀನು** ಇವು ಪುರುಷಾರ್ಥಕ ಸರ್ವನಾಮುಗಳು. ಪುರುಷಾರ್ಥಕ ಸರ್ವನಾಮುಗಳಲ್ಲಿ ಮೂರು ಪ್ರಕಾರಗಳಿರುತ್ತವೆ.

೧. ಉತ್ತಮ ಪುರುಷದ ಸರ್ವನಾಮಗಳು.
೨. ಮಧ್ಯಮ ಪುರುಷದ ಸರ್ವನಾಮಗಳು.
೩. ಪ್ರಥಮ ಪುರುಷದ ಸರ್ವನಾಮಗಳು.

ಉತ್ತಮ ಪುರುಷದ ಸರ್ವನಾಮಗಳು— ನಾನು, ನಾವು.
ಮಧ್ಯಮ ಪುರುಷದ ಸರ್ವನಾಮಗಳು— ನೀನು, ನೀವು.
ಪ್ರಥಮ ಪುರುಷದ ಸರ್ವನಾಮಗಳು— ಅವನು, ಅವಳು, ಅವರು, ಅದು, ಅವು.

ಈ ಪುರುಷಾರ್ಥಕ ಸರ್ವನಾಮಗಳಲ್ಲದೆ '**ತಾನು**' '**ತಾವು**' ಎಂಬ ಸರ್ವನಾಮಗಳನ್ನೂ ನಾವು ಉಪಯೋಗಿಸುತ್ತೇವೆ. '**ತಾನು**' '**ತಾವು**' ಎಂಬ ಸರ್ವನಾಮಗಳನ್ನು ಆತ್ಮಾರ್ಥಕ ಸರ್ವನಾಮಗಳೆಂದು ಕರೆಯುತ್ತಾರೆ. ಆತ್ಮಾರ್ಥಕವೆಂದರೆ ಸ್ವಂತಕ್ಕಾಗಿ ಉಪಯೋಗಿಸುವ ಎಂದು ಅರ್ಥ.

(ಬ) ಕೆಳಗೆಕೊಟ್ಟ ವಾಕ್ಯಗಳಲ್ಲಿ ತೆರವಿದ್ದ ಸ್ಥಳಗಳಲ್ಲಿ ಯೋಗ್ಯವಾದ ಪುರುಷಾರ್ಥಕ ಸರ್ವನಾಮಗಳನ್ನು ತುಂಬಿರಿ.

೧. ...... ಊರಿಗೆ ಹೋಗು.
೨. ........ ಮನೆಯಲ್ಲಿ ಇರುತ್ತೇವೆ.
೩. ........ ಪುಸ್ತಕಗಳನ್ನು ಓದುತ್ತಿದ್ದಾರೆ.
೪. ........ ಸೊಗಸಾಗಿವೆ.
೫. ........ ಎಲ್ಲಿಂದ ಬಂದಿರಿ ?

೧೫.




[ ಕವಿಪುಂಗವ ರವೀಂದ್ರರನ್ನರಿಯದವರಿಲ್ಲ. ಅವರ ಖ್ಯಾತಿಯು ಜಗತ್ತಿನಲ್ಲೆಲ್ಲ ಹಬ್ಬಿದೆ. ರವೀಂದ್ರನಾಥ ಠಾಕೂರರು ಕೇವಲ ಕವಿಗಳೆಂದು ಹೆಸರುವಾಸಿಯಾಗಿರುವರಲ್ಲದೆ, ಒಳ್ಳೇ ನುರಿತ, ಶಿಕ್ಷಣ ಮಾರ್ಗದರ್ಶಿಗಳೆಂದು ಮತ್ತು ಶಿಕ್ಷಣ ಕ್ಷೇತ್ರದಲ್ಲಿ ತಮ್ಮದೇ ಆದ ಒಂದು ಹೊಸ ಪಂಥವನ್ನು ಹಾಕಿದವರೆಂದೂ ಪ್ರಸಿದ್ಧರಾಗಿದ್ದಾರೆ. ಅವರು ಕಟ್ಟಿ ಬೆಳೆಸಿದ ಸಂಸ್ಥೆಯೇ ಶಾಂತಿನಿಕೇತನ. ಈ ಶಿಕ್ಷಣ ಸಂಸ್ಥೆಯ ಬಗ್ಗೆ ನೀವು ಇಲ್ಲಿ ಓದುವಿರಿ. ]

■ ■

ರವೀಂದ್ರರ ಹೆಸರನ್ನು ಕೇಳಿದವರ ಸ್ಮೃತಿಪಥದಲ್ಲಿ ಬರುವ ಅವರ ಇನ್ನೊಂದು ಘನವಾದ ಕಾರ್ಯವೆಂದರೆ 'ಶಾಂತಿನಿಕೇತನ' ಎಂಬಲ್ಲಿ ಅವರು ಸ್ಥಾಪಿಸಿದ ಶಿಕ್ಷಣ ಸಂಸ್ಥೆ. ಸುಮಾರು ನಾಲ್ವತ್ತು ವರ್ಷಗಳ ಹಿಂದೆ ಬ್ರಹ್ಮಚರ್ಯಾ-ಶ್ರಮವೆಂಬ ಹೆಸರಿನಿಂದ ಹೊರಟ ಕೆಲವು ವಿದ್ಯಾರ್ಥಿಗಳಿಂದ ಮಾತ್ರ ಕೂಡಿದ ಸಣ್ಣದೊಂದು ಶಾಲೆ, ಈಗ "ವಿಶ್ವಭಾರತಿ" ಎಂಬ ಹೆಸರಿನಿಂದ ಜಗತ್ತಿನಲ್ಲೆಲ್ಲ ಪ್ರಸಿದ್ಧವಾದ ವಿಶ್ವವಿದ್ಯಾಲಯವಾಗಿ ನಿಂತಿದೆ. ಬಯಲ ನೆಲದಲ್ಲಿ, ಗಿಡ - ಮರಗಳ ನಿಡುನೆಳಲಲ್ಲಿ, ನಿಸರ್ಗದ ವಾತಾವರಣದಲ್ಲಿ ದೊರೆಯುವ ಶಾಂತಿಯೇ ಮಕ್ಕಳ ಶಿಕ್ಷಣಕ್ಕೆ ತಕ್ಕ ಸನ್ನಿವೇಶವೆಂದೂ ಮಕ್ಕಳ ಜೀವನವು ಐಶ್ವರ್ಯ ಲೋಲುಪವಾಗದೆ ಶುದ್ಧವೂ ಸರಳವೂ ಆಗಬೇಕಾದುದು ಅವಶ್ಯವೆಂದೂ, ಶಿಕ್ಷಣವು ಶಿಕ್ಷೆಯಾಗದೆ ಆನಂದದ ಸಾಧನವಾಗಬೇಕೆಂದೂ ಬಗೆದು, ಅದಕ್ಕನುಕೂಲವಾದ ಪರಿಸ್ಥಿತಿಯನ್ನು ಕಲ್ಪಿಸಲು ಹೊರಡಿಸಿದ ಸಂಸ್ಥೆಯದು; ಈಗ ವಿಶ್ವದ ಒಂದು ಮಹಾವಿದ್ಯಾಲಯವಾಗಿ ಪರಿಣಮಿಸಿದೆ. ನಾನಾ ದೃಷ್ಟಿಯಿಂದ ಸತ್ಯ ಸಂಧಾನದಲ್ಲಿ ನಿರತನಾದ ಮಾನವನ ಮನಸ್ಸಿನ ಪರಿಚಯವನ್ನು ಮಾಡಿಕೊಳ್ಳುವುದು; ಪಾಶ್ಚಾತ್ಯ ಸಂಸ್ಕೃತಿಯ ಗುಟ್ಟನ್ನು, ವೈವಿಧ್ಯದಲ್ಲಿ ಏಕತೆಯನ್ನು ಕಾಣುವ

ಪೌರ್ವಾತ್ಯ ದೃಷ್ಟಿಯಿಂದ ಅರಿತುಕೊಳ್ಳಲು ಪ್ರಯತ್ನಿಸುವುದು; ಪೂರ್ವ – ಪಶ್ಚಿಮ ಸಂಸ್ಕೃತಿಗಳ ಸರಿಬೆರಕೆಯನ್ನು ಮಾಡುವುದಕ್ಕೆ ಯತ್ನಿಸುವುದು; ಹಿಂದು, ಬೌದ್ಧ, ಜೈನ, ಇಸ್ಲಾಮು, ಕ್ರೈಸ್ತ ಮೊದಲಾದ ಧರ್ಮಗಳ ತಿರುಳನ್ನೂ ಅವುಗಳಿಂದ ಪ್ರಚೋದಿತವಾದ ಸಾಹಿತ್ಯ, ಸಂಸ್ಕೃತಿ, ಶಾಸ್ತ್ರ, ತತ್ತ್ವ ಮೊದಲಾದವುಗಳನ್ನೂ ಸಹಾನುಭೂತಿಯಿಂದ ಅಭ್ಯಸಿಸುವುದೂ— ಇವೇ ಈ ಸಂಸ್ಥೆಯ ಗುರಿಗಳಾಗಿವೆ. ರವೀಂದ್ರರು ಈ ಸಂಸ್ಥೆಗೆ ತಮ್ಮ ತನು–ಮನ–ಧನಗಳನ್ನು ಎರಡಿಲ್ಲದೆ ಎರೆಮದರ ಫಲವಾಗಿ 'ವಿಶ್ವಭಾರತಿ' ಎಂದರೆ 'ಭರತ ವರ್ಷ' ಎಂಬ ಗಾಂಧೀಜಿಯವರ ಅಭಿಪ್ರಾಯ ಯಥಾರ್ಥವಾಗಿದೆ.

ವಿಶ್ವಭಾರತಿಯಲ್ಲಿ ಬಾಲ – ಬಾಲಕಿಯರು ಕೂಡಿಯೇ ಕಲಿಯುವ ಯೋಜನೆ ಇರುವುದು; ಆದರೂ ಸ್ತ್ರೀಯರಿಗೆ ಯೋಗ್ಯವಾದ ಶಿಕ್ಷಣವನ್ನು ಶಾಸ್ತ್ರೀಯ ಪದ್ಧತಿಯಿಂದ ಕೊಡುವುದಕ್ಕೆ ಬೇರೊಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸುವದು ರವೀಂದ್ರರ ಹೆಬ್ಬಯಕೆಯಾಗಿದ್ದಿತು. ಅದು ಕೈಗೂಡದೆ ಹೋದುದು ವಿಷಾದಕರವಾಗಿದೆ.

ಆರಂಭದ ಕಾಲದಲ್ಲಿ ಈ ಸಂಸ್ಥೆಯ ವಿದ್ಯಾರ್ಥಿಗಳಿಗೆ ರವೀಂದ್ರರು ತಾವೇ ಪಾಠ ಹೇಳಿಕೊಡುತ್ತಿದ್ದರು. ಅವರೊಡನೆ ಆಟವಾಡುತ್ತಿದ್ದರು. ಸಾಯಂಕಾಲದಲ್ಲಿ ಕಥೆಗಳನ್ನೂ ಹಾಡುಗಳನ್ನೂ ಹೇಳುತ್ತ ಅವರೊಂದಿಗೆ ಕಾಲಕಳೆಯುತ್ತಿದ್ದರು. ಸಂಸ್ಥೆಯು ಬೆಳೆದಂತೆ, ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿದಂತೆ ರವೀಂದ್ರರು ಹೊಸ ಹೊಸ ಯೋಜನೆಗಳನ್ನು ಕೈಕೊಂಡರು. ಆತ್ಮರಕ್ಷಣೆಯ ಉಪಾಯಗಳು ವಿದ್ಯಾರ್ಥಿಗಳಿಗೆ ಚೆನ್ನಾಗಿ ಅಳವಡಬೇಕೆಂದು ಆ ವಿದ್ಯೆಯಲ್ಲಿ ನಿಷ್ಣಾತರಾದ ಜಪಾನೀ ಶಿಕ್ಷಕರನ್ನು ಕರೆತಂದರು. ಶಾಂತಿನಿಕೇತನದ ವಿಶಾಲವಾದ ಬಯಲುಗಳಲ್ಲಿ ಎಲ್ಲ ಬಗೆಯ ಆಟಗಳನ್ನಾಡಲು ಅನುವು ಮಾಡಿಕೊಟ್ಟರು. ಸ್ವತಃ ದೃಢಕಾಯರೂ ಆರೋಗ್ಯವಂತರೂ ಬಲಶಾಲಿಗಳೂ ಆದುದರಿಂದ ವಿದ್ಯಾರ್ಥಿಗಳೊಡನೆ ಸೆಣಸಾಟ ಮಾಡುತ್ತಿದ್ದರಲ್ಲದೆ ಹಲವು ಸಾರೆ ಅವರು ಗೆಲ್ಲುತ್ತಿದ್ದರು.

ಶಾಂತಿನಿಕೇತನದ ವಿದ್ಯಾರ್ಥಿಗಳಲ್ಲಿ ಸರಳ ಮತ್ತು ಶುದ್ಧ ಜೀವನ, ಸ್ವಾವಲಂಬನ, ಸಹಕಾರ, ಸ್ವರಾಜ್ಯ ಮೊದಲಾದ ಒಳ್ಳೆಯ ಪ್ರವೃತ್ತಿಗಳು ಬೆಳೆಯುವಂತೆ ಅವರ ದಿನಚರ್ಯವನ್ನು ಏರ್ಪಡಿಸಿದ್ದಾರೆ. ಗ್ರಾಮಸುಧಾರಣೆಗಾಗಿ ವಿದ್ಯಾರ್ಥಿಗಳು ತಮ್ಮ ಸೇವೆಯನ್ನು ಸಲ್ಲಿಸಬೇಕೆಂಬ ಉದ್ದೇಶದಿಂದ ಹಿಂದುಳಿದ ಜನಗಳು ಒಕ್ಕಲಾದ ನೆರೆಹಳ್ಳಿಗಳಲ್ಲಿ ಶಾಲೆಗಳನ್ನು ಸ್ಥಾಪಿಸಿ ಅವುಗಳನ್ನು ಕೇಂದ್ರ ಸಂಸ್ಥೆಗೆ ಜೋಡಿಸಿದ್ದಾರೆ.

ಪ್ರಾಥಮಿಕ, ಮಾಧ್ಯಮಿಕ ಶಾಲೆಗಳು, ಉಚ್ಚ ಶಿಕ್ಷಣದ ವಿದ್ಯಾಲಯ, ಪದವೀಧರರಿಗಾಗಿ ಸಂಶೋಧನ ಶಾಖೆ, ಕಲಾವೃತ್ತಿಗಳನ್ನು ಕಲಿಸುವ ಸಂಸ್ಥೆ, ಗಾಯನಶಾಲೆ, ಕೃಷಿವಿದ್ಯೆ-ಗ್ರಾಮಶಿಕ್ಷಣಗಳ ಸಂಸ್ಥೆ, "ಸಹಕಾರ ಬ್ಯಾಂಕ"— ಇವೇ ಮುಂತಾದ ಹಲವು ಶಾಖೆಗಳನ್ನೂ ವಿಶ್ವಭಾರತಿ ಒಳಗೊಂಡಿದೆ. ಇದರ ವಿಭಾಗವಾದ "ಶಿಕ್ಷಾಸತ್ರ" ಎಂಬಲ್ಲಿ ಚಿಕ್ಕ ಮಕ್ಕಳ ಶಿಕ್ಷಣಕ್ಕೆ ತಕ್ಕ ಏರ್ಪಾಟವನ್ನು ರವೀಂದ್ರರೇ ಮಾಡಿದ್ದಾರೆ. ಆದ್ದರಿಂದ ಹನ್ನೆರಡು ವರ್ಷದ ವರೆಗಿನ ಚಿಕ್ಕ ಮಕ್ಕಳು ಜ್ಞಾನೇಂದ್ರಿಯಗಳ ಮಾರ್ಗವಾಗಿಯೆ ಜ್ಞಾನಾರ್ಜನೆಯನ್ನು ಮಾಡುವ ರಾದುದರಿಂದ ಅವರ ಕಣ್ಣು, ಕಿವಿ, ಮೂಗು, ನಾಲಗೆ, ಕೈಗಳಿಗೆಲ್ಲ ಒಳ್ಳೆಯ ಸಂಸ್ಕಾರ ಒದಗುವಂತಹ ಶಿಕ್ಷಣವೇ ಅವರಿಗೆ ತಕ್ಕುದೆಂಬುದೇ ಈ ಸಂಸ್ಥೆಯ ತತ್ತ್ವ ಮತ್ತು ತಳಹದಿಯಾಗಿದೆ. ಮನೆಗಳಲ್ಲಿ ದಿನದ ಬಳಕೆಗೆ ಬರುವಂತಹ ಬೆಲೆ ಬಾಳುವಂತಹ ಕೈಗಾರಿಕೆಯ ಒಡವೆಗಳನ್ನು ಸಿದ್ಧಪಡಿಸುವದನ್ನು ಚಿಕ್ಕ ಮಕ್ಕಳಿಗೆ ಮೊದಲಿನಿಂದಲೂ ಕಲಿಸುವ ಯೋಜನೆ ಈ ಸಂಸ್ಥೆಯಲ್ಲಿ ಮಾಡಲಾಗಿದೆ. ಗಾಂಧೀಜಿಯವರ ಪ್ರಚೋದನದ ಫಲವಾದ ವರ್ಧಾ ಶಿಕ್ಷಣದ ಕ್ರಮವು ಈ ಶಿಕ್ಷಾಸತ್ರದ ಯೋಜನೆಯನ್ನು ಎಲ್ಲ ಬಗೆಯಿಂದಲೂ ಹೋಲುವುದು ಗಮನಾರ್ಹವಾಗಿದೆ. ರವೀಂದ್ರನಾಥರ ಬುದ್ಧಿಶಕ್ತಿ, ಸಾಹಸ, ಸಂಸ್ಕೃತಿಗಳ ಫಲವಾದ ವಿಶ್ವಭಾರತಿಯು ರಾಷ್ಟ್ರೀಯತ್ವವನ್ನು ಮೀರಿ ಅಂತರ್-ರಾಷ್ಟ್ರೀಯತೆಯನ್ನೂ ಸೌಹಾರ್ದಭಾವವನ್ನೂ ಜಗತ್ತಿನಲ್ಲೆಲ್ಲ ಬೀರತಕ್ಕ ಏಕಮೇವ ಸಂಸ್ಥೆಯಾಗಿರುವದರಿಂದ ಇದನ್ನು ಕಾಪಾಡಿ ಬೆಳೆಸುವುದು ಭಾರತೀಯರ ಹಾಗೂ ವಿದೇಶಿಯರ ಕರ್ತವ್ಯವಾಗಿರುವಂತೆ ಜನತೆಯ ಹಾಗೂ ಸರಕಾರಗಳ ಕರ್ತವ್ಯವೂ ಆಗಿರುವುದೆಂದು ಬೇರೆ ಮತ್ತೆ ಹೇಳಬೇಕಾಗಿಲ್ಲ.

**ಶಬ್ದಾರ್ಥ:**

ಪೌರ್ವಾತ್ಯ – ಪೂರ್ವದೇಶಗಳಿಗೆ ಸಂಬಂಧಿಸಿದ; ಆತ್ಮರಕ್ಷಣೆ – ತಮ್ಮನ್ನು ತಾವು ರಕ್ಷಿಸಿಕೊಳ್ಳುವದು; ಸೆಣೆಸಾಟ – ಹೋರಾಟ; ಸ್ವಾವಲಂಬನ – ತನ್ನನ್ನೇ ತಾನು ಅವಲಂಬಿಸುವದು; ಉಚ್ಚ – ಮೇಲಿನ; ಏರ್ಪಾಡು – ವ್ಯವಸ್ಥೆ; ಸಿದ್ಧಪಡಿಸು – ತಯಾರಿಸು.

**ಪ್ರಶ್ನೆ:**

೧. ತೀರ ಮೊದಲು ಶಾಂತಿನಿಕೇತನ ಸಂಸ್ಥೆಯು ಹೇಗೆ ಇತ್ತು ?
೨. ಶಾಂತಿನಿಕೇತನವನ್ನು ಸ್ಥಾಪಿಸುವಾಗ ಉದ್ದೇಶವೇನಿತ್ತು ?
೩. ಈ ಸಂಸ್ಥೆಯ ಮುಖ್ಯ ಗುರಿಗಳಾವವು ?
೪. ರವೀಂದ್ರರ ಯಾವ ಹೆಬ್ಬಯಕೆಯು ಕೈಗೂಡಲಿಲ್ಲ ?

೫. ಠಾಕೂರರು ಅಲ್ಲಿಯ ಮಕ್ಕಳ ಕೂಡ ಹೇಗೆ ನಡೆದುಕೊಳ್ಳುತ್ತಿದ್ದರು ?
೬. ಶಾಂತಿನಿಕೇತನದ ದಿನಚರ್ಯೆಯನ್ನು ಹೇಗೆ ಏರ್ಪಾಡು ಮಾಡಿದ್ದಾರೆ ?
೭. 'ವಿಶ್ವಭಾರತಿ' ಸಂಸ್ಥೆಯಲ್ಲಿ ಯಾವ ಯಾವ ಶಾಖೆಗಳು ಇರುವವು ?
೮. ಈ ಸಂಸ್ಥೆಯ ಮುಖದಿಂದ ರವೀಂದ್ರರಿಗೆ ಏನು ಸಾಧಿಸಬೇಕಾಗಿತ್ತು ?
೯. ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.

೧. ಕೈಗೂಡು, ೨. ಎರಡಿಲ್ಲದೆ ಎರೆ, ೩. ಅಳವಡು.

ವ್ಯಾಕರಣ:

## ಪ್ರಶ್ನಾರ್ಥಕ ಸರ್ವನಾಮಗಳು

(ಅ) ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಪದಗಳನ್ನು ನಿರೀಕ್ಷಿಸಿರಿ.

೧. ವಿಶ್ವಭಾರತಿಯನ್ನು **ಯಾರು** ಸ್ಥಾಪಿಸಿದರು ?
೨. ನಮ್ಮ ದೇಶದಲ್ಲಿ ಅತ್ಯಂತ ಪವಿತ್ರ ನದಿ **ಯಾವದು** ?

ಇಲ್ಲಿ ಮೊದಲನೆಯ ವಾಕ್ಯದಲ್ಲಿ ವಿಶ್ವಭಾರತಿಯನ್ನು ಸ್ಥಾಪಿಸುವವರ ಬಗ್ಗೆ ತಿಳಿದುಕೊಳ್ಳುವದಕ್ಕಾಗಿ **ಯಾರು** ಎಂಬ ಸರ್ವನಾಮದಿಂದ ನಾವು ಪ್ರಶ್ನೆ ಕೇಳಿದ್ದೇವೆ. ಈ ಪ್ರಶ್ನೆಗೆ ರವೀಂದ್ರರು ಎಂಬ ಉತ್ತರ ಬರುತ್ತದೆ. ರವೀಂದ್ರರು ಎಂಬ ನಾಮಪದದ ಬದಲಾಗಿ **ಯಾರು** ಎಂಬ ಸರ್ವನಾಮವು ಇಲ್ಲಿ ಉಪಯೋಗಿಸಲ್ಪಟ್ಟಿದೆ. **ಯಾರು** ಎಂಬ ಸರ್ವನಾಮವು ಪ್ರಶ್ನೆ ಕೇಳುವದಕ್ಕಾಗಿ ಉಪಯೋಗಿಸಲ್ಪಟ್ಟಿರುವದರಿಂದ ಇದು **ಪ್ರಶ್ನಾರ್ಥಕ ಸರ್ವನಾಮ**ವೆನಿಸುವದು.

ಇದರಂತೆಯೇ ಎರಡನೆಯ ವಾಕ್ಯದಲ್ಲಿ ನಮ್ಮ ದೇಶದಲ್ಲಿಯ ಅತ್ಯಂತ ಪವಿತ್ರವಾದ ನದಿಯನ್ನು ತಿಳಿದುಕೊಳ್ಳುವದಕ್ಕಾಗಿ **ಯಾವದು** ಎಂಬ ಸರ್ವನಾಮದ ಸಹಾಯದಿಂದ ನಾವು ಪ್ರಶ್ನೆ ಕೇಳಿದ್ದೇವೆ. ಇದಕ್ಕೆ ಗಂಗಾನದಿ ಎಂಬ ಉತ್ತರ ಬರುತ್ತದೆ. ಗಂಗಾನದಿ ಎಂಬ ನಾಮಪದದ ಬದಲಾಗಿ **ಯಾವದು** ಎಂಬ ಪ್ರಶ್ನಾರ್ಥಕ ಸರ್ವನಾಮವು ಉಪಯೋಗಿಸಲ್ಪಟ್ಟಿದೆ.

ಪ್ರಶ್ನೆ ಕೇಳುವದಕ್ಕೆ ಉಪಯೋಗಿಸಲ್ಪಡುವ ಸರ್ವನಾಮಗಳನ್ನು **ಪ್ರಶ್ನಾರ್ಥಕ ಸರ್ವನಾಮ**ಗಳೆಂದು ಕರೆಯುವರು.

ಯಾವನು, ಯಾವಳು, ಯಾರು, ಯಾವದು, ಯಾವವು ಇವೆಲ್ಲ ಪ್ರಶ್ನಾರ್ಥಕ ಸರ್ವನಾಮಗಳು.

(ಬ) ಮೇಲೆ ಕೊಟ್ಟ ಪ್ರಶ್ನಾರ್ಥಕ ಸರ್ವನಾಮಗಳನ್ನು ಉಪಯೋಗಿಸಿ ಒಂದೊಂದು ವಾಕ್ಯ ಬರೆಯಿರಿ.



# ೧೬. ಮರುಭೂಮಿಯ ಅರಬರು



ಕೆಂಪುಕೋಟೆ,
ನವದೆಹಲಿ.

೧-೧-೫೪

**ಮಗು ವಿಜಯಾ,**

ನಿನ್ನ ಓಲೆ ಮೊನ್ನೆ ಶನಿವಾರ ಸಾಯಂಕಾಲ ತಲುಪಿತು; ಮರುದಿನ ರವಿವಾರ. ರವಿವಾರವೆಂದರೆ ವಿಶ್ರಾಂತಿಯ ದಿನವಲ್ಲವೆ? ನಿನಗೂ ಶಾಲೆಗೆ ಬಿಡುವಷ್ಟೇ? ನಿನ್ನ ಓಲೆಯನ್ನು ಹತ್ತು ಸಲ ಓದಿದರೂ ತೃಪ್ತಿಯಾಗಲಿಲ್ಲ. ಅಷ್ಟು ಸುಂದರವಾಗಿ ಬರೆದಿದ್ದೀ. ನಿನಗೆ ಭೂಗೋಲ ವಿಷಯದ ಮೇಲೆ ಮಮತೆ ಬಹಳವೆಂದು ಬರೆದಿದ್ದೀ. ಅದನ್ನು ಓದಿಯಂತೂ ನಾನು ಹಿರಿಹಿರಿ ಹಿಗ್ಗಿದೆನು. ನನಗೂ ಅದೇ ವಿಷಯದ ಮೇಲೆ ಪ್ರೀತಿ. ನಾನು ಚಿಕ್ಕವನಿದ್ದಾಗ ಅನೇಕ ದೇಶಗಳ ಜನರ ಚಿತ್ರಗಳನ್ನು ಕಲೆಹಾಕುತ್ತಿದ್ದೆ. ಆ ಹಿರಿಹೊತ್ತಿಗೆ ಇನ್ನೂ ಮನೆಯಲ್ಲಿಯೇ ಇದೆ. ತಾಯಿಗೆ ಹೇಳಿ ಅದನ್ನು ತೆಗೆದುಕೋ. ನಾನು ಇಲ್ಲಿ ಅಭ್ಯಾಸಕ್ಕಾಗಿ ಬಂದಿದ್ದೆನಲ್ಲ! ಒಮ್ಮೊಮ್ಮೆ ನಿಮ್ಮ ನೆನಹು ಆಗಿ ಅಲ್ಲಿಗೆ ಬಂದು ಬಿಡಬೇಕೆನಿಸುತ್ತದೆ. ಆದರೆ ಕರ್ತವ್ಯಬದ್ಧತೆ ನನ್ನನ್ನು ಮತ್ತೆ ಕೆಲಸಕ್ಕೇ ತೊಡಗಿಸುತ್ತದೆ. ಆಯಿತು, ಇನ್ನು ಕೇವಲ ಎರಡೇ ತಿಂಗಳಲ್ಲಿ ನಿನ್ನ ಬಳಿಗೆ ಬಂದೇ ಬಿಡುತ್ತೇನೆ; ನಿನಗೆ ಹೋದಸಲ 'ಅರಬರ' ಚಿತ್ರಗಳನ್ನು ಕಳುಹಿದ್ದೆ. ಅವುಗಳನ್ನು ನೋಡಿದ್ದೀಯಾ? ನಾನು ಈಗೆರಡು ದಿನಗಳ ಹಿಂದೆ ಅರಬರ ಜೀವನವನ್ನು ಕುರಿತು ಒಂದು ಹೊತ್ತಗೆ ಓದಿದೆ. ಏನು ರಮ್ಯವಾದ ಪ್ರಬಂಧವದು! ಅದನ್ನೋದಿ ನಾನೂ ಅರಬರ ಹಾಗೆ ಒಂಟೆಗಳ ಮೇಲೆ ಕುಳಿತು, ಯಾವ ಬಾಳುವೆಯ ಯೋಚನೆಯಿಲ್ಲದೆ, ಸಾವಿರಾರು ಮೈಲು ಪ್ರವಾಸ ಮಾಡಬೇಕೆನಿಸಿತು.

ನೋಡು, ವಿಜಯಾ, ಅರಬರ ಬಾಳು ಬಹಳ ಕಷ್ಟದ ಬಾಳು. ಅವರ ದೇಶವೆಂದರೆ ಮರುಳುಗಾಡು. ಮಳೆಯಂತೂ ಇಲ್ಲವೇ ಇಲ್ಲ. ಬೆಳೆ ಎಲ್ಲಿಂದ ಬಂದೀತು ನೀನೇ ನೋಡು! ಅನ್ನಕ್ಕಾಗಿ ಹೋರಾಟ ಅವರಿಗೆ ನಿತ್ಯವೂ ತಪ್ಪಿಲ್ಲ.

ಅನ್ನ, ನೀರು ದೊರಕಿಸುವಪಕ್ಕಾಗಿ ಅವರಿಗೆ ಅಲೆದಾಟ ಎಂದೂ ಇದ್ದುದೇ. ಹೀಗಿದ್ದರೂ ಅವರು ಸುಖಿಗಳು. ನೂರಾರು ಒಂಟೆಗಳನ್ನು ಕಟ್ಟಿಕೊಂಡು ಅವುಗಳ ಮೇಲೆ ಸಾಮಾನುಗಳನ್ನು ಹೇರಿಕೊಂಡು ಮೇಲೆ ನೀಲಾಕಾಶ, ಕೆಳಗೆ ವಿಶಾಲವಾದ ಮರುಳುಗಾಡು, ಇವುಗಳ ಸಹಚರ್ಯದಲ್ಲಿ ಅರಬರು ಮುನ್ನಡೆಯುತ್ತಾರೆ. ಅರಬರ ಚಿಕ್ಕಮಕ್ಕಳು ಒಂಟೆಗಳ ಮೇಲೆ ಕುಳಿತು ಹೇಗೆ ಆಟ ಮಾಡುತ್ತಾರೆ ಬಲ್ಲೆಯಾ? ಅವರಿಗೆ ಅಲ್ಲಿಯೇ ಒಂದು ಚಿಕ್ಕ ಮನೆ ನಿರ್ಮಾಣವಾಗುತ್ತದೆ. ವಿಶಾಲವಾದ ಸೃಷ್ಟಿಯ ಪ್ರೀತಿಯ ಮಕ್ಕಳವರು. ಬಹಳ ಗಟ್ಟಿಗರು ಆ ಮಕ್ಕಳು ತಿಳಿಯಿತೇ?

ಸೃಷ್ಟಿಯು ಸೋಜಿಗದ ನೆಲೆಬೀಡು. ಅಂಥ ಮರಳುನಾಡಿನಲ್ಲಿಯೂ ನೀರಿನ ಬುಗ್ಗೆಗಳಿರುತ್ತವೆ. ಅವುಗಳಿಗೆ 'ಓಯಾಸಿಸ್' ಎಂದು ಕರೆಯುತ್ತಾರೆ. ಅರಬರು ಒಂಟೆಗಳನ್ನು ಕಟ್ಟಿಕೊಂಡು ಇಂಥ ಸ್ಥಳಗಳಿಗೆ ಬಂದು ಮುಟ್ಟುತ್ತಾರೆ. ಅಲ್ಲಿ ಅವರಿಗೆ ಕುಡಿಯಲು ನೀರು, ತಿನ್ನಲು ಕಜ್ಜೂರ, ರೊಟ್ಟಿ, ಮಾಂಸ ಸಿಗುತ್ತದೆ. ಅರಬರು ಅಲ್ಲಿ ತಮ್ಮ ಪರಿವಾರದೊಂದಿಗೆ ನಾಲ್ಕಾರು ದಿನ ಬೀಡು ಬಿಟ್ಟು ವ್ಯಾಪಾರ ಮಾಡುತ್ತಾರೆ. ಓಯಾಸಿಸ್‌ಗಳಲ್ಲಿ ಕೆಲವು ಜನರು ಸ್ಥಾಯಿಯಾಗಿ ಇರುತ್ತಾರೆ. ಹೊರಗಿನಿಂದ ಬಂದವರು ತಮ್ಮ ಕೆಲಸ ತೀರಿದ ಬಳಿಕ ಮತ್ತೆ ಹೊಸ ಜಲ, ಹೊಸ ಭೂಮಿ ಹುಡುಕುತ್ತ ಹೊರಡುತ್ತಾರೆ. ನೋಡು ಅವರ ಜೀವನ ಎಂಥ ಮೋಜಿನ ಜೀವನ.

ಇಂಥ ಮರಳು ನಾಡಿನಲ್ಲಿ ನಿಶ್ಚಿತವಾದ ಮಾರ್ಗಗಳೆಲ್ಲಿಂದ ಬರಬೇಕು? ಅವರಿಗೆ ದಿಕ್ಕು ಸಹ ತಿಳಿಯುವದು ಕಠಿಣವಾಗಿರುತ್ತದೆ. ಆದರೂ ಅವರು ನಕ್ಷತ್ರಗಳ ಮೂಡು-ಮುಳುಗುವಿಕೆಯಿಂದ ತಮ್ಮ ಮಾರ್ಗಗಳನ್ನು ಕಂಡುಕೊಳ್ಳುತ್ತಾರಂತೆ. ಅವರು ಜ್ಯೋತಿಷಿಗಳೂ ಅಹುದಂತೆ. ಅರಬರಿಗೆ ನಾಳಿನ ಬಾಳು ಅನಿಶ್ಚಿತ. ಎಲ್ಲಿಯಾದರೂ ಮರಳುಗಾಡಿನಲ್ಲಿ ಭಯಂಕರ ಬಿರುಗಾಳಿಯೆದ್ದು ಇವರನ್ನೆಲ್ಲ ಉಸುಕಿನಿಂದ ಮುಚ್ಚಿ ಸಮಾಧಿ ಮಾಡಬಹುದು. ಇದನ್ನೆಲ್ಲ ಓದಿದಾಗ ನನಗೆ ಅವರ ಜೀವನದ ಬಗ್ಗೆ ಬಹಳ ಕನಿಕರವೆನಿಸಿತು.

ಅರಬರು ಒಮ್ಮೊಮ್ಮೆ ಒಳ್ಳೇ ಸ್ಥಳ ನೋಡಿ ತಮ್ಮ ಬೀಡಾರ ಬಿಡುತ್ತಾರೆ. ಹಿರಿಯರು ಕೂಡಲೆ ಡೇರೆ ಹೊಡೆಯುತ್ತಾರೆ. ಮಕ್ಕಳು ಬಣ್ಣ ಬಣ್ಣದ ಅರಿವೆಗಳನ್ನು ಹಾಕಿಕೊಂಡು ಆಟವಾಡಹತ್ತುವರು. ಸ್ತ್ರೀಯರು ಅಡುಗೆಯ ಸಿದ್ಧತೆ ಮಾಡುವರು. ಅರಬರ ಹಿರಿಯರಿಗಾಗಿ ಒಂದು ಬೇರೆ ಡೇರೆ ನಿರ್ಮಾಣವಾಗುತ್ತದೆ. ಎಷ್ಟೆಂದರೂ ಆತನು ಒಡೆಯನಲ್ಲವೆ? ಸ್ತ್ರೀಯರಿಗಾಗಿಯೂ ಬೇರೆ

ಡೇರೆ ಹೊಡೆಯುತ್ತಾರೆ. ಹೀಗೆ ಅವರ ಪ್ರಪಂಚ ಕಣ್ಣುಮುಚ್ಚಿ ಕಣ್ಣು ತೆರೆಯುವದರಲ್ಲಿ ತಯಾರಾಗಿ ಬಿಡುತ್ತದಂತೆ.

ಅಂಥ ಅರಬರ ಬೀಡಾರಗಳಲ್ಲಿ ಹೋಗಿ ನಾಲ್ಕುದಿನ ಕಳೆಯಬೇಕು ನೋಡು, ವಿಜಯಾ! ಇರಲಿ ಓಲೆ ಬಹಳ ಬೆಳೆಯಿತು, ನಿನಗೆ ಬರೆಯು ಬೇಕಾದುದನ್ನು ಮುಂದಿನಸಲ ಮತ್ತೆ ಬರೆಯುವೆ. ತಾಯಿಗೆ ನಾನು ಚನ್ನಾಗಿರುವೆನೆಂದು ತಿಳುಹು. ಕೂಡಲೆ ಓಲೆ ಬರೆಯುವಿಯಾ?

ನಿನ್ನ ಮಮತೆಯ
'ಕಾಕಾ'

**ಪ್ರಶ್ನೆ:**

೧. ಅರಬರ ಬಗ್ಗೆ ಪತ್ರ ಬರೆಯಲು ಯಾವ ಕಾರಣಗಳನ್ನು ಹೇಳಿದೆ?
೨. ಅರಬರ ಬಾಳು ಹೇಗೆ ಕಷ್ಟಮಯವಾಗಿದೆ?
೩. ಓಯಾಸಿಸ್‌ಗಳಲ್ಲಿ ಅರಬರು ಹೇಗೆ ಜೀವನ ಕಳೆಯುತ್ತಾರೆ?
೪. ಮರುಭೂಮಿಯಲ್ಲಿ ಅವರು ದಾರಿಯನ್ನು ಹೇಗೆ ಕಂಡುಕೊಳ್ಳುವರು?
೫. ಅರಬರ ಬಾಳು ಏಕೆ ಅನಿಶ್ಚಿತವಾಗಿರುತ್ತದೆ?
೬. ಅರಬರ ಡೇರೆಯ ವರ್ಣನೆಯನ್ನು ಕೊಡಿರಿ.
೭. ಕೆಳಗಿನವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯ ರಚಿಸಿರಿ.
೧. ಹಿರಿಹಿರಿ ಹಿಗ್ಗು, ೨. ಸಹಚರ್ಯ, ಮರಳುಗಾಡಿನ ಹುಲ್ಲುಗಾವಲು.

**ವ್ಯಾಕರಣ:**

## ದರ್ಶಕ ಸರ್ವನಾಮಗಳು

(ಅ) ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಸರ್ವನಾಮಗಳನ್ನು ನಿರೀಕ್ಷಿಸಿರಿ.

೧) **ಇವರು** ಅರಬರು.
೨) **ಅವರು** ಅರಬರ ಹೆಂಡಿರು.
೩) **ಅವು** ಅರಬರ ಒಂಟೆಗಳು.
೪) **ಇವು** ಅರಬರ ಡೇರೆಗಳು.

ಈ ವಾಕ್ಯಗಳಲ್ಲಿ ಬಂದ ದಪ್ಪಕ್ಷರದ ಪದಗಳು ಸರ್ವನಾಮಗಳೆಂಬುದನ್ನು ಈಗ ನೀವು ಅರಿತಿದ್ದೀರಿ. ಈ ಸರ್ವನಾಮಗಳನ್ನು **ದರ್ಶಕ ಸರ್ವನಾಮ**ಗಳೆಂದು ಕರೆಯುತ್ತಾರೆ. ದರ್ಶಕ ಅಂದರೆ ಒಂದು ವಸ್ತುವನ್ನು ತೋರಿಸುವ ಎಂದು ಅರ್ಥ ಇಲ್ಲಿ ಮೊದಲನೆಯ ವಾಕ್ಯದಲ್ಲಿ ಬಂದ **ಅವರು** ಎಂಬ ಸರ್ವನಾಮವು ಅರಬರನ್ನು ತೋರಿಸುತ್ತದೆ. ಆದ್ದರಿಂದ ಅದು ದರ್ಶಕ ಸರ್ವನಾಮ. ಇದರಂತೆ ಮುಂದಿನ ವಾಕ್ಯಗಳಲ್ಲಿ ಬಂದ **ಅವರು, ಅವು, ಇವು** ಈ ಸರ್ವನಾಮಗಳೆಲ್ಲ ದರ್ಶಕ ಸರ್ವನಾಮಗಳೇ.

ಈ ದರ್ಶಕ ಸರ್ವನಾಮಗಳಲ್ಲಿ ಎರಡು ಪ್ರಕಾರಗಳು ಇರುವವೆಂಬುದು ಮೇಲಿನ ಉದಾಹರಣೆಗಳಿಂದ ನಿಮಗೆ ಕಂಡುಬರುತ್ತದೆ. **ಇವರು, ಇವು** ಎಂಬವು ಒಂದು ಪ್ರಕಾರದವು. **ಅವರು ಅವು** ಎಂಬವು ಇನ್ನೊಂದು ಪ್ರಕಾರದವು. **ಇವರು, ಇವು** ಇವುಗಳನ್ನು ಸಮೀಪದರ್ಶಕ ಸರ್ವನಾಮಗಳೆಂದು ಕರೆಯುವರು. **ಅವರು, ಅವು** ಇವುಗಳನ್ನು ದೂರದರ್ಶಕ ಸರ್ವನಾಮಗಳೆಂದು ಕರೆಯುವರು. ಸಮೀಪದರ್ಶಕ ಎಂದರೆ ಸಮೀಪದ ವಸ್ತುಗಳನ್ನು ತೋರಿಸುವಂಥವು. ದೂರದರ್ಶಕವೆಂದರೆ ದೂರಿನ ವಸ್ತುಗಳನ್ನು ತೋರಿಸುವಂಥವು.

ಇವನು, ಇವಳು, ಇದು, ಈಕೆ, ಈತ, ಇವರು, ಇವುಗಳು ಇವೆಲ್ಲ ಸಮೀಪ ದರ್ಶಕ ಸರ್ವನಾಮಗಳು.

ಅವನು, ಅವಳು, ಅದು, ಆಕೆ, ಆತ, ಅವರು, ಅವುಗಳು ಇವೆಲ್ಲ ದೂರ ದರ್ಶಕ ಸರ್ವನಾಮಗಳು.

(೬) ಮೇಲೆ ಕೊಟ್ಟ ದರ್ಶಕ ಸರ್ವನಾಮಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.



# ೧೭. ಮರುಳುಗಳು

[ ಕುರುಕ್ಷೇತ್ರದ ರಣಭೂಮಿ. ಕೌರವ – ಪಾಂಡವರೊಳಗೆ ಹದಿನೇಳು ದಿನಗಳ ವರೆಗೆ ಘನಘೋರ ಸಂಗ್ರಾಮವಾದದ್ದರಿಂದ ರಣರಂಗದಲ್ಲಿ ಆನೆಗಳ, ಕುದುರೆಗಳ, ಸೈನಿಕರ, ರಾಜಮಹಾರಾಜರ ಹೆಣಗಳ ರಾಶಿಯೇ ಅಲ್ಲಿ ಬಿದ್ದಿದೆ. ರಕ್ತವು ಕಾಲುವೆಯಾಗಿ ಹರಿಯುತ್ತಲಿದೆ. ಮುರಿದು ಬಿದ್ದ ಶಸ್ತ್ರಾಸ್ತ್ರಗಳಿಗೂ ರಥಗಳಿಗೂ ಲೆಕ್ಕವೇ ಇಲ್ಲ. ಮರುಳುಗಳಿಗೆ ಈ ಮಹಾಯುದ್ಧವೊಂದು ಮಹಾಸಮಾರಾಧನೆಯೇ ಆಗಿದೆ. ಅವು ಹಿಂಡುಗಟ್ಟಿಕೊಂಡು ಅಲ್ಲಲ್ಲಿ ತಿರುಗುತ್ತ ಸತ್ತವರ ರಕ್ತವನ್ನು ಕುಡಿದು, ಮಾಂಸವನ್ನು ತಿಂದು – ತೇಗುತ್ತ ಆನಂದದಿಂದ ನಲಿಯುತ್ತಲಿವೆ.

ಇಂಥ ಸಮಯದಲ್ಲಿ ನಡೆದ ಒಂದು ದೃಶ್ಯವನ್ನು ಕನ್ನಡದ ಮಹಾಕವಿ ರನ್ನನು ಬರೆದ 'ಗದಾಯುದ್ಧ'ವೆಂಬ ಮಹಾಕಾವ್ಯದ ೪ನೇ ಆಶ್ವಾಸದಿಂದ ಆಯ್ದುಕೊಂಡು ಇಲ್ಲಿ ನಾಟಕರೂಪವಾಗಿ ಕೊಡಲಾಗಿದೆ. ]

• • •

( ಲೋಭಿಯಾದ ಒಂದು ಮರುಳು ಒಂದು ಆನೆಯ ಹೆಣವನ್ನು ಮುಂದೆ ಇಟ್ಟುಕೊಂಡು ವಿಚಾರಿಸುತ್ತ ಕುಳಿತಿದೆ. ಆಗ ಇನ್ನೊಂದು ಮರುಳು ಅಲ್ಲಿಗೆ ಬರುತ್ತದೆ. )

೨ನೇ ಮರುಳು— ಇದೇನು? ನೀನು ಈ ಆನೆಯ ಹೆಣವನ್ನು ತಿನ್ನದೆ ಇನ್ನೂ ಹಾಗೇ ಕುಳಿತಿರುವಿ? ನಾನು ಈಗ ಒಂದು ತಿಂದು ತೇಗಿದ ಮೇಲೆ ಹಸಿವೆಯಾದ್ದರಿಂದ ಇನ್ನೊಂದನ್ನು ಹುಡುಕುತ್ತಿದ್ದೇನೆ.

೧ನೇ ಮರುಳು— ಹೇಗೆ ತಿನ್ನಲಿ, ಎಂದು ವಿಚಾರ ಮಾಡುತ್ತ ಕುಳಿತಿದ್ದೇನೆ. ತುಸು ತುಸು ತಿಂದರೆ ಹೊಟ್ಟೆ ತುಂಬುವದಿಲ್ಲ. ಬಾಯಿಗೂ ಸಾಕಷ್ಟು ರುಚಿ ಹತ್ತುವದಿಲ್ಲ. ಬಹಳ ತಿಂದರೆ ಈ ಸವಿಯೂಟ, ಬೇಗನೆ ಮುಗಿದೇ ಹೋಗುವುದು. ಹೀಗಾಗಿ ಈಗ ನನಗೊಂದು ಸಮಸ್ಯೆಯೇ ಬಂದಿದೆ.

೨ನೇ ಮ.— ಭಲೆ! ಭಲೆ! ಇದ್ದರೆ ಇರಬೇಕು, ನಿನ್ನಂಥ ಜೀನನು. ಇದೊಂದು ನಿನಗೆ ಘನವಾದ ಸಮಸ್ಯೆಯಾಗಿದೆಯಲ್ಲವೇ?

೧ನೇ ಮ.— ಹೌದು. ಅದಕ್ಕೆ ಏನಾದರೂ ಉಪಾಯ ಸೂಚಿಸುವೆಯಾ? ನಿನ್ನ ಉಪಕಾರ ಬಹಳವಾಗುವುದು.

೨ನೇ ಮ.— ಇದರಲ್ಲೇನು ಬಂತು ಉಪಕಾರ, ನಾನು ಹೇಳಿದಂತೆ ಮಾಡು ಎಲ್ಲ ಸರಿಹೋಗುವದು!

೧ನೇ ಮ.— ಏನದು!

೨ನೇ ಮ.— ನೀನು ವಿಚಾರಿಸುತ್ತ ಹೀಗೇ ಕುಳಿತಿರು; ನಾನು ಇದನ್ನು ತಿಂದು ಹೋಗುತ್ತೇನೆ.

೧ನೇ ಮ.— ಒಳ್ಳೆಯ ಉಪಾಯ. ಎಂದಿನಿಂದ ಕಲಿತೆ ಈ ಕೌಟಿಲ್ಯವನ್ನು? ಸುಮ್ಮನೆ ಬಂದ ದಾರಿಯನ್ನು ಹಿಡಿ.

೨ನೇ ಮ.— ನನಗೆ ಹಸಿವೆ ಬಹಳವಾಗಿದೆ; ಅದನ್ನು ಮೊದಲು ತಿಂದ ಮೇಲೆಯೇ ಮುಂದಿನ ವಿಚಾರ.

( ಆನೆಯನ್ನು ತಿನ್ನಲು ಹೋಗುವದು. )

೧ನೇ ಮ.— ಹಾ! ಹಾ! ಅದನ್ನು ಮುಟ್ಟಬೇಡ, ಅದು ನನ್ನದು. ಇಂದಿಲ್ಲ ನಾಳೆಯಾದರೂ ನಾನೇ ಅದನ್ನು ತಿನ್ನುವವ. ನೀನೆಲ್ಲಿಯವ ಬಂದೆ ನಡುವೆ ಮತ್ತೆ! ನಡೆಯತ್ತ! ಮತ್ತೆಲ್ಲಿಯಾದರೂ ಬಿದ್ದ ಇನ್ನೊಂದು ಆನೆಯನ್ನು ಹುಡುಕು.

( ಅವನನ್ನು ತಡೆಯುವದು. )

೨ನೇ ಮ.— ನೀನು ಒಳ್ಳೇ ಲೋಭಿ ಬಿಡು. ನೀನೂ ತಿನ್ನುವದಿಲ್ಲ; ನನಗೂ ಕೊಡುವದಿಲ್ಲ; ಸುಮ್ಮನೇ ಅದನ್ನು ಹಾಳುಮಾಡುವೆ. ಜೀನರ ಹಣೆ ಬರಹವೇ ಹೀಗೆ.

೧ನೇ ಮ. — ಅಕೋ ಅಲ್ಲಿ ಹೋಗು ಒಂದು ದೊಡ್ಡ ಸಮಾರಾಧನೆಯೇ ನಡೆದಿದೆ. “ಅಡಗಂ ಉಣಿಂ” “ಅಡಗಂ ಉಣಿಂ” ಎಂದು ಬಂದವರಿಗೆಲ್ಲ

ಮಾಂಸದ ಮೇಜವಾನಿಯನ್ನೇ ಮಾಡಿಸುತ್ತಿದ್ದಾರೆ; ಅಲ್ಲಿ ಹೋದರೆ ನಿನಗೂ ಸ್ವಲ್ಪ ಸಿಗಬಹುದು.

( ಮೂರನೇ ಮರುಳು ಹಾಡುತ್ತ ಬರುವದು )

೧ನೇ ಮ. — ಇದೇನಯ್ಯಾ? ನೀನು ಒಳ್ಳೇ ಹುರುಪಿನಲ್ಲಿರುವಿ ? ಹೆಣಗಳ ಉಗ್ರಾಣವೇ ನಿನ್ನ ಕೈಗೆ ಹತ್ತಿರುವದೇನು ! ಮಾಂಸ ತಿಂದು, ರಕ್ತ ಕುಡಿದು, ನಿನ್ನಲ್ಲಿ ಕವಿತ್ವದ ಬುಗ್ಗೆ ಚಿಮ್ಮಿತೇನು ?

೩ನೇ ಮ. — ಹೌದು ! ಹೌದು ! ಈಗ ನಾನೇ ಪೈಶಾಚಿಕ ಭಾಷೆಯ ಮಹಾಕವಿ.

೨ನೇ ಮ. - ಹಾಂ! ಸ್ವಲ್ಪ ನಾಲಿಗೆ ಬಿಗಿ ಹಿಡಿದು ಮಾತಾಡು! ಮಹಾಕವಿ ಗುಣಾಢ್ಯನನ್ನು ನೀನು ನರಿಗಟ್ಟಬಲ್ಲೆಯಾ ?



೩ನೇ ಮ. — ( ತಿರಸ್ಕಾರದಿಂದ ) ಹುಂ ! ನನ್ನ ಮುಂದೆ ಎಲ್ಲಿಯ ಗುಣಾಢ್ಯ. ಈಗ ಹೊಸಯುಗ ಪ್ರಾರಂಭವಾಗಿದೆ. ಇಂದು ನಾನು ಹಾಡಿದ್ದೇ ರಾಗ ! ಬರೆದದ್ದೇ ಕಾವ್ಯ ! ಹಳೆಯ ಆ ಗುಣಾಢ್ಯರಿಗೆಲ್ಲ ಇನ್ನು ಸ್ಥಾನವಿಲ್ಲ !

( ದುರ್ಯೋಧನನೂ ಸಂಜಯನೂ ಅದೇ ಮಾರ್ಗವಾಗಿ ಹೊರಟಿದ್ದಾರೆ. )

೧ನೇ ಮ. — (೩ನೇ ಮರುಳಿಗೆ) ಅಕೋ, ಅಲ್ಲಿ ನೋಡು. ಈ ನಮ್ಮ ಮಹಾ ಸಮಾರಾಧನೆಯ ಅಧ್ವರ್ಯು ಹೊರಟಿದ್ದಾನೆ. ನೀನು ಹಸಿವೆ ಎಂದು ಒಡಕೊಳ್ಳುತ್ತಿರುವಿ! ಅವನನ್ನು ಸ್ವಲ್ಪ ಕೇಳಬಾರದೇ?

೨ನೇ ಮ. — ಯಾರು? ಅಂಧನೃಪಸುತನಾದ ದುರ್ಯೋಧನನೇ? ಈಗ ಅವನು ಎಲ್ಲಿ ಹೊರಟಿರುವನು?

೧ನೇ ಮ. — ಈಗ ಅವನು ಪಿತಾಮಹನಾದ ಭೀಷ್ಮನ ಕಡೆಗೆ ಹೊರಟಿದ್ದಾನೆ.

೩ನೇ ಮ. — ಅವನೇಕೆ ಅತ್ತ ಹೊರಟಿದ್ದಾನೆ?

೧ನೇ ಮ. — ದುರ್ಯೋಧನನ್ನು ಉಳಿದು ಎಲ್ಲ ಕೌರವರು ರಣರಂಗದಲ್ಲಿ ಮಡಿಯಲು, ಕೊನೆಗೆ ಒಬ್ಬನಾದರೂ ಮಗನು ತಮಗೆ ಉಳಿಯಲಿ ಎಂದು ಗಾಂಧಾರಿ-ಧೃತರಾಷ್ಟ್ರರು ಸಂಜಯನ ಸಹಾಯದಿಂದ ರಣಭೂಮಿಗೆ ಬಂದು ಪಾಂಡವರ ಕೂಡ ಸಂಧಿ ಮಾಡಲು ದುರ್ಯೋಧನನಿಗೆ ಬಿನ್ನವಿಸಿದರು.

೨ನೇ ಮ. — ಹಾಗಾದರೆ ಸಂಧಿಯಾಗುವದೇನು?

೧ನೇ ಮ. — ಇಲ್ಲ.

೩ನೇ ಮ. — ಏಕೆ?

೧ನೇ ಮ. — ತನ್ನ ತಮ್ಮಂದಿರೂ, ಕರ್ಣನೂ ಯುದ್ಧದಲ್ಲಿ ತನಗಾಗಿ ಮಡಿದಿರಲು ಅವರನ್ನುಳಿದು ತಾನು ಸಂಧಿಮಾಡಿಕೊಳ್ಳುವದು ಅನ್ಯಾಯವೆಂದು ಆ ಅಭಿಮಾನಧನನಾದ ಸುಯೋಧನನು ಛಲದಿಂದ ಯುದ್ಧವನ್ನೇ ನಿರ್ಧರಿಸಿದನು. ಆಗ ಗಾಂಧಾರಿ – ಧೃತರಾಷ್ಟ್ರರು "ನಿಮ್ಮ ಅಜ್ಜನಾದ ಭೀಷ್ಮವನ್ನು ವಿಚಾರಿಸಿ, ಕೊನೆಗೆ ಏನು ಮಾಡುವದಿದೆಯೋ ಮಾಡು; ಮುದುಕರಾದ ನಮ್ಮ ಮಾತನ್ನು ಇಷ್ಟಾದರೂ ಕೇಳು" ಎಂದು ದೈನ್ಯದಿಂದ ಬೇಡಿಕೊಳ್ಳಲು ಸುಯೋಧನನು ಈಗ ಸಂಜಯನೊಡಗೂಡಿ ಅತ್ತ ಹೊರಟಿದ್ದಾನೆ.

೩ನೇ ಮ. — ಅಂತೂ ಯುದ್ಧವಾಗುವದು ಅನ್ನು.

೨ನೇ ಮ. — ಸಂಧಿಯೂ ಆಗಬಹುದಲ್ಲವೆ?

೧ನೇ ಮ. — ನಾನು ಮಾತ್ರ ಯುದ್ಧವೇ ಆಗುವದೆಂದು ನಂಬಿದ್ದೇನೆ; ಮತ್ತು ಯುದ್ಧವೇ ಆಗಲಿ ಎಂದು ದೇವರಲ್ಲಿ ಮೊರೆ ಇಡುತ್ತಿದ್ದೇನೆ. ಯುದ್ಧ ನಿಂತರೆ, ನಮ್ಮ ಗತಿ ಏನು? ದಿನದಿನವೂ ಬಿಸಿಬಿಸಿ ರಕುತ ಹೊಸ ಹೊಸ ಮಾಂಸವನ್ನು ಯಾರು ತಂದು ಕೊಡುವರು?

೨ನೇ ಮ. — ನೀನು ಹೇಳುವದು ನಿಜ ಆದರೆ........

೧ನೇ ಮ. — ಏ, ಆದರೆ ಗೀದರೆ ಏನು? ನೀನು ಹೋಗಿ ಆ ದುರ್ಯೋಧನನ್ನು ಕೆರಳಿಸಿ ಬಾ ಅಂದರೆ ಖಂಡಿತ ಯುದ್ಧವಾಗುವದು.

೩ನೇ ಮ. — ಆತನೇನು ನನ್ನ ಹಾಗೆ ಮಾತಾಡಬಲ್ಲನು? ನಾನೇ ಹೋಗುತ್ತೇನೆ.

( ೩ನೇ ಮರುಳು ದುರ್ಯೋಧನನ ಸಮೀಪಕ್ಕೆ ಹೋಗಿ )

೩ನೇ ಮ.— ಎಲೈ ದುರ್ಯೋಧನನೇ ಕೇಳು— ಗುರುವಾದ ದ್ರೋಣನ ರಕ್ತವನ್ನು ಕುಡಿಯಬೇಕೆಂದರೆ ಅವನು ಬ್ರಾಹ್ಮಣ, ಅವನ ರಕ್ತ ನನ್ನ ಗಂಟಲ-ವನ್ನು ಸುಡುವದು, ಆದ್ದರಿಂದ ಅದನ್ನು ಕುಡಿಯಲಾರೆ. ನಿನ್ನ ತಮ್ಮನಾದ ದುಶ್ಯಾಸನನ ರಕ್ತವನ್ನು ಕುಡಿಯಬೇಕೆಂದರೆ, ಆ ಹಿಡಂಬೆಯ ಗಂಡನಾದ ಭೀಮನೇ ಅವನ್ನು ಹೀರಿಬಿಟ್ಟನು. ಇನ್ನು ಪಿತಾಮಹನಾದ ಭೀಷ್ಮನ ರಕ್ತವನ್ನು ಕುಡಿಯಬೇಕೆಂದರೆ, ಆ ಸತ್ವಶಾಲಿಯು ಇನ್ನೂ ಜೀವ ಹಿಡಿದಿರುವನು. ನಾವು ಪಿಶಾಚಿಗಳು, ಜೀವವುಳ್ಳವರ ರಕ್ತ ಹೀರುವವರಲ್ಲ; ಮನುಷ್ಯರಾಗಿದ್ದರೆ ಜೀವ ವಿದ್ದವರ ರಕ್ತವನ್ನೂ ಹೀರಬಹುದಾಗಿತ್ತು. ಆದ್ದರಿಂದ ನಿನ್ನ ಬಿಸಿ ರಕ್ತ ಕುಡಿಯುವದಕ್ಕಾಗಿ ನನ್ನ ನಾಲಿಗೆ ಚಪ್ಪರಿಸಿಕೊಂಡು ನಿನ್ನ ಮರಣದ ಸಮಯವನ್ನೇ ಕಾಯುತ್ತ ಕುಳಿತಿದ್ದೇನೆ. ನೀನು ಎಂದು ಸಾಯುವವನು? ನನಗೆ ಸ್ವಲ್ಪ ಹೇಳು.

( ಆ ಮರುಳಿನ ಮಾತನ್ನು ಕೇಳುತ್ತ ನಡೆಯುವಾಗ್ಗೆ ಮೆದುಳನ್ನು ತುಳಿದು, ಕಾಲುಜಾರಿ ದುರ್ಯೋಧನನು ಕೆಳಗೆ ಬೀಳುವನು; ಅದರಿಂದ ಅವನ ಬಾಯಿಯಿಂದ ಅಯ್ಯೋ! ಎಂಬ ಉದ್ಗಾರ ಬರುವದು ! )

ಸಂಜಯ— ರಾಜರಾಜ ! ಇದೇನು ! ( ಅವನನ್ನು ಎತ್ತುವನು ) ( ಭಯದಿಂದ ) ಊರು ಭಂಗವಾಗಲಿಲ್ಲವಷ್ಟೇ ?

ದು. — ಇಲ್ಲ.

೩ನೇ ಮ. — ಕೌರವೇಶ್ವರಾ, ಈಗ ನಿನ್ನ ಊರು ಭಂಗವಾಗದಿದ್ದರೂ ನಾಳೆ ಭೀಮನು ಕೋಪದಿಂದ ನಿನ್ನ ತೊಡೆಯನ್ನು ಮುರಿಯದೇ ಬಿಡಲಾರನು.

ದು. — ( ತನ್ನಲ್ಲಿ ) ಹಾ ! ಎಂಥ ಕಠೋರ ಮಾತಿದು ! ............... ಮೈತ್ರೇಯರು ನನಗೆ ಕೊಟ್ಟ ಶಾಪವು ನಿಜವಾಗುವದೇ ........ ಭೀಮನ ಪ್ರತಿಜ್ಞೆ ಪೂರ್ಣವಾಗುವದೇ ? ........ ನನ್ನ ಮ....ರ....ಣ ಒದಗಿ ಬಂದಿತೆ ? ಹಾಯ್ !

ಛೀ. ಇದೆಂಥ ಮಾತು? ನಾನು ಮಹಾಸತ್ವನಲ್ಲವೆ? ಇಂಥ ಮಾತುಗಳಿಗೆಲ್ಲ ನಾನು ಸೊಪ್ಪು ಹಾಕುವವನೆ?

ಸಂ. — ಸುಯೋಧನ ಮೌನವೇಕೆ? ಮರುಳ ಮಾತು ನಿನ್ನನ್ನು ನೋಯಿಸಿತೆ?

ದು. — ಛೀ! ಇಲ್ಲ! ಮರುಳ ಮಾತಿನಲ್ಲಿ ಹುರುಳೇನಿದೆ?

ಮ. — ಅಹಹಾ! (ನಕ್ಕು) ನಾನು ಮರುಳೇ? ಕೌರವೇಶ್ವರಾ ಏನು ಮಾತನಾಡು? ನಿನ್ನಲ್ಲಿಯೇ ತಿಳಿದು ನೋಡು! ನಿನ್ನ ಬಾಂಧವರ ಕೂಡ, ಕೂಡಿ ನಡೆಯಲಾರದೆ ವಿಷದ ಅನ್ನವನ್ನುಣಿಸಿ ಅರಗಿನ ಮನೆಯಲ್ಲಿ ಸುಡಿಸಿ, ಲೆತ್ತವಾಡಿ ಭೀಮನನ್ನು ಸಿಟ್ಟಿಗೆಬ್ಬಿಸಿ ಅವನು ನಿನ್ನನ್ನು ಕೊಲ್ಲುವ ಮಟ್ಟಕ್ಕೆ ತಂದಿಟ್ಟ ನೀನು ಮರುಳನೋ, ಅಥವಾ ನನ್ನ ಬಂಧು ಬಳಗದವರನ್ನು ಕೂಡಿಕೊಂಡು ಸುಖವಾಗಿ ತಿಂದುಂಡು ರಣರಂಗದಲ್ಲಿ ಆನಂದದಿಂದ ನಲಿದಾಡುತ್ತಲಿರುವ ನಾನು ಮರುಳನೋ?

ದು. — (ಮೌನವಾಗಿ ಮುಂದೆ ನಡೆಯುವನು.)

ಮ. — ನನ್ನ ಪ್ರಶ್ನೆಗೆ ಉತ್ತರ ಕೊಡದೆ ಹೋದರೆ ನಿನಗೆ ಧೂರ್ಜಟಿಯಾಣೆಯಾಗಿದೆ, ಭೀಮನಾಣೆಯಾಗಿದೆ.

ದು. — (ಧೂರ್ಜಟಿಯಾಣೆಗೆ ನಿಂತು, ಭೀಮನ ಹೆಸರನ್ನು ಕೇಳಿ ಸಿಟ್ಟಿಗೆದ್ದು) ಮೂರ್ಖ ಮರುಳೇ, ನಿನ್ನನ್ನು ಈಗಲೇ ಸಂಹರಿಸುವೆನು. ರಣರಂಗದಲ್ಲಿ ಮನ ಬಂದಂತೆ ತಿಂದು ಕೊಬ್ಬಿರುವದರಿಂದ ನಿನ್ನ ನಾಲಗೆ ಉದ್ದವಾಗಿದೆಯೇನು? (ಗದೆಯೆತ್ತುವನು.)

ಮ. — ಅಹಹಾ! (ನಕ್ಕು) ನಾನೇನು ನಿನ್ನಂತೆ ಒಂಟಿಗನಾಗಿಲ್ಲ! ನನ್ನ ಅಣ್ಣ – ತಮ್ಮಂದಿರ ಬಳಗವನ್ನು ನೋಡಿಲ್ಲವೇ ನೀನು. (ದೊಡ್ಡ ದನಿಯಿಂದ) ಬರ್ರಿ! ಬರ್ರಿ! ಬೇಗ ಬರ್ರಿ! ಈ ದುಷ್ಟ ದುರ್ಯೋಧನನ ಎಲುವು ಮುರಿಯೋಣ. (ಪಿಶಾಚಿಗಳೆಲ್ಲ ಆಯುಧಪಾಣಿಗಳಾಗಿ ಓಡಿ ಬರುವರು.)

ಸಂ. — (ನಯದಿಂದ) ಫಣಿರಾಜಕೇತನ ಶಾಂತನಾಗು, ಸೈರಿಸು, ಸೈರಿಸು, ನಾವು ಈಗ ಇಲ್ಲಿ ಬಡಿದಾಡುತ್ತ ನಿಂತರೆ ಮುಂದಿನ ಕಾರ್ಯವೆಲ್ಲ ಕೆಡುವದು. ಈ ಮರುಳಗಳು ಮರುಳಗಳೇ, ಅವುಗಳ ಗೊಡವೆ ಬೇಡ. ನಾವು ಮುಂದೆ ಸಾಗುವಾ.

(ದುರ್ಯೋಧನನ್ನು ಕರೆದುಕೊಂಡು ಮುಂದೆ ಸಾಗುವನು.
ಮರುಳಗಳು ಶಾಂತವಾಗುವವು.)

**ಶಬ್ದಾರ್ಥ :**

ಮರುಳ್ – ಹುಚ್ಚ, ಪಿಶಾಚಿ, ಭೂತ; ಸಮಾರಾಧನೆ – ಊಟ, ಪ್ರಸ್ತ; ಕೌಟಿಲ್ಯ – ವಂಚನೆ, ಮೋಸ; ಅಡಗ – ಮಾಂಸ; ಉಣಿಂ – ಉಣ್ಣಿರಿ, ತಿನ್ನಿರಿ; ಉಗ್ರಾಣ – ಸಂಗ್ರಹ, ವಖಾರ; ಪೈಶಾಚಿಕ ಭಾಷೆ – ಪಿಶಾಚಿಗಳು ಮಾತನಾಡುವ ಭಾಷೆ; ಹಿಂದಕ್ಕೆ ಭಾರತದಲ್ಲಿ ಪ್ರಚಾರವಲ್ಲಿದ್ದ ಒಂದು ಭಾಷೆ; ಗುಣಾಢ್ಯ – ಪೈಶಾಚಿಕ ಭಾಷೆಯ ಮಹಾಕವಿ, ಗುಣವುಳ್ಳವ; ಅಧ್ವರ್ಯು – ಮುಖ್ಯಸ್ಥ; ಛಲ – ಹಟ; ಸಂಧಿ – ಒಪ್ಪಂದ; ಊರುಭಂಗ – ತೊಡೆ ಮುರಿಯುವದು; ಧೂರ್ಜಟಿ – ಶಿವ; ಆಯುಧಪಾಣಿ – ಕೈಯಲ್ಲಿ ಶಸ್ತ್ರ ಹಿಡಿದವ;

**ಪ್ರಶ್ನೆ:**

೧. ಆನೆಯ ಹೆಣವನ್ನು ಇಟ್ಟುಕೊಂಡು ಕುಳಿತ ಮರುಳು ಅದನ್ನು ಏಕೆ ತಿಂದಿರಲಿಲ್ಲ ?
೨. ಇನೆಯ ಮರುಳು ತನ್ನ ಬಗ್ಗೆ ಏನೆಂದು ಜಂಭ ಕೊಚ್ಚಿಕೊಳ್ಳುತ್ತದೆ ?
೩. ದುರ್ಯೋಧನ, ಸಂಜಯರು ಎಲ್ಲಿ ಹೊರಟಿರುತ್ತಾರೆ ? ಏಕೆ ?
೪. ಇನೇ ಮರುಳು ದುರ್ಯೋಧನನಿಗೆ ಏನು ಹೇಳುತ್ತದೆ ?
೫. ದುರ್ಯೋಧನನು ಏಕೆ ಬೀಳುತ್ತಾನೆ ? ಊರುಭಂಗವಾಗಲಿಲ್ಲವೇ ಎಂದು ದುರ್ಯೋಧನನಿಗೆ ಸಂಜಯನು ಏಕೆ ಕೇಳುತ್ತಾನೆ ?
೬. ದುರ್ಯೋಧನನೇ ನಿಜವಾದ ಮರುಳನೆಂದು ಮರುಳು ಹೇಗೆ ಸಿದ್ಧಮಾಡುತ್ತದೆ ?
೭. ಕೆಳಗಿನ ಮಾತುಗಳ ಸ್ವಾರಸ್ಯ ತಿಳಿಯುವಂತೆ ಅವುಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿ ಬರೆಯಿರಿ.
   ೧. ಸಮಾರಾಧನೆ. ೨. ಉಗ್ರಾಣ. ೩. ಅಧ್ವರ್ಯು. ೪. ಮರುಳು. ೫. ನಾಲಗೆ ಉದ್ದವಾಗು.

**ವ್ಯಾಕರಣ:**

## ಸಾಮಾನ್ಯಾರ್ಥಕ ಸರ್ವನಾಮಗಳು

(ಅ) ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಪದಗಳನ್ನು ನಿರೀಕ್ಷಿಸಿರಿ.

೧) **ಯಾವನೊಬ್ಬನು** ದುರ್ಯೋಧನನನ್ನು ಯುದ್ಧದಿಂದ ತಿರುಗಿಸಲು ಸಮರ್ಥನಾಗಲಿಲ್ಲ.

೨) **ಯಾವದೊಂದು** ಮರುಳು ರಣರಂಗದಲ್ಲಿ ಸುಳಿದಾಡುತ್ತಲಿತ್ತು

೩) **ಒಂದಾನೊಂದು** ಕಾಲದಲ್ಲಿ ದುರ್ಯೋಧನನು ಸಾಮ್ರಾಟನಾಗಿದ್ದನು.

ಮೊದಲನೆಯ ವಾಕ್ಯದಲ್ಲಿ ಬರುವ **ಯಾವನೊಬ್ಬನು** ಎಂಬ ಪದವು ಒಬ್ಬರ ಹೆಸರನ್ನು ನಿರ್ದಿಷ್ಟವಾಗಿ ಹೇಳುವದಿಲ್ಲ. ಅದು ಧೃತರಾಷ್ಟ್ರ, ಸಂಜಯ, ಭೀಷ್ಮ ಇವರೆಲ್ಲರನ್ನೂ ಒಳಗೊಳ್ಳುತ್ತದೆ. ಧೃತರಾಷ್ಟ್ರ, ಸಂಜಯ; ಭೀಷ್ಮ ಇವೆಲ್ಲ ಹೆಸರು

ಗಳು ನಾಮಪದಗಳು. ಈ ನಾಮಪದಗಳ ಬದಲಾಗಿ ಬಂದ **ಯಾವನೊಬ್ಬನು,** ಎಂಬ ಪದವು ಸರ್ವನಾಮವು. ಅದು ಈ ಮೂವರಿಗೂ ಸಾಮಾನ್ಯವಾಗಿರುವದ ರಿಂದ ಅದನ್ನು **ಸಾಮಾನ್ಯಾರ್ಥಕ ಸರ್ವನಾಮವೆಂದು** ಕರೆಯುತ್ತಾರೆ. ಇದ ರಂತೆಯೇ ಎರಡನೆಯ ವಾಕ್ಯದಲ್ಲಿ ಬಂದ **ಯಾವದೊಂದು** ಎಂಬ ಪದವೂ ಇಂಥದೇ ಮರುಳು ಎಂಬುದನ್ನು ನಿರ್ದಿಷ್ಟವಾಗಿ ಹೇಳದೇ ಸಾಮಾನ್ಯವಾಚಕವಾಗಿದ್ದು ಮರುಳು ಎಂಬ ನಾಮಪದದ ಬದಲಾಗಿ ಬಂದಿದೆ. ಆದ್ದರಿಂದ ಇದು **ಸಾಮಾನ್ಯಾ ರ್ಥಕ ಸರ್ವನಾಮ** ಮತ್ತು ಮೂರನೆಯ ವಾಕ್ಯದಲ್ಲಿ **ಒಂದಾನೊಂದು** ಎಂಬುದು ಇಂಥದೇ ಕಾಲವೆಂದು ನಿರ್ದಿಷ್ಟಪಡಿಸದೇ ಸಾಮಾನ್ಯಾರ್ಥಕದಲ್ಲಿ ಬಂದಿದೆ ಹಾಗೂ ಕಾಲವೆಂಬ ನಾಮಪದದ ಬದಲಾಗಿ ಬಂದಿದೆ. ಆದ್ದರಿಂದ ಇದು **ಸಾಮಾನ್ಯಾರ್ಥಕ ಸರ್ವನಾಮ.**

ಯಾವನು, ಯಾವಳು, ಯಾವದು ಮೊದಲಾದ ಸರ್ವನಾಮಗಳ ಮುಂದಾ ಗಲಿ, ಒಬ್ಬ, ಒಂದು ಎಂಬ ಸಂಖ್ಯಾವಾಚಕಗಳ ಮುಂದಾಗಲಿ, ಬೇರೆ, ಇನ್ನು, ಮತ್ತೆ ಮುಂತಾದ ಅವ್ಯಯಗಳ ಮುಂದಾಗಲಿ, ಒಬ್ಬನು, ಒಬ್ಬಳು, ಒಂದು ಮುಂತಾದ ಸಂಖ್ಯಾವಾಚಕಗಳು ಸೇರಿ **ಸಾಮಾನ್ಯಾರ್ಥಕ ಸರ್ವನಾಮ**ಗಳಾಗು ವವು.

ಯಾವನೊಬ್ಬನು, ಯಾವಳೊಬ್ಬಳು, ಯಾರೊಬ್ಬರು, ಯಾವದೊಂದು, ಯಾವೊಂದು, ಒಬ್ಬಾನೊಬ್ಬನು, ಒಬ್ಬಾಳೊಬ್ಬಳು, ಒಂದಾನೊಂದು, ಬೇರೊಬ್ಬ, ಮತ್ತೊಬ್ಬ, ಇನ್ನೊಬ್ಬ, ಇನ್ನೊಂದು, ಬೇರೊಂದು, ಮತ್ತೊಂದು ಇವೆಲ್ಲ **ಸಾಮಾ ನ್ಯಾರ್ಥಕ ಸರ್ವನಾಮ**ಗಳು.

(ಬ) ಮೇಲೆ ಕೊಟ್ಟ ಸಾಮಾನ್ಯಾರ್ಥಕ ಸರ್ವನಾಮಗಳಲ್ಲಿ ಬೇಕಾದ ಎಂಟು ಶಬ್ದಗಳನ್ನು ಉಪಯೋಗಿಸಿ ಎಂಟು ವಾಕ್ಯಗಳನ್ನು ಬರೆಯಿರಿ.

# ೧೮. ನಾರಿನ ಬೆಳೆಗಳು

[ ಭೂಮಿಯ ಮೇಲೆ ಬೆಳೆಯುವ ಬೆಳೆಗಳು ನಮಗೆ ಆಹಾರವನ್ನಲ್ಲದೆ ಆಶ್ರಯ, ಆಚ್ಛಾದನಗಳನ್ನು ಒದಗಿಸುತ್ತವೆ. ಈ ಪಾಠದಲ್ಲಿ ನಮಗೆ ಆಚ್ಛಾದನವನ್ನು ಒದಗಿ ಸುವ ಬೆಳೆಗಳ ಸಂಕ್ಷಿಪ್ತ ಪರಿಚಯವನ್ನು ಕೊಡಲಾಗಿದೆ. ]

• • •

ಯಾವಾಗಲೂ ನಿಮ್ಮ ಮನಸೆಳೆಯುವ ಬಣ್ಣ – ಬಣ್ಣದ ರೇಶಿಮೆಯ ಬಟ್ಟೆಗಳು, ನಿತ್ಯೋಪಯೋಗಿಯಾದ ಹಗ್ಗ, ಕಾತಿಗಳು ಹೇಗೆ ಮತ್ತು ಎಲ್ಲಿಂದ ಬಂದವೆಂಬುದನ್ನು ವಿಚಾರಿಸಲು ನೀವು ಒಂದರೆಕ್ಷಣವಾದರೂ ತಡೆದಿದ್ದೀರಾ ?

ಇವೆಲ್ಲಕ್ಕೂ ನಮ್ಮ ಭೂಮಿತಾಯಿ ಮತ್ತು ಅವಳ ಮೇಲೆ ಬೆಳೆಯುವ ಒಂದು ತರಹದ ವಿಶಿಷ್ಟ ಜಾತಿಯ ಬೆಳೆಗಳೇ ಮೂಲ ಆಧಾರ. ಇವುಗಳಿಗೆ ನಾವು 'ನಾರಿನ ಬೆಳೆಗಳು' ಎನ್ನುತ್ತೇವೆ; ಏಕೆಂದರೆ, ಈ ಬೆಳೆಗಳ ಒಂದಿಲ್ಲೊಂದು ಭಾಗದಿಂದ ನಾರು ಹೊರಡುತ್ತದೆ. ಜ್ಯೂಟು, ಪುಂಡಿ, ಕಲ್ನಾರು, ತೆಂಗು ಮೊದಲಾದವುಗಳು ಮುಖ್ಯವಾದ ಕೆಲವು ನಾರಿನ ಬೆಳೆಗಳು.


ಜೂಟ


ಪುಂಡಿ


ಕಲ್ನಾರು


ತೆಂಗು

ಈ ನಾರಿನ ಬೆಳೆಗಳು ವಿಶ್ವದ ಅತಿ ಮಹತ್ವವಾದ ರೊಕ್ಕದ ಬೆಳೆಗಳೂ ಹೌದು. ಆಹಾರದ ತರುವಾಯ ಮನುಷ್ಯನ ಮೂಲ ಅವಶ್ಯಕತೆಯೆಂದರೆ ಬಟ್ಟೆಯೇ ಆಗಿದೆ. ಇದಕ್ಕಾಗಿಯೇ ಮನುಷ್ಯನು ದಿನರಾತ್ರಿ ಹೆಣಗಾಡುತ್ತಾನೆ. ಪುರಂದರದಾಸರೇ ಹಾಡಿಲ್ಲವೇ—"ಎಲ್ಲರೂ ಮಾಡುವದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ" ಎಂದು? ಬಟ್ಟೆಬರೆಯಲ್ಲದೆ, ನಾರಿನ ಬೆಳೆಗಳಿಂದ ಕೆಲವು ಬೇರೆ ಉಪಯೋಗಗಳೂ ಉಂಟು. ಜೂಟಿನ ನಾರಿನಿಂದ ಒಳ್ಳೇ ಗಟ್ಟಿಯಾದ ಗೋಣಿ ಚೀಲಗಳನ್ನು ತಯಾರಿಸುತ್ತಾರೆ. ತೆಂಗಿನ ನಾರಿನಿಂದ ಸಣ್ಣ ಆಟಿಗೆಗಳನ್ನು ಮೊದಲು ಮಾಡಿ ನೆಲದ ಮೇಲೆ ಹಾಕುವ ಕಾತಿಯ ಹಾಸುಗಳ ವರೆಗೆ ಅನೇಕ ಸಾಮಾನುಗಳನ್ನು ತಯಾರಿಸುತ್ತಾರೆ.

ನಮ್ಮ ದೇಶದ ಮಹತ್ವದ ನಾರಿನ ಬೆಳೆಯೆಂದರೆ 'ಜೂಟ' ಇದರ ವೈಶಿಷ್ಟ್ಯವೆಂದರೆ ಇದು ಹಿಂದುಸ್ತಾನ, ಪೂ. ಪಾಕಿಸ್ತಾನಗಳನ್ನು ಬಿಟ್ಟು ಬೇರೆ ಯಾವ ದೇಶದಲ್ಲೂ ಬೆಳೆಯುವದಿಲ್ಲ. ಅದರಲ್ಲೂ ಬಂಗಾಲ ಪ್ರಾಂತವು ವೇದ ಕಾಲದಿಂದಲೂ ಇದರ ತವರುಮನೆಯಾಗಿದೆ. ಹಿಂದುಸ್ತಾನವು ವಿಭಾಗವಾದ ಮೇಲೆ ಜೂಟ ಬೆಳೆಯುವ ಭಾಗವು ಪಾಕಿಸ್ತಾನಕ್ಕೆ ಹೋಗಿದೆ. ಆದರೆ ಅನೇಕ ಜೂಟಿನ ಗಿರಣಿಗಳು ಮಾತ್ರ ಹಿಂದುಸ್ತಾನದಲ್ಲಿಯೇ ಇವೆ. ಈ ಕಾರಣದಿಂದಲೂ ಮತ್ತು ಜೂಟಿನ ಮಹತ್ತರವಾದ ಉಪಯೋಗದ ದೃಷ್ಟಿಯಿಂದಲೂ ಹಿಂದುಸ್ತಾನ ಸರಕಾರವು ದೇಶದ ಬೇರೆ ಬೇರೆ ಪ್ರಾಂತಗಳಲ್ಲಿ ಇದನ್ನು ಬೆಳೆಯುವ

ಹೀಗೆ ಎರಡು ಕ್ರಿಯೆಗಳ ಸಂಬಂಧವನ್ನು ಸ್ಪಷ್ಟಗೊಳಿಸುವದಕ್ಕಾಗಿ **ಯಾವದು, ಅದು** ಈ ಸರ್ವನಾಮಗಳನ್ನು ಉಪಯೋಗಿಸಿದೆ. ಎರಡನೆಯ ವಾಕ್ಯದಲ್ಲಿ ಹೆಚ್ಚು ಬೆಳೆಯುವ ಕ್ರಿಯೆಗೂ ಹೆಚ್ಚು ಸಂಪತ್ತನ್ನು ಪಡೆಯುವ ಕ್ರಿಯೆಗೂ ಇರುವ ಸಂಬಂಧವನು ಸ್ಪಷ್ಟಗೊಳಿಸುವದಕ್ಕಾಗಿ **ಯಾರು, ಅವರು** ಎಂಬ ಸರ್ವನಾಮಗಳನ್ನು ಉಪಯೋಗಿಸಿದೆ.

ಹೀಗೆ (ಎರಡು ಕ್ರಿಯೆಗಳಲ್ಲಿರುವ) ಸಂಬಂಧವನ್ನು ಸ್ಪಷ್ಟಗೊಳಿಸುವದಕ್ಕಾಗಿ ಅವನು, ಅವಳು, ಅದು ಈ ಸರ್ವನಾಮಗಳಿಗೆ ಸಂಬಂಧಿಸಿ ಬರುವ ಯಾವನು, ಯಾವಳು, ಯಾವದು ಎಂಬ ಸರ್ವನಾಮಗಳಿಗೆ **ಸಂಬಂಧಾರ್ಥಕ ಸರ್ವನಾಮ**ಗಳೆಂದು ಹೆಸರು. ಇವು ಪ್ರಥಮಾ ವಿಭಕ್ತಿಯಂತೆ ಎಲ್ಲ ವಿಭಕ್ತಿಗಳನ್ನೂ ಹೊಂದುವವು.

(ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಸ್ಥಳಗಳಲ್ಲಿ ಯೋಗ್ಯವಾದ ಸಂಬಂಧಾರ್ಥಕ ಸರ್ವನಾಮಗಳನ್ನು ತುಂಬಿರಿ.

೧) ........ನಡೆಯುವನೋ........ಎಡಹುವನು.
೨) ........ಬಿತ್ತುವನೋ........ಬೆಳೆಯುವನು.
೩) ........ದುಃಖವಾಗಿದೆಯೋ .......ಅಳುವಳು.
೪) ........ತಾಳುವದೊ........ಬಾಳುವದು.
೫) ........ಜಡ್ಡು ಆಗಿರುವದೋ .......ಔಷಧ ಕುಡಿಯುವರು.



# ೧೯. ಸ್ವಾತಂತ್ರ್ಯದ ಸಂದೇಶ

[ ಮಾನವನಿಗೆ ಯಾವ ಸುಖವಿದ್ದರೂ ಸ್ವಾತಂತ್ರ್ಯವಿಲ್ಲದಿದ್ದರೆ ಅವನು ದುಃಖಿಯೇ ಸರಿ! ಅಂದಮೇಲೆ ಸ್ವಾತಂತ್ರ್ಯದ ಮಹತ್ವವು ಎಷ್ಟಿದೆ! ನೀವೇ ವಿಚಾರಿಸಿರಿ. ಬಂಧನದಲ್ಲಿರುವ ಒಂದು ಗಿಳಿ ಹೇಗೆ ತನ್ನ ಅಮೂಲ್ಯವಾದ ಸ್ವಾತಂತ್ರ್ಯವನ್ನು ಗಳಿಸಿತು ಎಂಬುದನ್ನು ಈ ಕತೆಯಲ್ಲಿ ನೀವು ನೋಡುವಿರಿ. ]

ಕಾಬೂಲ ಪಟ್ಟಣದಲ್ಲಿ ಒಬ್ಬ ವರ್ತಕನಿದ್ದನು. ಅವನು ದೂರ ದೂರ ದೇಶಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದನು. ಹಿಂದುಸ್ತಾನ, ಚೀನ, ಜಪಾನ ದೇಶಗಳಲ್ಲಿ ರತ್ನಗಳ ವ್ಯಾಪಾರ ಮಾಡಿ, ಅಪಾರ ಧನವನ್ನು ಗಳಿಸಿದ್ದನು. ಅಷ್ಟೊಂದು ಸಿರಿವಂತಿಕೆಯಿದ್ದರೂ ವರ್ತಕನಲ್ಲಿ ಎಳ್ಳಷ್ಟೂ ಆಲಸ್ಯವಿರಲಿಲ್ಲ. ಮತ್ತೆ ಮತ್ತೆ ಹೊರಪ್ರಾಂತಗಳಿಗೆ ಹೋಗುತ್ತಿದ್ದನು; ವ್ಯಾಪಾರ ಮಾಡಿ ಕೈತುಂಬ ಹಣವನ್ನು ಗಳಿಸುತ್ತಿದ್ದನು. ಈ ಎಡೆಬಿಡದೆ ದುಡಿತದಿಂದ ಅವನ ಮನೆ ಸಿರಿದೇವಿಯ ತವರಾಗಿತು.

ವರ್ತಕನದೊಂದು ಪುಟ್ಟ ಸಂಸಾರ; ಚೆಲುವೆಯಾದ ಹೆಂಡತಿ, ಮುದ್ದು ಮುದ್ದಾದ ಎರಡು ಗಂಡು ಮಕ್ಕಳು, ಎರಡು ಹೆಣ್ಣು ಮಕ್ಕಳು. ಇವರೆಲ್ಲರ ನಲಿವಿನ ನೆಲೆಯಾಗಿ ಅಂದವಾದದ್ದೊಂದು ಅರಗಿಳಿ. ಈ ಗಿಳಿಯನ್ನು ಆತನು ಭಾರತಕ್ಕೆ ಹೋದಾಗ ವೃಂದಾವನದಿಂದ ತಂದಿದ್ದನು. ಅದೊಂದು ಅರಗಿಳಿ; ಕಲಿಸಿದ ಮಾತುಗಳನ್ನಲ್ಲದೆ, ಸ್ವಬುದ್ಧಿಯಿಂದಲೂ ಮಾತನಾಡುತ್ತಿತ್ತು. ಅದರ ನಿಚ್ಚಳವಾದ ಉಚ್ಚಾರಗಳು ಮಕ್ಕಳ ಮಾತಿನಂತೆ ಮುದ್ದು ಮುದ್ದಾಗಿದ್ದವು. ಅದರಿಂದ ಮನೆಯವರಿಗೆಲ್ಲರಿಗೂ ಅದು ಅಚ್ಚುಮೆಚ್ಚಾಗಿತ್ತು. ನಿತ್ಯವೂ ಅದಕ್ಕೆ ಹೊಸ ಹೊಸ ಪಕ್ವಫಲಗಳನ್ನು ಕೊಡುತ್ತಿದ್ದರು. ಯಾವ ತಿನಿಸು-ಉಣಿಸು ಗಳಿಗೂ ಅದಕ್ಕೆ ಕೊರತೆಯಿರಲಿಲ್ಲ. ಅದರ ವಾಸಕ್ಕೆ ವರ್ತಕನು ಚಿನ್ನದ ಪಂಜರ ವನ್ನೇ ಮಾಡಿಸಿದ್ದನು.

ಒಮ್ಮೆ ವಸಂತಮಾಸ ಬಂದಿತು. ವರ್ತಕ ವ್ಯಾಪಾರಕ್ಕೆಂದು ಹೊರದೇಶ ಗಳಿಗೆ ಹೊರಡಲು ಸಿದ್ಧತೆಯನ್ನು ನಡೆಸಿದನು. ಪ್ರಯಾಣಕ್ಕೆ ಮುನ್ನ, ತನ್ನ ಹೆಂಡತಿ ಮಕ್ಕಳನ್ನು ಕರೆದು "ನಾನು ಭಾರತಕ್ಕೆ ಹೋಗುವೆ. ಅಲ್ಲಿಂದ ನಿಮಗೆ ಏನೇನು ತರಬೇಕು ?" ಎಂದು ಕೇಳಿದನು.

ಭಾರತದಲ್ಲಿ ಬಗೆಬಗೆಯ ಬೆಡಗಿನ ವಸ್ತುಗಳು ಹುಟ್ಟುತ್ತಿವೆ, ಎಂದು ಅವರಿಗೆ ಗೊತ್ತಿತ್ತು. ಎಲ್ಲರೂ ತಮತಮಗೆ ಬೇಕಾದ ಸುಂದರ ಒಡವೆಗಳನ್ನು ಹೇಳಿದರು. ಹೆಂಡತಿ, ಬನಾರಸದ ಪೀತಾಂಬರಗಳನ್ನು ಬೇಡಿದಳು. ಮಕ್ಕಳು ಅಂದಚೆಂದದ ಆಭರಣಗಳನ್ನು ಕೇಳಿದರು. ಅವರ ಬೇಡಿಕೆಗಳನ್ನು ಕೇಳಿದಂತೆಲ್ಲ ವರ್ತಕನಿಗೆ ಹಿಗ್ಗು. ಎಲ್ಲವನ್ನೂ ತರುವೆನೆಂದು ಹೇಳಿ, ಹೊರಹೊರಡುತ್ತಿದ್ದ; ಅಷ್ಟರಲ್ಲಿ— "ಹೋಗಿ ಬಾ ನನ್ನೊಡೆಯಾ, ನಿನ್ನ ಪ್ರಯಾಣ ಸುಖಕರವಾಗಲಿ." ಎಂಬ ದನಿ ಕೇಳಿತು.

ವರ್ತಕ ಕತ್ತೆತ್ತಿ ನೋಡಿದನು. ಪಂಜರದೊಳಗಿನ ಅರಗಿಳಿ ರೆಕ್ಕೆಗಳನ್ನು ಹರವಿ ಸುಖಪ್ರಯಾಣವನ್ನು ಹಾರೈಸುತ್ತಿತ್ತು. ಗಿಳಿಯ ಸಮಯಸೂಚಕ ವಚನಗಳಿಂದ ವರ್ತಕನಿಗೆ ಪರಮಾನಂದವಾಯಿತು.

"ಅಹುದಲ್ಲವೇ ಮಗೂ ! ಪ್ರಯಾಣದ ಗಡಿಬಿಡಿಯಲ್ಲಿ ನಿನ್ನನ್ನು ಮರತೇ ಬಿಟ್ಟಿದ್ದೆ, ಒಳ್ಳೆಯದು. ನಾನು ಈಗ ಭಾರತಕ್ಕೆ ಹೊರಟಿರುವೆ. ಅಲ್ಲಿಂದ ನಿನ ಗೇನು ತರಬೇಕು ?" ಎಂದು ಮಕ್ಕಳನ್ನು ಮಾತಾಡಿಸುವಂತೆ ಮಮತೆಯಿಂದ ಗಿಳಿಯನ್ನು ಕೇಳಿದನು.

"ನನಗೆ ಯಾವ ಕೊರತೆಯಾಗಿದೆಯೆಂದು ಹೆಚ್ಚಿನದನ್ನು ತರುವುದಕ್ಕೆ ಹೇಳಲಿ? ವಾಸಕ್ಕೆ ಚಿನ್ನದ ಪಂಜರ; ಗ್ರಾಸಕ್ಕೆ ಹಣ್ಣು-ಹಂಪಲುಗಳು, ಸವಿಸವಿ ತಿನಿಸುಗಳು! ನನಗಾಗಿ ತರಲೇಬೇಕೆಂಪರೆ..........." ಗಿಳಿ ಅರ್ಧವಲ್ಲಿಯೇ ಮಾತನ್ನು ನಿಲ್ಲಿಸಿತು.

"ಹೇಳು ಹೇಳು, ನನ್ನ ಚಿನ್ನ! ಸಂಕೋಚವೇಕೆ? ನಿನಗಾಗಿ ಏನು ಬೇಕೆಂದರೂ ತರುವೆ." ವರ್ತಕ ಅಕ್ಕರೆಯ ಮಾತುಗಳನ್ನಾಡಿದ.

"ಒಡೆಯಾ, ಭಾರತ ನನ್ನ ತಾಯಿನಾಡು. ಅಲ್ಲಿ ನನ್ನ ಬಂಧುಬಾಂಧವ ರೆಲ್ಲ ಇದ್ದಾರೆ. ಇಲ್ಲಿ ನಾನೊಬ್ಬನೇ ಇರುವೆ. ನನ್ನ ಸುಖಜೀವನವನ್ನು ಅವರಿಗೆ ತಿಳಿಸು. ನನ್ನ ಒಡನಾಡಿಗಳಾರಾದರೂ ಬರುವಂತಿದ್ದರೆ ಕರೆತರಬೇಕು. ಬಾರ ದಂತಿದ್ದರೆ, ಅವರು ಹೇಳುವ ಮಾತುಗಳನ್ನಾದರೂ ಕೇಳಿಕೊಂಡು ಬರಬೇಕು. ನಿಮ್ಮ ವ್ಯಾಪಾರದ ಗಡಿಬಿಡಿಯಲ್ಲಿ ಈ ಮಾತು ನೆನಪುಳಿಯುವದೋ ಇಲ್ಲವೋ" ಗಿಳಿಯ ಮಾತಿನಲ್ಲಿ ಮರುಕವಿತ್ತು.

"ಮರುಗಬೇಡ ಮಗು! ನಿನ್ನ ಕೆಲಸವನ್ನು ಮರೆಯುವ ಕಲ್ಲೆದೆಯಲ್ಲ ನನ್ನದು."

ವರ್ತಕ ಗಿಳಿಯನ್ನು ಸಂತವಿಸಿ ಪ್ರಯಾಣವನ್ನು ಬೆಳೆಸಿದ.

ಭಾರತದಲ್ಲಿ ತಿಂಗಳುಗಟ್ಟಲೆ ವ್ಯಾಪಾರ ನಡೆಯಿತು. ಪ್ರತಿಸಲಕ್ಕಿಂತಲೂ ಈ ಸಲ ಹೆಚ್ಚಾದ ಲಾಭವಾಯಿತು. ಹೆಂಡತಿ–ಮಕ್ಕಳು ಹೇಳಿದ ಒಡವೆಗಳನ್ನೆಲ್ಲ ಕೊಂಡುಕೊಂಡ. ವೃಂದಾವನದ ಮಾರ್ಗವಾಗಿ ಕಾಬೂಲಕ್ಕೆ ಹೊರಟ.

ವೃಂದಾವನದಲ್ಲಿ ವಸಂತಮಾಸದ ಬನಸಿರಿ ಬೆಡಗಿನಿಂದ ಮೆರೆಯುತ್ತಿತ್ತು. ಬಗೆಬಗೆಯ ಗಿಳಿವಿಂಡುಗಳು ಮಾವಿನ ಎಳದಳಿರುಗಳನ್ನು ಮೆಲ್ಲುತ್ತ ಮಂಜುಲ ವಾಗಿ ಕಿಲಿಕಿಲಿಸುತ್ತಿದ್ದುವು; ಸ್ವಚ್ಛಂದವಾಗಿ ಅತ್ತಿಂದಿತ್ತ ಹಾರಾಡುತ್ತಿದ್ದುವು. ವರ್ತಕ ಒಂದು ಗಿಳಿಯ ಗುಂಪನ್ನುದ್ದೇಶಿಸಿ— "ಗಿಳಿಗಳೇ, ಕಾಬೂಲದ ನನ್ನ ಮನೆಯಲ್ಲಿ ನಿಮ್ಮ ಬಂಧುವಿದ್ದಾನೆ, ಅವನಿಗೆ ಇರುವುದಕ್ಕೆ ಚಿನ್ನದ ಪಂಜರವನ್ನು ಮಾಡಿಸಿರುವೆ. ಅವನ ಉಣಿಸು-ತಿನಿಸುಗಳ ಬಗೆಗೆ ಹಾಲು ಹಣ್ಣು ಯಾವುದೂ ಕೊರತೆಯಿಲ್ಲ. ನಿತ್ಯವೂ ನಲಿನಲಿಯುತ್ತ ನಮ್ಮೊಡನೆ ಮಾತನಾಡುತ್ತಾನೆ. ಆದರೆ ಒಂಟಿಗನಾಗಿರಲು ಬೇಸತ್ತಿದ್ದಾನೆ. ಆ ಸುಖಜೀವನವನ್ನು ಅನುಭವಿಸಲು ನಿಮ್ಮಲ್ಲಿ ಯಾರಾದರೂ ಬರುವಂತಿದ್ದರೆ, ಕರೆತರಲು ಹೇಳಿದ್ದಾನೆ. ಬರಲಿಚ್ಛೆ ಇದ್ದವರು........"

ವರ್ತಕನ ಮಾತು ಇನ್ನೂ ಮುಗಿದಿರಲಿಲ್ಲ; ಅಷ್ಟರಲ್ಲಿ ಆ ಗುಂಪಿನ ಗಿಳಿ ಯೊಂದು ಫಡಫಡ ರೆಕ್ಕೆ ಜಾಡಿಸಿ ಗೋಣು ಹೊರಳಿಸಿ ನೆಲದಮೇಲೆ ಬಿದ್ದಿತು. ಅದು ಸತ್ತೇಹೋಯಿತೆಂದು ವರ್ತಕನ ಕಲ್ಪನೆಯಾಯಿತು. ಅದರ ಆ ವಿಚಿತ್ರ ಮರಣಕ್ಕೆ ಕಾರಣವೇನೆಂಬುದೇ ಅವನಿಗೆ ತಿಳಿಯಲಿಲ್ಲ. ಉಳಿದ ಗಿಳಿಗಳೂ ಒಮ್ಮಿಂದೊಮ್ಮೆಲೆ ತಮ್ಮ ಉಲಿವನ್ನು ನಿಲ್ಲಿಸಿದವು; ದುಃಖಸೂಚಕ ಮೌನದ ಧ್ವನಿಯನ್ನೇ ತೋರಪತ್ತಿದುವು. ಈ ವಿಲಕ್ಷಣ ಪ್ರಸಂಗದಿಂದ ವರ್ತಕನಿಗೆ ಪರಮಾಶ್ಚರ್ಯವಾಯಿತು. ಈ ನಿಷ್ಪಾಪ ಜೀವಿಗಳಿಗೆ ತಾನೇಕೆ ತೊಂದರೆ ಕೊಟ್ಟೆನೋ ಎಂದು ಮರುಗುತ್ತ ಕಾಬೂಲಕ್ಕೆ ಹೊರಟ.

ಮನೆ ಜನರೆಲ್ಲ ವರ್ತಕನ ಬರವನ್ನೇ ನಿರೀಕ್ಷಿಸುತ್ತಿದ್ದರು. ಅವನನ್ನು ಕಂಡಕೂಡಲೆ ಮಕ್ಕಳೆಲ್ಲ ಆದರದಿಂದ ಹಾರಾಡತೊಡಗಿದುವು. ಹೆಂಡತಿಗೂ ಹಿಡಿಸಲಾರದ ಹಿಗ್ಗಾಯಿತು. ಗಿಳಿಯೂ 'ಬಂದೆಯಾ ನನ್ನಡೆಯಾ' ಎಂದು ಸಂತೋಷದ ಸವಿ ನುಡಿಯನ್ನಾಡಿತು.

ವರ್ತಕ ತನ್ನೆಲ್ಲ ಒಡವೆಗಳನ್ನು ಮನೆಯವರಿಗೆ ಕೊಟ್ಟ. ಗಿಳಿಯು ಪಂಜರದತ್ತ ಹೋಗಿ ಮೌನವಾಗಿ ನಿಂತ...

"ಮೌನವೇಕೆ ನನ್ನೊಡೆಯಾ? ನನ್ನವರು ಯಾರೂ ಬರಲಿಲ್ಲವೇ? ಯಾರೂ ಸಂದೇಶವನ್ನು ಕೊಡಲಿಲ್ಲವೇ?" ಗಿಳಿ ಆತುರದಿಂದ ಕೇಳಿತು.

"ನಿನ್ನ ಬಂಧು ಬಾಂಧವರಿಗೆ ನಿನ್ನ ಸುಖ ಜೀವನವನ್ನು ತಿಳಿಸಿದೆ. ಅವರು ಬರುವದು ಹಾಗಿರಲಿ; ಒಂದು ಗಿಳಿ ತತ್‌ಕ್ಷಣವೇ ರೆಕ್ಕೆ ಜಾಡಿಸಿ ಗೋಣು ಹೊರಳಿಸಿ ಸತ್ತುಬಿದ್ದಿತು" ಎಂದು ಮರುಕದಿಂದ ಹೇಳಿದ.

ಆ ಮಾತನ್ನು ಕೇಳುತ್ತಲೇ ಪಂಜರದ ಗಿಳಿಯೂ ಅದೇ ರೀತಿಯಾಗಿ ಬಿದ್ದು ಬಿಟ್ಟಿತು. ವರ್ತಕನಿಗೆ ಗಿಳಿ ಸತ್ತಿತೆಂದು ಬಹಳ ಕಳವಳವೆನಿಸಿತು. ತಾನೇಕೆ ಈ ಕೆಟ್ಟ ಸುದ್ದಿಯನ್ನು ಹೇಳಿದೆನೋ, ಎಂದು ಮರಮರ ಮರುಗಿದ. ಉಪಾಯ ವಿಲ್ಲದೆ, ತನ್ನ ಗಿಳಿಯನ್ನು ಹೊರಗೆ ಚೆಲ್ಲಿದ.

ಪರಮಾಶ್ಚರ್ಯ! ಗಿಳಿ ಕೂಡಲೆ ರೆಕ್ಕೆ ಬಡಿಯುತ್ತ ದಾರಿಯ ಬದಿಯ ಮರದ ಮೇಲೆ ಕುಳಿತಿತು— "ಹೋಗಿಬರುವೆ ನನ್ನೊಡೆಯಾ! ಈ ವರೆಗೆ ನನ್ನನ್ನು ಮಕ್ಕಳಂತೆ ಮುದ್ದಿನಿಂದ ಸಾಕಿದುದಕ್ಕಾಗಿ ನಿನಗೆ ಅನಂತ ಪ್ರಣಾಮಗಳು ನನ್ನ ಬಂಧುಗಳ ಸಂದೇಶವನ್ನು ತಂದುದಕ್ಕಾಗಿ ಅನಂತ ಧನ್ಯವಾದಗಳು. ವೃಂದಾ ವನದಲ್ಲಿ ನನ್ನ ಬಂಧು ಸತ್ತುಬೀಳಲಿಲ್ಲ; ತನ್ನ ನಟನೆಯಿಂದ ನನಗೆ ಸ್ವಾತಂತ್ರ್ಯದ

ಸಂದೇಶವನ್ನು ಸೂಚಿಸಿದ ಅಷ್ಟೆ. ಅದೇ ಸಂದೇಶಾನುಸಾರವಾಗಿ ನಾನೀಗ ಸ್ವಾತಂತ್ರ್ಯವನ್ನು ಪಡೆದಿರುವೆ. ಇನ್ನು ಬಂಧುಬಾಂಧವರನ್ನು ಕೂಡಿಕೊಳ್ಳುವೆ. ಬಡ ಹಕ್ಕಿಯನ್ನು ಮರೆಯಬೇಡ ಒಡೆಯಾ! ಬರುವೆ. ಎಲ್ಲರಿಗೂ ನಮಸ್ಕಾರ"

ಆನಂದದ ದನಿಗೈಯುತ್ತ ಗಿಳಿ ವಿಶಾಲ ವಿಶ್ವದಲ್ಲಿ ಹಾರಿಹೋಯಿತು.

**ಶಬ್ದಾರ್ಥ:**

ಸಂದೇಶ – ಸುದ್ದಿ, ಉಪದೇಶ; ನೆಲೆ – ಸ್ಥಾನ; ನಿಚ್ಚಳ – ಸ್ಪಷ್ಟ; ಅಚ್ಚು ಮೆಚ್ಚು – ಪ್ರೀತಿ; ಕತ್ತು – ಕುತ್ತಿಗೆ, ಗೋಣು; ಹಾರೈಸು – ಇಚ್ಛಿಸು; ಮರುಕ – ದೈನ್ಯ; ಕಿಲಿಕಿಲಿಸು – ಧ್ವನಿಮಾಡು; ಸ್ವಚ್ಛಂದವಾಗಿ – ಮನಸ್ಸಿಗೆ ಬಂದಂತೆ; ನಿಷ್ಪಾಪ – ಪಾಪವಿಲ್ಲದ, ದೋಷವಿಲ್ಲದ; ಅನಂತ – ಬಹಳ; ಪ್ರಣಾಮ – ನಮಸ್ಕಾರ; ಧನ್ಯವಾದ – ವಂದನೆ.

**ಪ್ರಶ್ನೆ:**

೧. ಕಾಬೂಲದ ವರ್ತಕನು ಎಂಥ ಗಿಳಿಯನ್ನು ಸಾಕಿದ್ದ? ಅದು ಎಲ್ಲರಿಗೂ ಏಕೆ ಅಚ್ಚು ಮೆಚ್ಚಾಗಿತ್ತು?
೨. ವರ್ತಕನು ಭಾರತಕ್ಕೆ ಹೊರಟಾಗ ಎಲ್ಲರಿಗೂ ಏನೆಂದು ಕೇಳಿದನು? ಯಾರು ಯಾರು ಏನೇನು ಬೇಕೆಂದರು?
೩. ವರ್ತಕನು ಮಾತನಾಡಿಸಲು ವೃಂದಾವನದ ಗಿಳಿಗಳು ಏನು ಮಾಡಿದವು?
೪. ಪಂಜರದ ಗಿಳಿಯು ಹೇಗೆ ತನ್ನ ಸ್ವಾತಂತ್ರ್ಯವನ್ನು ಪಡೆಯಿತು?
೫. ಈ ಕತೆಯಿಂದ ನೀವು ಯಾವ ನೀತಿಯ ಮಾತನ್ನು ಕಲಿಯುವಿರಿ?

**ವ್ಯಾಕರಣ:**

## ಪುನರವಲೋಕನ

(ಅ) ಸರ್ವನಾಮಗಳಲ್ಲಿರುವ ಪ್ರಕಾರಗಳನ್ನು ಹೇಳಿರಿ.

(ಬ) ಕೆಳಗಿನ ವಾಕ್ಯಗಳಲ್ಲಿಯ ಸರ್ವನಾಮಗಳನ್ನು ಗುರುತಿಸಿ ಅವುಗಳ ಹೆಸರು ಹೇಳಿರಿ.

೧) ಕಾಬೂಲದಲ್ಲಿ ಒಬ್ಬಾನೊಬ್ಬ ವರ್ತಕನಿದ್ದನು.
೨) ಆವನು ದೂರ ದೂರ ದೇಶಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದನು.
೩) ಇವರೆಲ್ಲರ ನಲಿವಿನ ನೆಲೆಯಾಗಿ ಅಂದವಾದದ್ದೊಂದು ಅರಗಿಳಿ.
೪) ಈ ಗಿಳಿಯನ್ನು ಆತನು ಭಾರತಕ್ಕೆ ಹೋದಾಗ ತಂದಿದ್ದನು.
೫) "ನಾನು ಭಾರತಕ್ಕೆ ಹೋಗುವೆ. ಅಲ್ಲಿಂದ ನಿಮಗೆ ಏನೇನು ತರಬೇಕು?"
೬) "ಯಾರಿರಬಹುದು" ಆಕೆ?

೭) ನಿಮ್ಮಲ್ಲಿ ಯಾರಾದರೂ ಬರುವಂತಿದ್ದರೆ ಕರೆತರಲು ಹೇಳಿದ್ದಾನೆ.
೮) ರವೀಂದ್ರನಾಥ ಠಾಕೂರರ ಹೆಸರನ್ನು ಯಾರು ಕೇಳಿಲ್ಲ ?
೯) ಯಾರನ್ನು ನೀವು ಭುವನೇಶ್ವರಿ ಎಂದು ಕರೆಯುವಿರೋ ಅವಳೇ ನಾನು.
೧೦) ಯಾರಿಗೆ ತಮ್ಮ ತಾಯಿ ನಾಡಿನ ಬಗ್ಗೆ ಅಭಿಮಾನವೆನಿಸುವದಿಲ್ಲವೋ ಅವರಿಗೆ ದೇಶಭಕ್ತರು ಎಂಬ ಹೆಸರು ಸಲ್ಲುವದಿಲ್ಲ.

(ಕ) ಬಿಟ್ಟ ಸ್ಥಳಗಳಲ್ಲಿ ಯೋಗ್ಯ ಸರ್ವನಾಮಗಳನ್ನು ತುಂಬಿ ವಾಕ್ಯಗಳನ್ನು ಪೂರ್ಣಮಾಡಿರಿ.

೧) ....... ಬಂಧು ಬಾಂಧವರಿಗೆ .... .. ಸುಖಜೀವನವನ್ನು ತಿಳಿಸಿದೆ.
೨) ... .....ಎಂದು ಬರುವರು ? ........ಎಂದು ಹೋಗುವಿರಿ ?
೩) ....... ದೇಶಸೇವೆ ಮಾಡುವರೋ ........ನಿಜವಾದ ದೇಶಭಕ್ತರು.
೪) ....... ಅಲ್ಲಿ ನಿಂತವರು ........ ? ....ಪರದೇಶದಿಂದ ಬಂದಿರುವರೋ ?
೫) ....... ದೇಶದಲ್ಲಿ .... .. ಅರಸನಿದ್ದನು.
೬) ...........ಹೇಳಿದರೆ ....... ಒಮ್ಮೆಲೇ ನಂಬಬಾರದು.

## ಪ್ರಬಂಧ ಪಾಠ ೨:
## ವ್ಯಾವಹಾರಿಕ ಪತ್ರಬರೆಹ

(ಅ) ನೀವು ಮರುಭೂಮಿಯ ಅರಬರು ಎಂಬ ಪಾಠವನ್ನು ಓದಿರುವಿರಿ. ಆ ಪಾಠವು ಪತ್ರದ ರೂಪದಲ್ಲಿದೆ ಎಂಬದೂ ನಿಮಗೆ ಈಗಾಗಲೇ ಗೊತ್ತಾಗಿದೆ. ಅಲ್ಲಿ 'ಕಾಕಾ' 'ಮಗು ವಿಜಯಾ' ಳಿಗೆ ಪತ್ರ ಬರೆದಿದ್ದಾನೆ. ಹೀಗೆ ತಮ್ಮ ಆಪ್ತರಿಗೆ, ಬಾಂಧವರಿಗೆ, ಗೆಳೆಯರಿಗೆ ಬರೆಯುವ ಪತ್ರಗಳನ್ನು **'ವೈಯಕ್ತಿಕ'** ಅಥವಾ **ಖಾಸಗೀ** ಪತ್ರಗಳೆಂದು ಕರೆಯುವರು.

ಆದರೆ ಎಲ್ಲ ಪತ್ರಗಳನ್ನೂ ನೀವು ನಿಮ್ಮ ಗೆಳೆಯರಿಗೆ ಅಥವಾ ಬಂಧುಬಾಂಧವರಿಗಷ್ಟೇ ಬರೆಯುವದಿಲ್ಲ. ಎಷ್ಟೋ ಪತ್ರಗಳನ್ನು ನೀವು ವ್ಯಾಪಾರ, ವ್ಯವಹಾರಗಳ ಸಲುವಾಗಿ ಒಂದು ಕಂಪನಿಯವರಿಗೆ ಅಥವಾ ಒಂದು ಅಂಗಡಿಗೆ ಅಥವಾ ಇನ್ನಾರಿಗೋ ಬರೆಯುವ ಪ್ರಸಂಗವು ಜೀವನದಲ್ಲಿ ನಿಮಗೆ ಬರುತ್ತದೆ. ಹೀಗೆ ವ್ಯವಹಾರಕ್ಕಾಗಿ ಬರೆಯುವ ಪತ್ರಗಳಿಗೆ **ವ್ಯಾವಹಾರಿಕ ಪತ್ರ**ಗಳೆನ್ನುವರು.

ವೈಯಕ್ತಿಕ ಪತ್ರಗಳಿಗಿಂತಲೂ ವ್ಯಾವಹಾರಿಕ ಪತ್ರಗಳು ಭಿನ್ನವಾಗಿರುವದರಿಂದ ವೈಯಕ್ತಿಕ ಪತ್ರ ಬರೆಯುವ ಪದ್ಧತಿಗೂ ವ್ಯಾವಹಾರಿಕ ಪತ್ರಬರೆಯುವ ಪದ್ಧತಿಗೂ ವ್ಯತ್ಯಾಸವಿದೆ.

ವ್ಯಾವಹಾರಿಕ ಪತ್ರಗಳನ್ನು ಬರೆಯುವಾಗ ಕೆಳಗಿನ ಸಂಗತಿಗಳನ್ನು ನೆನಪಿನಲ್ಲಿಡಬೇಕು.

೧. ಶ್ರೀಕಾರ, ಕ್ಷೇಮ ಮೊದಲಾದ ಸಂಗತಿಗಳನ್ನು ವ್ಯಾವಹಾರಿಕ ಪತ್ರದಲ್ಲಿ ಬರೆಯುವ ಅವಶ್ಯವಿಲ್ಲ.

೨. ನೀವು ಯಾವ ಊರಿನಿಂದ ಪತ್ರ ಬರೆಯುತ್ತಿರುವಿರೋ ಆ ಊರು, ನೀವು ಇರುವ ಸ್ಥಳ, ಪತ್ರ ಬರೆಯುತ್ತಿರುವ ದಿನಾಂಕ ಇವುಗಳನ್ನು ಪತ್ರದ ಪ್ರಾರಂಭದಲ್ಲಿ ಬಲಗಡೆಗೆ ಬರೆಯಬೇಕು.

೩. ಅದರ ಕೆಳಗೆ ಪತ್ರದ ಎಡಗಡೆಯ ಭಾಗಕ್ಕೆ ನೀವು ಯಾವ ಅಂಗಡಿ ಅಥವಾ ಕಂಪನಿಗೆ ಪತ್ರ ಬರೆಯಬೇಕಾಗಿದೆಯೋ ಆ ಅಂಗಡಿ ಅಥವಾ ಕಂಪನಿಯ ವಿಳಾಸವನ್ನು ಬರೆಯಬೇಕು.

೪. ಒಕ್ಕಣಿಕೆಯನ್ನು ಪ್ರಾರಂಭಿಸುವಾಗ ಆಯಾ ಅಂಗಡಿ ಅಥವಾ ಕಂಪನಿಯ ವ್ಯವಸ್ಥಾಪಕರನ್ನು 'ಮಾನ್ಯರೇ' 'ಮಹನೀಯರೇ' ಎಂದು ಸಂಬೋಧಿಸಿ ಅವರಿಗೆ 'ವಂದನೆಗಳು' ಇಲ್ಲವೆ 'ನಮಸ್ಕಾರಗಳು' ಎಂದು ಬರೆಯಬೇಕು.

೫. ಇದಾದನಂತರ ನೀವು ತಿಳಿಸಬೇಕಾದ ವಿಷಯವನ್ನು ಸ್ಪಷ್ಟವಾಗಿ ಶಕ್ಯವಿದ್ದಷ್ಟು ಸಂಕ್ಷಿಪ್ತವಾಗಿ ಬರೆಯಬೇಕು.

೬. ಆಮೇಲೆ ಪತ್ರದ ಬಲಗಡೆಯಲ್ಲಿ 'ತಮ್ಮ ವಿಶ್ವಾಸದ' ಎಂದು ಬರೆದು ಅದರ ಕೆಳಗೆ ನಿಮ್ಮ ಅಂಕಿತ ( ಸಹಿ ) ಹಾಕಬೇಕು.

೭. ಕೊನೆಗೆ ನಿಮ್ಮ ವಿಳಾಸವನ್ನು ಬರೆಯಬೇಕು.

೮. ಪತ್ರವನ್ನು ಲಕೋಟೆಯಲ್ಲಿ ಹಾಕಿದನಂತರ ಆ ಲಕೋಟೆಯ ಮೇಲೆ ಮತ್ತೆ ಆ ಕಂಪನಿ ಅಥವಾ ಅಂಗಡಿಯ ವಿಳಾಸವನ್ನು ಬರೆಯಲು ಮರೆಯಬಾರದು.

(ಬ) ಮಾದರಿಗಾಗಿ ಇಂಥ ಒಂದು ಪತ್ರವನ್ನು ಇಲ್ಲಿ ಬರೆದು ತೋರಿಸಲಾಗಿದೆ.

ಹನುಮನಬೀದಿ
ಬೆಳಗಾವಿ
೫–೫–೧೯೫೪

ವ್ಯವಸ್ಥಾಪಕರು,
**ಸಿದ್ಧೇಶ್ವರ ಮತ್ತು ಕಂಪನಿ**
ಸಿದ್ಧೇಶ್ವರ ಮಹಲು
ಸ್ಟೇಶನ್‌ರೋಡ, ಹುಬ್ಬಳ್ಳಿ

**ಮಹನೀಯರೇ,**

ವಂದನೆಗಳು. ಕೆಳಗೆ ಹೇಳಿದ ಪ್ರಕಾರ ನಮಗೆ ವಸ್ತುಗಳನ್ನು ಕಳಿಸಬೇಕಾಗಿ ವಿನಂತಿ.

| | | | | | |
|---|---|---|---|---|---|
| ೧. | ದೊಡ್ಡ ತಿಜೋರಿ | ೧ | ೨. | ಸಣ್ಣ ಕಬ್ಬಿಣ ಕಪಾಟುಗಳು | ೨ |
| ೩. | ಕಬ್ಬಿಣ ಬುಕ್ ಶೆಲ್ಫುಗಳು | ೫ | ೪. | ಹಣದ ಪೆಟ್ಟಿಗೆಗಳು | ೫ |
| ೫. | ಕುರ್ಚಿಗಳು | ೬ | ೬. | ಸಾದಾ ಮಂಚಗಳು | ೨ |
| ೭. | ತೊಟ್ಟಿಲುಗಳು | ೫ | | | |

ಈ ಎಲ್ಲ ವಸ್ತುಗಳನ್ನು ಭದ್ರವಾಗಿ ಕಟ್ಟಿ ಉಗಿಬಂಡಿಯ ಮುಖಾಂತರ ಸುರಕ್ಷಿತವಾಗಿ ಬಂದು ಮುಟ್ಟುವಂತೆ ಕಳಿಸಬೇಕಾಗಿ ಬಿನ್ನಹ. ಹಣದ ಸಲುವಾಗಿ ರೇಲ್ವೆ ರಶೀದಿಯನ್ನು ಕ್ಯಾನರಾ ಬ್ಯಾಂಕಿಗೆ ಕಳಿಸಬೇಕು. ಕೂಡಲೇ ನಾವು ರಶೀದಿಯನ್ನು ಬ್ಯಾಂಕಿನಿಂದ ಬಿಡಿಸಿಕೊಳ್ಳುತ್ತೇವೆ.

ವಿಳಾಸ:

ಶ್ರೀ. ಎಸ್. ಆರ್. ಪಾಟೀಲ
ಭಾರತ ಜನರಲ್ ಸ್ಟೋರ್ಸ್
ಹನುಮನ ಬೀದಿ
ಬೆಳಗಾವಿ

ತಮ್ಮ ವಿಶ್ವಾಸದ,
**ಎಸ್. ಆರ್. ಪಾಟೀಲ**

(ಬ) ಕೆಳಗೆ ಹೇಳಿದ ವಿಷಯಗಳಲ್ಲಿ ಒಂದನ್ನು ಆರಿಸಿಕೊಂಡು ಒಂದು ವ್ಯಾವಹಾರಿಕ ಪತ್ರವನ್ನು ಬರೆಯಿರಿ.

೧) ನಿಮ್ಮ ಶಾಲೆಯ ವಿದ್ಯಾರ್ಥಿಗಳ ಸಹಕಾರಿ ಸಂಘಕ್ಕೆ ಈ ವರುಷದ ನಿಮ್ಮ ಶಾಲೆಯ ಪಠ್ಯ ಪುಸ್ತಕಗಳನ್ನು ತರಿಸಬೇಕಾಗಿದೆ. ಆದ್ದರಿಂದ ನೀವು ಈ ಸಂಘದ ಕಾರ್ಯದರ್ಶಿ ಎಂದು ತಿಳಿದು ರಾಮಾಶ್ರಯ ಬುಕ್ ಡಿಪೋ, ಧಾರವಾಡ ಇವರಿಗೆ ಒಂದು ಪತ್ರ ಬರೆಯಿರಿ.

೨) ನಿಮ್ಮ ಶಾಲೆಯ ಆಟಕ್ಕಾಗಿ ಕೆಲವು ಕಾಲ್ಚೆಂಡು, ಹಾಕಿ ಸ್ಟಿಕ್, ಮುಂತಾದ ಉಪಕರಣಗಳು ಬೇಕಾಗಿವೆ. ನೀವು ಶಾಲೆಯ ಆಟಗಳ ಕಾರ್ಯದರ್ಶಿ ಎಂದು ತಿಳಿದು ವ್ಹರಾಯಿಟಿ ಸ್ಟೋರ್ಸ, ಸಿಯಾಲಕೋಟ ಇವರಿಗೆ ಒಂದು ವ್ಯಾವಹಾರಿಕ ಪತ್ರ ಬರೆಯಿರಿ.

೩) ನಿಮ್ಮ ಶಾಲೆಯ ಕೈತೋಟದಲ್ಲಿ, ಹಚ್ಚಲಿಕ್ಕೆ ಕೆಲವು ವಿಚಿತ್ರ ಹೂವಿನ ಸಸಿಗಳು ಹಾಗೂ ಬೀಜಗಳು ಬೇಕಾಗಿವೆ. ಅದಕ್ಕಾಗಿ ಪಿ. ಪಿ. ಪೋಚಾ ಎಂಡ ಸನ್ಸ ಪೂನಾ ಇವರಿಗೆ ಒಂದು ಪತ್ರ ಬರೆಯಿರಿ.

## ೨೦. ಆಗ್ರಾದಿಂದ



ಪ್ರಿಯ ಅರುಣ,

ನಾನು ಪ್ರವಾಸಕ್ಕೆ ಹೊರಟಾಗ ನಿನಗೆ ವಚನ ಕೊಟ್ಟಂತೆ ಈಗ ಪತ್ರ ಬರೆಯುತ್ತಿದ್ದೇನೆ. ಆಗ್ರಾ ನೋಡುವ ಮನಸ್ಸು ನಿನಗೆಷ್ಟಿತ್ತು ಎಂಬುದನ್ನು ನಾನು ಬಲ್ಲೆ. ನನ್ನ ಜೊತೆಗೆ ನಿನ್ನನ್ನು ಕರೆದುಕೊಂಡು ಬರಬಹುದಿತ್ತು. ಆದರೆ ನಿನ್ನ ಶಾಲೆ ತಪ್ಪುವದೆಂದು ನಿನ್ನನ್ನು ಸದ್ಯ ಕರೆದುಕೊಂಡು ಹೋಗ ಲಿಕ್ಕಾಗಲಿಲ್ಲ. ಇದು ನಿನಗೆ ಗೊತ್ತಿದ್ದ ಮಾತು. ಈ ಸಲದ ದೀಪಾವಳಿ ಸೂಟಿಯಲ್ಲಿ ನಿನಗೆ ಆಗ್ರಾ ಮತ್ತು ಫತ್ತೇಪೂರ ಸಿಕ್ರಿ ತೋರಿಸಿಯೇ ತೀರು ವೆನು. ಆಗ ಹವೆಯೂ ಚೆನ್ನಾಗಿರುವದು. ಬೇಸಿಗೆಯಕ್ಕಿಂತ ಚಳಿಗಾಲದಲ್ಲಿ ಉತ್ತರ ಹಿಂದುಸ್ತಾನದಲ್ಲಿಯ ಊರುಗಳನ್ನು ನೋಡುವದು ಹೆಚ್ಚು ಸುಖಕರ. ಕಾರಣ ಬೇಸಿಗೆಯಲ್ಲಿ ಇತ್ತ ಕಡೆಗೆ ಬಿಸಿಲು ಬಹಳೇ ಪ್ರಖರವಿರುವದರಿಂದ ಹಗಲು ಹೆಚ್ಚಾಗಿ ಹೊರಗೆ ಹೋಗಲು ಶಕ್ಯವಾಗುವದಿಲ್ಲ. ಬಿಸಿಯಾದ ಗಾಳಿ ಹಗಲು ಮತ್ತು ರಾತ್ರಿಯಲ್ಲೂ ಬೀಸುವದು. ಈ ಬಿಸಿಯಾದ ಗಾಳಿಗೆ ಇಲ್ಲಿಯ ಜನರು ' ಲೂ ' ಎನ್ನುತ್ತಾರೆ. ಈ ' ಲೂ 'ದಿಂದ ಎಷ್ಟೋ ಜನರು ಬೇಸಿಗೆಯಲ್ಲಿ ಬೇನೆ ಬೀಳುತ್ತಾರೆ.

ಅದಿರಲಿ, ಅರುಣ, ನಾನು ನಿನಗೆ ಆಗ್ರಾದ ವಿಷಯ ಬರೆಯುತ್ತೇನೆಂದು ಹೇಳಿದ್ದೆನಲ್ಲವೆ? ಆಗ್ರಾದಲ್ಲಿ ಮುಖ್ಯವಾದ ತಾಜಮಹಲಿನ ವಿಷಯ ಬಿಟ್ಟು ' ಲೂ ' ' ಲೂ ' ಎಂದು ಏನು ಬರೆದಿದ್ದಾಳೆ ಎಂದು ನೀನು ನಗಬಹುದಲ್ಲವೇ? ಆದರೆ ಈ ' ಲೂ ' ಆಗ್ರಾದಲ್ಲಿ ಬಹಳ!

ಅರುಣ, ಆಗ್ರಾದಲ್ಲಿ ತಾಜಮಹಲಿನ ಹೊರತಾಗಿ ಇನ್ನೂ ಕೆಲವು ಕಟ್ಟಡ ಗಳು ನೋಡುವಂಥವಿವೆ. ಆದರೆ ತಾಜಮಹಲಿನ ಸೌಂದರ್ಯದ ಮುಂದೆ ಅವೆಲ್ಲ ಸಪ್ಪೆಯಾಗಿ ಕಾಣುವದರಿಂದ ಅವುಗಳ ವರ್ಣನೆಯನ್ನು ಹೆಚ್ಚಾಗಿ ಯಾರೂ ಮಾಡುವದಿಲ್ಲ. ಹೀಗೆಂದು ಅವುಗಳ ಹಿರಿಮೆ, ಸೌಂದರ್ಯ ಕಡಿಮೆ ಎಂದು ಹೇಳ

ಲಿಕ್ಕಾಗುವದಿಲ್ಲ. ಪ್ರತಿ ವಸ್ತುವಿಗೂ ಅದರದರ ಸೌಂದರ್ಯ ಬೇರೆಯೇ ತರದ್ದಾಗಿ ರುವದು. ಕಾರಣ ನಾನು ಆಗ್ರಾದಲ್ಲಿ ನೋಡಿದ ಎಲ್ಲ ವಿಷಯವನ್ನೂ ನಿನಗೆ ಬರೆಯುವೆ. ನಾನು ಆಗ್ರಾ ನಿಲ್ದಾಣದಿಂದಲೇ ಪ್ರಾರಂಭಿಸುವೆ.

ಆಗ್ರಾಕ್ಕೆ ಐದು ನಿಲ್ದಾಣಗಳಿರುವವು. " ಈದಗಾಹ ಆಗ್ರಾ ", " ಆಗ್ರಾ ಪೋರ್ಟ ", " ಆಗ್ರಾ ಕೆಂಟೋನಮೆಂಟ ", " ಆಗ್ರಾ ಸಿಟಿ " ಮತ್ತು " ರಾಜಕಿ ಮಂಡಿ ". ಆಗ್ರಾ ಊರೇನೂ ಅಷ್ಟು ಸುಂದರವಾಗಿಲ್ಲ. ಆದರೆ ಕೆಂಟೋನ್ ಮೆಂಟ ಭಾಗ ಮಾತ್ರ ಬಹಳೇ ಸುಂದರವಾಗಿದೆ. ಎಲ್ಲ ದೊಡ್ಡ ದೊಡ್ಡ ಶಹರ ಗಳ ಡಾಂಬರ ರಸ್ತೆಗಳಂತೆ ಅಗಲವಾದ ಸ್ವಚ್ಛ ಸುಂದರ ಬೀದಿ ತಾಜಮಹಲಿನ ವರೆಗೂ ಇದೆ. ತಾಜಮಹಲು ಯಮುನಾ ನದಿಯ ದಂಡೆಯ ಮೇಲಿರುವದು. ಅಲ್ಲಿ ಹೋದೊಡನೆ ಎದುರಿಗೊಂದು ದೊಡ್ಡ ಕೆಂಪು ಶಿಲೆಯ ಮಹಾದ್ವಾರವಿರು ವದು. ಅದನ್ನು ದಾಟಿ ಒಳಗೆ ಹೋದೊಡನೆ ಎದುರಿಗೆ ಭವ್ಯವಾದ ' ತಾಜ ' ಕಟ್ಟಡ ನಿಂತಿರುವದು. ಇದನ್ನು ಕಟ್ಟಿದ್ದು ಹಾಲುಗಲ್ಲಿನಲ್ಲಿ. ಚೌಕಾಗಿದ್ದನ್ನು ಸ್ವಲ್ಪ ಮೂಲೆಯಲ್ಲಿ ಕೊರೆದು ಅಷ್ಟಪೈಲಾಕೃತಿ ಮಾಡಿದ ಗೋಡೆಗಳಿವೆ. ಈ ಗೋಡೆಗಳ ಒಳಭಾಗದಲ್ಲಿ ತರತರದ ಬಣ್ಣದ ಸಂಗಮರವರೀ ಕಲ್ಲಿನಿಂದಲೇ ಜೋಡಿಸಿ ತೆಗೆದ ಎಲೆ-ಬಳ್ಳಿಗಳ ಚಿತ್ರಗಳಿವೆ. ಇವನ್ನು ಕೈಯಿಂದ ಚಿತ್ರ ತೆಗೆದು ಬಣ್ಣ ಕೊಟ್ಟಂತೆ ಈ ಕಲ್ಲಿನ ಬಣ್ಣಗಳನ್ನು ಜೋಡಿಸಿದ ಕಲಾವಿದನ ಕೃತಿಯನ್ನು ಎಷ್ಟು ವರ್ಣಿಸಿದರೂ ಕಡಿಮೆಯೆ. ಕಟ್ಟಡದ ಮೇಲ್ಭಾಗದಲ್ಲಿ ದೊಡ್ಡ ಗುಮ್ಮಟ ವಿದೆ. ಸುತ್ತಲೂ ನಾಲ್ಕು ಸ್ತಂಭಗಳಿವೆ. ಹಗಲಿನಲ್ಲಿ ಮೋರೆ ಎತ್ತಿ ನೋಡಿದರೆ ಕಣ್ಣು ಕುಕ್ಕುವಷ್ಟು ಹೊಳೆಯುತ್ತದೆ. ಬೆಳದಿಂಗಳ ರಾತ್ರಿಯಲ್ಲಿ ಮಾತ್ರ ಅದರ ಸೌಂದರ್ಯವನ್ನು ನೋಡಬೇಕು. ಕಟ್ಟಡದ ಮೇಲ್ಭಾಗದಲ್ಲಿ ಚಂದ್ರಕಿರಣಗಳು ಪ್ರತಿ ಒಂದು ಕಲ್ಲಿನಲ್ಲಿಯೂ ರಂಗುರಂಗಾಗಿ ಹೊಳೆಯುವವು. ಅದರ ಸುತ್ತಲೂ ಸುಂದರ ಉದ್ಯಾನವಿದೆ. ಒಳಗಡೆಯ ಮಧ್ಯಭಾಗದಲ್ಲಿ ಮಮತಾಜ ಮತ್ತು ಶಾಹಜಹಾನರ ಗೋರಿಗಳಿವೆ. ಅದರ ಮೇಲೆ ಒಂದು ದೀಪವಿದೆ. ಅದನ್ನು ಲಾರ್ಡ ಕರ್ಝನ್ ಅವರು ಕೊಟ್ಟಿರುವರಂತೆ. ದಿನಾಲು ರಾತ್ರಿ ಅದನ್ನು ಹಚ್ಚಿರು ತ್ತಾರೆ. ಆ ಮಂದವಾದ ದೀಪದ ಪ್ರಕಾಶದಲ್ಲಿ ಶಾಹಜಹಾನ-ಮಮತಾಜರು ಸುಖವಾಗಿ ಮಲಗಿದಂತೆ ಆ ಗೋರಿಗಳ ಮೇಲೆ ಹೊಚ್ಚಿದ ಅರಿವೆಯನ್ನು ನೋಡಿ ದಾಗ ಭಾಸವಾಗುವದು. ಯಮುನಾ ನದಿಯಲ್ಲಿ ತಾಜಮಹಲಿನ ಪ್ರತಿಬಿಂಬ ವನ್ನು ಎಷ್ಟು ನೋಡಿದರೂ ಸಾಲದು ಎನ್ನಿಸುವದು. ಇದನ್ನು ಶಾಹಜಹಾನನು ಮಮತಾಜಳ ಮೇಲಿನ ಪ್ರೇಮಕ್ಕಾಗಿ ಕಟ್ಟಿಸಿದ್ದು, ಅದನ್ನು ಕಟ್ಟಿಸಲಿಕ್ಕೆ ಇಪ್ಪತ್ತು

ವರ್ಷಗಳು ಹತ್ತಿದ್ದೂ ಇಪ್ಪತ್ತೆರಡು ಕೋಟಿ ರೂಪಾಯಿ ವೆಚ್ಚವಾದದ್ದೂ ನೀನು ನಿನ್ನ ಇತಿಹಾಸದಲ್ಲಿ ಓದಿರುವೆಯಲ್ಲವೆ? ಇರಲಿ, ಇನ್ನು ನಾವು ಆಗ್ರಾ ಕೋಟೆ ಯನ್ನು ನೋಡೋಣ.

ಇಲ್ಲಿ ಎಷ್ಟೋ ಸಭಾ ಮಂಟಪಗಳೂ ಅರಮನೆಗಳೂ ಇವೆ. ಅದರಲ್ಲಿ ಶೀಶಮಹಲ್ ಎಂಬ ಒಂದು ಸ್ನಾನ ಗೃಹವಿದೆ. ಸಣ್ಣ ಸಣ್ಣ ಕನ್ನಡಿ ಕಾಜು ಗಳನ್ನು ಚಿತ್ರ ವಿಚಿತ್ರ ರೀತಿಯಲ್ಲಿ ಗೋಡೆಯಲ್ಲಿ ಕೂಡ್ರಿಸಿರುವದರಿಂದ ದೀವದ ಬೆಳಕು ಮಾಡಿ ನೋಡಿದರೆ ಸುಂದರವಾಗಿ ಕಾಣಿಸುವದು. ಅಲ್ಲಲ್ಲಿಗೆ ಹೊಂಡ ಗಳು, ಸುಂದರ ಕಾರಂಜಿಗಳು, ಉತ್ತಮ ಸ್ನಾನಗೃಹ ಇವನ್ನೆಲ್ಲ ನೋಡಿದರೆ ಆಗಿನ ಕಾಲದಲ್ಲಿ ಇಷ್ಟು ಉತ್ತಮವಾಗಿ ಮಾಡಿದ ನೀರಿನ ವ್ಯವಸ್ಥೆಯ ವಿಷಯವಾಗಿ ಆಶ್ಚರ್ಯವಾಗುವದು. ಇಷ್ಟೆಲ್ಲ ಸುಖವಿಲಾಸವನ್ನು ಅನುಭವಿಸಿದ ಶಾಹಜಹಾನ ನನ್ನು ಔರಂಗಜೇಬನು ಬಂಧಿಸಿ ಇಟ್ಟ ಕೋಣೆಯು ಮಾತ್ರ ಔರಂಗಜೇಬನ ಮನಸ್ಸಿನ ಪ್ರತೀಕವಂತಿದೆ. ಆ ಕೋಣೆಯಿಂದ ಸ್ವಲ್ಪ ಹೊರಕ್ಕೆ ಬರುವದಕ್ಕಷ್ಟೇ ಅವನಿಗೆ ಸ್ವಾತಂತ್ರ್ಯವಿತ್ತಂತೆ. ಅಲ್ಲಿಯೇ ಕುಳಿತು ದಿನಾಲು ಶಾಹಜಹಾನನು ತಾಜಮಹಲನ್ನು ನೋಡಿ ತೃಪ್ತಿಪಡಬೇಕು. ಮುಪ್ಪಿನ ವಯಸ್ಸಿನಲ್ಲಿ ದೂರದಿಂದ ನೋಡುವ ದೃಷ್ಟಿ ಕಡಿಮೆಯಾಗಿತ್ತೆಂತಲೋ ಏನೋ, ಅಲ್ಲಿ ಗೋಡೆಯಲ್ಲಿ ಒಂದು ಸಣ್ಣ ಕನ್ನಡಿಯ ದುಂಡಾದ ತುಂಡನ್ನು ಕೂಡ್ರಿಸಿದ್ದಾರೆ. ಆ ಕನ್ನಡಿಯಲ್ಲಿಂದ ಶಾಹಜಹಾನನು ತಾಜಮಹಲನ್ನು ನೋಡುತ್ತ ವೇಳೆ ಕಳೆಯುತ್ತಿದ್ದನಂತೆ. ಆ ಚಿಕ್ಕ ಪೈ ಅಗಲ ಕನ್ನಡಿ ತುಂಡನ್ನು ತಾಜಮಹಲಿನ ಪ್ರತಿಬಿಂಬ ಕಾಣಿಸುವಂಥಲ್ಲಿ ಹಚ್ಚಲಾಗಿದೆ.

ಇನ್ನೊಂದು ನೋಡುವಂಥ ಕಟ್ಟಡವೆಂದರೆ 'ಇತ್ ಮತ್ ಉದ್ದೌಲ'ನ ಗೋರಿ. ಅಲ್ಲಿ ಕಲಾಕುಸುರಿನ ಕೆಲಸ ವಿಶೇಷವಿದೆ. ನೂರಜಹಾನಳು ಅರಿವೆಯ ಮೇಲೆ ತೆಗೆದ ಕಸೂತಿಗಳನ್ನೂ ಇಲ್ಲಿ ಗೋಡೆಯಲ್ಲಿ ಹಾಲುಗಲ್ಲಿನಲ್ಲಿ ಕಟೆದಿದ್ದಾರೆ.

ಇಲ್ಲಿಂದ ಐದಾರು ಮೈಲು ದೂರದಲ್ಲಿ 'ಸಿಕಂದರ' ಎಂಬಲ್ಲಿ ಅಕಬರ ಬಾದಶಾಹನ ಗೋರಿ ಇದೆ. ಅಲ್ಲಿ ಕುಸುರಿನ ಕೆಲಸವೇನೂ ಇಲ್ಲ. ಬಹು ದೊಡ್ಡದಾದ ಆಕಾರದಲ್ಲಿ ಭವ್ಯವಾದ ಕಟ್ಟಡವಿದೆ. ಅದನ್ನು ಅಕಬರನು ತಾನು ಜೀವದಿಂದಿದ್ದಾಗ ಕಟ್ಟಿಸಿದ್ದು ಅರ್ಧವೇ ಆಗಿತ್ತಂತೆ. ಮುಂದೆ ಅದನ್ನು ಜಹಾಂಗೀ ರನು ಪೂರ್ಣಗೊಳಿಸಿದನಂತೆ.

ಇಲ್ಲಿ ದಯಾಲಬಾಗ ಎಂಬ ಎಂದು ಚಿಕ್ಕ ಭಾಗವಿದೆ. ಅಲ್ಲಿ ರಾಧಾ ಸ್ವಾಮಿ ಎಂಬ ಒಬ್ಬ ಯತಿಯ ಸಮಾಧಿ ಇರುವದು. ಅದರ ಮೇಲೊಂದು

ಕಟ್ಟಡವನ್ನು ಕಟ್ಟಲಿಕ್ಕೆ ಪ್ರಾರಂಭ ಮಾಡಿ ಸುಮಾರು ನಾಲ್ವತ್ತೆಂಟು ವರ್ಷಗಳಾದವಂತೆ. ಇನ್ನೂ ಎರಡು ಅಂತಸ್ತು ಪೂರ್ಣವಾಗಿಲ್ಲ. ಈ ಕಟ್ಟಡ ಮುಗಿದ ನಂತರ ತಾಜಮಹಲನ್ನು ಮೀರಿಸುವಷ್ಟು ಸುಂದರವಾಗುವದೆಂದು ಎಷ್ಟೋ ಜನರು ಹೇಳುತ್ತಾರೆ. ಆದರೆ ನನ್ನ ಮತದ ಪ್ರಕಾರ ಎಂಥ ಕಟ್ಟಡವು ಎಷ್ಟು ಸುಂದರವಿದ್ದರೂ ಅದರ ಸೌಂದರ್ಯ ಅದಕ್ಕೇ ಮೀಸಲು.

ಇವಿಷ್ಟೇ ಆಗ್ರಾದಲ್ಲಿಯ ಮುಖ್ಯ ಕಟ್ಟಡಗಳು. ಇವನ್ನು ನೋಡಿದನಂತರ ಇಲ್ಲಿಂದ ಸಮೀಪವಿದ್ದ ಫತ್ತೇಪೂರಸಿಕ್ರಿಗೆ ಹೋದೆವು. ಫತ್ತೇಪೂರಸಿಕ್ರಿ ಈದ ಗಾಹ ಆಗ್ರಾದಿಂದ ಇಪ್ಪತ್ತೆರಡು ಮೈಲು ದೂರವಿರುವದು. ಬಸ್ಸಿನಿಂದಲೂ ಹೋಗಬಹುದು: ರೈಲಿನಿಂದಲೂ ಹೋಗಬಹುದು. ಅಕಬರನ ಗುರುವಾದ ಸಲಿಮನು ಅಲ್ಲಿರುತ್ತಿದ್ದುದರಿಂದ ಅಕಬರನೂ ತನ್ನ ಅರಮನೆ ಅಲ್ಲಿ ಕಟ್ಟಿಸಿ ಹದಿನಾರು ವರ್ಷ ಅಲ್ಲಿ ಇದ್ದನಂತೆ. ಗುರುವಿಗಾಗಿ ಕಟ್ಟಿಸಿದ ದರ್ಗಾ ಎತ್ತರದ ಮೇಲೆ ಭವ್ಯವಾಗಿ ಕಟ್ಟಿದ್ದಿರುವದು. ಅದರ ಮಹಾದ್ವಾರ ಅಕಬರನ ಹಿರಿಮೆಯು ಪ್ರತೀಕದಂತಿರುವದು. ಅಲ್ಲಿಂದ ಸ್ವಲ್ಪ ದೂರದಲ್ಲಿಯೇ ಅಕಬರನ ಅರಮನೆಯ ಭಾಗವಿರುವದು. ರಂಗಮಹಲ, ಪಂಚಮಹಲ, ಹವಾಮಹಲ, ಆಸ್ಪತ್ರೆ, ಶಾಲೆ, ಲಾಯಬ್ರರಿ, ಆಟದ ಸ್ಥಳ, ನ್ಯಾಯಾಸ್ಥಾನ, ಅಶ್ವಶಾಲೆ, ಟಂಕಶಾಲೆ ಎಂಬೆಲ್ಲ ಹೆಸರಿನ ಸ್ಥಳಗಳು ಮಾತ್ರ ಈಗ ಉಳಿದಿವೆ. ಇವುಗಳಲ್ಲಿ ಹೆಚ್ಚಾಗಿ ಎಲ್ಲ ಅರ್ಧಮರ್ಧ ಬಿದ್ದ ಕಟ್ಟಡಗಳು. ಪಂಚಮಹಲು ಮಾತ್ರ ಇನ್ನೂ ಭದ್ರವಾಗಿದೆ. ಒಂದರಮೇಲೊಂದರಂತೆ ಕೆಳಗೆ ದೊಡ್ಡದು ಮೇಲೆ ಅದಕ್ಕೂ ಚಿಕ್ಕದು, ಅದಕ್ಕೂ ಚಿಕ್ಕದು ಹೀಗೆ ಐದು ಮಹಲುಗಳಿವೆ. ಎಲ್ಲಕ್ಕೂ ಮೇಲಿನ ಅಂತಸ್ತಿನ ಮೇಲೆ ಅಕಬರನು ಕುಳಿತು ಕೆಳಗಿನ ಅಂಗಳಲ್ಲಿ ದಾಸದಾಸಿಯರನ್ನು ಪಗಡಿ ಯಂತೆ ನಿಲ್ಲಿಸಿ ಆಟವಾಡುತ್ತಿದ್ದನಂತೆ. ಅವರು ಹಸಿರು, ಹಳದಿ ಬಣ್ಣಗಳ ಅರಿವೆ ಹಾಕಿಕೊಂಡು ಮನೆಯಿಂದ ಮನೆಗೆ ಪಟ್ಟದಲ್ಲಿ ಕುಣಿಯುತ್ತ ಸರಿದಾಡುತ್ತಿದ್ದ ರಂತೆ. ಈ ಅಂಗಳದಲ್ಲಿ ದೊಡ್ಡದಾದ ಪಗಡಿ ಆಡುವ ಪಟ್ಟವಿದೆ. ಎದುರಿಗೊಂದು ಚಿಕ್ಕ ಕೊಳವಿದೆ. ,ತಾನಸೇನನು ಕುಳಿತು ಹಾಡುವ ಸ್ಥಳವಿದೆ. ಬೀರಬಲ್ಲನ ಮನೆ ಇದೆ.

ಅಕಬರನಿಗೆ ಸಲಿಮನು " ನೀನು ಬಾದಶಹ. ಎರಡನೇ ದೇಶದವರು ನಿನ್ನೊಡನೆ ಯುದ್ಧಕ್ಕೆಂದು ಬಂದರೆ ದರ್ಗಾಕ್ಕೆ ಧಕ್ಕೆಯಾಗುವದು. ಕಾರಣ ನೀನಿಲ್ಲಿರುವದು ಬೇಡ " ಎಂದದ್ದಕ್ಕೆ ಅಕಬರನು ಅಲ್ಲಿ ವಾಸವಾಗಿ ನಿಲ್ಲಲಿಲ್ಲವಂತೆ.

ಆಗ್ರಾದಿಂದ ಹೊರಡುವಾಗ ಮತ್ತೊಮ್ಮೆ ತಾಜಮಹಲಿನೆಡೆಗೆ ಹೋದೆವು. ಎಲ್ಲ ಕಟ್ಟಡಗಳಂತೆ ಈ ಕಟ್ಟಡವನ್ನು ಒಂದೆರಡು ಸಲ ನೋಡಿದರೆ ತೃಪ್ತಿಯಾಗುವದಿಲ್ಲ. ಮತ್ತೆ ನೋಡುವ ಆಶೆಯಾಗುವದು. ಪ್ರೀತಿಗಾಗಿ ಕಟ್ಟಿಸಿದ ಈ ಕಟ್ಟಡ ಮೂರ್ತಿಮಂತ ಪ್ರೇಮದ ಆದರ್ಶದಂತೆ ಭಾಸವಾಗುವದು. ಶಾಹಜಹಾನನ ವಿಷಯಕ್ಕೆ ಗೌರವವನ್ನು ಹೆಚ್ಚಿಸುವದು. ಆಗ್ರಾ ಬಿಟ್ಟು ಹೊರಟಾಗ ಭವ್ಯವಾದ ಕಟ್ಟಡಗಳೂ ತಾಜಮಹಲೂ ದೂರ ದೂರ ಸರಿದರೂ ಮೊಗಲರಾಜರ ವೈಭವವೂ ಅವರ ಸೌಂದರ್ಯಪ್ರಿಯತೆಯೂ ನಮ್ಮ ಮನಸ್ಸಿನಿಂದ ದೂರಾಗುವದಿಲ್ಲ.

ನನ್ನ ಈ ಪತ್ರವನ್ನು ಓದಿ, ನಿನ್ನ ಮನಸ್ಸು ಈಗ ಆಗ್ರಾಕ್ಕೆ ಓಡಿಹೋಗಿರುದೇನು? ನೆನಪಿರಲಿ, ಅಲ್ಲಿ ನಿನ್ನ ಚಿಕ್ಕಮ್ಮನನ್ನು ಹುಡುಕು.

ನಿನ್ನ
**ಚಿಕ್ಕಮ್ಮ**

**ಶಬ್ದಾರ್ಥ:**

ಪ್ರಖರ – ಬಿಸಿ, ಚುರುಕು; ಪ್ರತೀಕ – ಗುರುತು.

**ಪ್ರಶ್ನೆ:**

೧. ಉತ್ತರ ಹಿಂದುಸ್ತಾನದ ಪ್ರವಾಸ ಮಾಡುವದು ಯಾವಾಗ ಸುಖಕರ ?
೨. ಆಗ್ರಾದ ನಿರ್ಮಾಣಗಳು ಯಾವವು ?
೩. ತಾಜ ಕಟ್ಟಡದ ಗೋಡೆಗಳ ಬಗ್ಗೆ ಬರೆಯಿರಿ.
೪. 'ತಾಜ'ವನ್ನು ಬೆಳುದಿಂಗಳಲ್ಲಿ ನೋಡಿದಾಗ ಹೇಗೆ ಕಾಣುವದು ?
೫. ದೀಪದ ಬೆಳಕಿನಲ್ಲಿ ಗೋರಿಗಳು ಹೇಗೆ ಕಾಣುವವು ?
೬. ಶಾಹಜಹಾನನನ್ನು ಸೆರೆಯಲ್ಲಿಟ್ಟ ಕೋಣೆಯ ಗೋಡೆಯಲ್ಲಿ ಸಣ್ಣ ದುಂಡಾದ ಕನ್ನಡಿ ಏಕೆ ಇದೆ ?
೭. ಪಂಚಮಹಲು ಏಕೆ ಪ್ರಸಿದ್ಧವಿದೆ ?
೮. ಆಗ್ರಾ ಬಿಟ್ಟು ಬರುವಾಗ ಏನು ಅನಿಸುವುದು ?

**ವ್ಯಾಕರಣ:**

**ಸಂಭವಾರ್ಥಕ ಕ್ರಿಯಾಪದ**

(ಅ) ನೀವು ಈಗಾಗಲೇ ಕ್ರಿಯಾಪದವೆಂದರೇನೆಂಬುದನ್ನು ಕಲಿತಿರುವಿರಿ. ಈಗ ಕ್ರಿಯಾಪದದ ಪ್ರಕಾರಗಳನ್ನು ಕಲಿಯೋಣ.

ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಕ್ರಿಯಾಪದಗಳನ್ನು ನೋಡಿರಿ.

೧) ಶಾಹಜಹಾನನು ತಾಜಮಹಲನ್ನು **ಕಟ್ಟಿಸಿದನು.**
೨) ತಾಜಮಹಲು ಬಹಳ ಸುಂದರವಾಗಿ **ಕಾಣುತ್ತದೆ.**
೩) ತಾಜಮಹಲಿನಿಂದ ಶಾಹಜಹಾನನ ಹೆಸರು ಮುಂದೆಯೂ **ಉಳಿಯುವದು.**

ಒಂದನೆಯ ವಾಕ್ಯದಲ್ಲಿ ಬರುವ **ಕಟ್ಟಿಸಿದನು** ಎಂಬ ಕ್ರಿಯಾಪದವು, ಕಟ್ಟುವ ಕ್ರಿಯೆ ಆದದ್ದನ್ನು ಹೇಳುತ್ತದೆ. ಎರಡನೆಯ ವಾಕ್ಯದಲ್ಲಿಯ **ಕಾಣುತ್ತದೆ** ಎಂಬ ಕ್ರಿಯಾಪದವು ಕಾಣುವ ಕ್ರಿಯೆ ಈಗ ಪ್ರತ್ಯಕ್ಷ ಆಗುತ್ತಿರುವದನ್ನು ಹೇಳುತ್ತದೆ. ಮೂರನೆಯ ವಾಕ್ಯದಲ್ಲಿಯ **ಉಳಿಯುವದು** ಎಂಬ ಕ್ರಿಯಾಪದವು ಉಳಿಯುವ ಕ್ರಿಯೆ ಇನ್ನು ಮೇಲೆ ಆಗುವದೆಂಬುವದನ್ನು ಹೇಳುತ್ತದೆ. ಇಲ್ಲಿ ಬಂದ ಮೂರೂ ವಾಕ್ಯಗಳಲ್ಲಿಯ ಕ್ರಿಯಾಪದಗಳು ಒಂದು ಕ್ರಿಯೆ ಆಗುವದನ್ನು ಅಂದರೆ ಸಂಭವಿಸುವದನ್ನು ಹೇಳುತ್ತವೆ. ಈ ಕ್ರಿಯಾಪದಗಳಲ್ಲಿ ಕ್ರಿಯೆಯು ಸಂಭವಿಸುವ ಬಗ್ಗೆ ಒಂದು ನಿಶ್ಚಯವೂ ಇದೆ.

ಹೀಗೆ ಒಂದು ಕ್ರಿಯೆ ಹಿಂದೆ ಸಂಭವಿಸದ ಈಗ ಸಂಭವಿಸುತ್ತಿರುವ ಇಲ್ಲವೆ ಮುಂದೆ ಸಂಭವಿಸುವ ವಿಷಯವಾಗಿ ನಿಶ್ಚಯವನ್ನು ವ್ಯಕ್ತ ಪಡಿಸುವ ಕ್ರಿಯಾಪದಗಳಿಗೆ **ಸಂಭವಾರ್ಥಕ** ಕ್ರಿಯಾಪದಗಳೆಂದು ಹೆಸರು.

ಸಂಭವಾರ್ಥಕ ಕ್ರಿಯಾಪದಗಳು ಕ್ರಿಯೆ ನಡೆಯುವ ಕಾಲವನ್ನು ಅಂದರೆ ಭೂತ, ವರ್ತಮಾನ, ಭವಿಷ್ಯತ್ಕಾಲಗಳನ್ನು ಹೇಳುವದರಿಂದ ಅವುಗಳನ್ನು **ಕಾಲಾರ್ಥಕ** ಕ್ರಿಯಾಪದಗಳೆಂದೂ ಕ್ರಿಯೆ ನಡೆಯುವ ಬಗ್ಗೆ ನಿಶ್ಚಯವನ್ನು ವ್ಯಕ್ತ ಪಡಿಸುವದರಿಂದ ಅವುಗಳನ್ನು **ನಿಶ್ಚಯಾರ್ಥಕ** ಕ್ರಿಯಾಪದಗಳೆಂದೂ ಕರೆಯುವರು. ಇನ್ನು ಸಂಭವಾರ್ಥದಲ್ಲಿ ಬರುವ ಮೂರು ಕಾಲಗಳಲ್ಲಿ ಕ್ರಿಯಾಪದಗಳು ಹೇಗೆ ಬೇರೆ ಬೇರೆ ರೂಪವನ್ನು ತಾಳುತ್ತವೆಂಬುವದನ್ನು ಕಲಿಯೋಣ.

ಕ್ರಿಯಾಪದದ ಮೂಲ ರೂಪಕ್ಕೆ ಧಾತು ಅನ್ನುವರು. ಧಾತುವಿಗೆ ಆಖ್ಯಾತ ಪ್ರತ್ಯಯಗಳು ಹತ್ತಿ ಬೇರೆ ಬೇರೆ ಕಾಲದ ಕ್ರಿಯಾಪದಗಳ ರೂಪಗಳು ಸಿದ್ಧವಾಗುತ್ತವೆ. ಮೂರೂ ಕಾಲಗಳ ಕ್ರಿಯಾಪದಗಳು ಸಿದ್ಧವಾಗುವ ಕ್ರಮವನ್ನು ಇಲ್ಲಿ ಕೆಳಗೆ ವಿವರಿಸಲಾಗಿದೆ.

## ವರ್ತಮಾನಕಾಲ

### ಆಖ್ಯಾತ ಪ್ರತ್ಯಯಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | **ಏನೆ** | **ಏವೆ** |
| ಮಧ್ಯಮ ಪುರುಷ (ಮೂರೂ ಲಿಂಗ) | **ಈ** | **ಈರಿ** |
| ಪ್ರಥಮ ಪುರುಷ | | |
| ಪುಲ್ಲಿಂಗ | **ಆನೆ** | **ಆರೆ** |
| ಸ್ತ್ರೀಲಿಂಗ | **ಆಳೆ** | **ಆರೆ** |
| ನಪುಂಸಕಲಿಂಗ | **ಅದೆ** | **ಅವೆ** |

**ನಗು** ಧಾತುವಿನ ವರ್ತಮಾನಕಾಲದ ರೂಪಗಳು.

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | ನಾನು **ನಗುತ್ತೇನೆ** | ನಾವು **ನಗುತ್ತೇವೆ** |
| ಮಧ್ಯಮ ಪುರುಷ (ಮೂರೂ ಲಿಂಗ) | ನೀನು **ನಗುತ್ತೀ** | ನೀವು **ನಗುತ್ತೀರಿ** |
| ಪ್ರಥಮ ಪುರುಷ | | |
| ಪುಲ್ಲಿಂಗ | ಅವನು **ನಗುತ್ತಾನೆ** | ಅವರು **ನಗುತ್ತಾರೆ** |
| ಸ್ತ್ರೀಲಿಂಗ | ಅವಳು **ನಗುತ್ತಾಳೆ** | ಅವರು **ನಗುತ್ತಾರೆ** |
| ನಪುಂಸಕಲಿಂಗ | ಅದು **ನಗುತ್ತದೆ** | ಅವು **ನಗುತ್ತವೆ** |

ನಗು + ಉತ್ತ + ಏನೆ = ನಗು ್ತೇನೆ. ಇದರಂತೆಯೇ ಉಳಿದ ರೂಪಗಳೂ ಸಿದ್ಧವಾಗಿವೆ.

ಇರು ಧಾತುವಿನ ರೂಪಗಳು ಮೇಲೆ ಹೇಳಿದ ನಿಯಮದಂತೆಯೇ ಇರುತ್ತೇನೆ, ಇರುತ್ತೇವೆ; ಹೀಗೆ ಆಗುವವಲ್ಲದೆ ಇದ್ದೇನೆ, ಇದ್ದೇವೆ; ಇದ್ದೀ, ಇದ್ದೀರಿ. ಇದ್ದಾನೆ, ಇದ್ದಾರೆ; ಇದ್ದಾಳೆ, ಇದ್ದಾರೆ; ಇದೆ, ಇವೆ. ಎಂದು ವಿಕಾರವನ್ನೂ ಒಮ್ಮೊಮ್ಮೆ ಹೊಂದುತ್ತವೆ.

**ಭೂತಕಾಲ**

ಆಖ್ಯಾತ ಪ್ರತ್ಯಯಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | ಎನು | ಎವು |
| ಮಧ್ಯಮ ಪುರುಷ (ಮೂರೂ ಲಿಂಗ) | ಎ | ಇರಿ |
| ಪ್ರಥಮ ಪುರುಷ | | |
| ಪುಲ್ಲಿಂಗ | ಅನು | ಅರು |
| ಸ್ತ್ರೀಲಿಂಗ | ಅಳು | ಅರು |
| ನಪುಂಸಕಲಿಂಗ | ಇತು | ಅವು |

**ನಡೆ** ಧಾತುವಿನ ಭೂತಕಾಲದ ರೂಪಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | ನಾನು ನಡೆದೆನು | ನಾವು ನಡೆದೆವು |
| ಮಧ್ಯಮ ಪುರುಷ (ಮೂರೂ ಲಿಂಗ) | ನೀನು ನಡೆದೆ | ನೀವು ನಡೆದಿರಿ |
| ಪ್ರಥಮ ಪುರುಷ | | |
| ಪುಲ್ಲಿಂಗ | ಅವನು ನಡೆದನು | ಅವರು ನಡೆದರು |
| ಸ್ತ್ರೀಲಿಂಗ | ಅವಳು ನಡೆದಳು | ಅವರು ನಡೆದರು |
| ನಪುಂಸಕಲಿಂಗ | ಅದು ನಡೆದಿತು | ಅವು ನಡೆದವು |

ನಡೆ + ದ + ಎನು = ನಡೆದೆನು ಈ ಪ್ರಕಾರ ಭೂತಕಾಲದ ರೂಪಗಳು ಸಿದ್ಧವಾಗಿವೆ.

ಭೂತಕಾಲವನ್ನು ಸೂಚಿಸುವ 'ದ' ಆಗಮವು ಸೇರಿದಾಗ ಕೆಲವು ಧಾತುಗಳ ರೂಪಗಳು ವಿಕಾರ ಹೊಂದುವವು.

ಬರು + ದ + ಇತು = ಬಂದಿತು; ನಗು + ದ + ಅನು = ನಕ್ಕನು; ಇದೇ ರೀತಿಯಾಗಿ ಇನ್ನೂ ಹಲವು ಧಾತುಗಳು ಭೂತಕಾಲದಲ್ಲಿ 'ದ' ಆಗಮ ಬಂದಾಗ ವಿಕಾರವನ್ನು ಹೊಂದುತ್ತವೆ. ಅವುಗಳನ್ನು ನಿಮ್ಮ ಗುರುಗಳನ್ನು ಕೇಳಿ ತಿಳಿದುಕೊಳ್ಳಿರಿ.

## ಭವಿಷ್ಯತ್ಕಾಲ

ಆಖ್ಯಾತ ಪ್ರತ್ಯಯಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | ಎನು | ಎವು |
| ಮಧ್ಯಮ ಪುರುಷ (ಮೂರೂ ಲಿಂಗ) | ಎ | ಇರಿ |
| ಪ್ರಥಮ ಪುರುಷ | | |
| ಪುಲ್ಲಿಂಗ | ಅನು | ಅರು |
| ಸ್ತ್ರೀಲಿಂಗ | ಅಳು | ಅರು |
| ನಪುಂಸಕಲಿಂಗ | ಅದು | ಅವು |

**ಹೋಗು** ಧಾತುವಿನ ಭವಿಷ್ಯತ್ಕಾಲದ ರೂಪಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | ನಾನು ಹೋಗುವೆನು | ನಾವು ಹೋಗುವೆವು |
| ಮಧ್ಯಮ ಪುರುಷ (ಮೂರೂ ಲಿಂಗ) | ನೀನು ಹೋಗುವೆ | ನೀವು ಹೋಗುವಿರಿ |
| ಪ್ರಥಮ ಪುರುಷ | | |
| ಪುಲ್ಲಿಂಗ | ಅವನು ಹೋಗುವನು | ಅವರು ಹೋಗುವರು |
| ಸ್ತ್ರೀಲಿಂಗ | ಅವಳು ಹೋಗುವಳು | ಅವರು ಹೋಗುವರು |
| ನಪುಂಸಕಲಿಂಗ | ಅದು ಹೋಗುವದು | ಅವು ಹೋಗುವವು |

ಹೋಗು + ಉವ + ಎನು = ಹೋಗುವೆನು. ಈ ಪ್ರಕಾರ ಭವಿಷ್ಯತ್ಕಾಲದ ಹೋಗು ಧಾತುವಿನ ರೂಪಗಳು ಸಿದ್ಧವಾಗಿವೆ.

(ಬ) ಕೆಳಗೆ ಕೊಟ್ಟ ಕ್ರಿಯಾಪದಗಳನ್ನು ಮೂರೂ ಕಾಲಗಳಲ್ಲಿ ಬರೆದು ತೋರಿಸಿರಿ. ಕೇಳು, ಹೊರು, ಕೊಳ್ಳು, ಉಣ್ಣು, ಬೀಳು, ಕೀಳು, ಮರೆ, ನಿಲ್ಲು, ಓಡು, ಕುಣಿ, ತರು, ಬಿಡು.

**ಟಿಪ್ಪಣಿ:**

(೧) **ಲಾರ್ಡ ಕರ್ಝನ್**— ಇವರು ಹಿಂದುಸ್ತಾನದ ವಾಯಿಸರಾಯ ಎಂದು ಇದ್ದರು.

(೨) **ತಾನಸೇನ**— ಅಕಬರ ಬಾದಶಹನ ಕಾಲದಲ್ಲಿ ಇವನು ಸುಪ್ರಸಿದ್ಧ ಸಂಗೀತಗಾರನು.

(೩) **ಬೀರಬಲ**— ಅಕಬರನ ಕಾಲದಲ್ಲಿಯ ವಿದೂಷಕ.

# ೨೧. ಬೋರ್ಡುಗಳು

[ ಪೇಟೆಯಲ್ಲಿ ಅಂಗಡಿಗಳಿಗೆ ಬೋರ್ಡುಗಳನ್ನು ತೂಗುಹಾಕಿರುತ್ತಾರೆ. ಅಂಥ ಬೋರ್ಡುಗಳನ್ನು ನೀವು ಎಷ್ಟು ಸಲ ಲಕ್ಷ್ಯಗೊಟ್ಟು ಓದಿರುವಿರಿ ? ಹಾಗೆ ಓದಿದರೆ ಎಷ್ಟೋ ಸಲ ವಿವಿಧ ವಿಚಾರಗಳು ನಿಮ್ಮ ಮನಸ್ಸಿನಲ್ಲಿ ಸುಳಿಯುತ್ತವೆ. ದೊಡ್ಡ ದೊಡ್ಡ ರೈಲು ನಿಲ್ದಾಣಗಳಲ್ಲಿ ದೊಡ್ಡ ದೊಡ್ಡ ಬೋರ್ಡುಗಳು ಕಂಡುಬರುತ್ತವೆ. ಆ ಬೋರ್ಡುಗಳ ಸನಿಹದಲ್ಲಿ ಓಡಾಡುತ್ತಿರುವಾಗ ತಮಗೆ ಬಂದ ಅನುಭವಗಳನ್ನು ಹಾಸ್ಯದ ಹೊನಲಿನಲ್ಲಿ ಸಾ. ಕಸ್ತೂರಿಯವರು ಈ ಪಾಠದಲ್ಲಿ ಬಣ್ಣಿಸಿದ್ದಾರೆ. ]

■ ■ ■

" ಜಟಕಾ ಸ್ಟ್ಯಾಂಡ್ " ಎಂಬ ಕಂಬದ ಬಳಿ ಪೋರ್ಟರುಗಳ ಗುಂಪೊಂದು ಇಸ್ಪೀಟ್ ಆಡುತ್ತಿತ್ತು. ಸಮೀಪದಲ್ಲಿಯೇ " ಹೊರಕ್ಕೆ ದಾರಿ " ಎಂಬ ಬೋರ್ಡು ಸೊಟ್ಟಗೆ ತೂಗಾಡುತ್ತಿದ್ದ ಕಮಾನಿನೊಳಗಿಂದ ನಾನು ಸ್ಟೇಶನ್ನಿನೊಳಕ್ಕೆ ಧಾವಿಸಿದೆ. ಅಲ್ಲೇ ಪಕ್ಕದಲ್ಲಿ ಅಭ್ಯರ್ಥಿಗಳ ಮೈ ಭಾರವೆಷ್ಟೆಂದು ತೂಗಿ ತಿಳಿಸುವ ಯಂತ್ರವೊಂದಿತ್ತು. ಅದರ ಹಣೆಯಮೇಲೆ " ನಿಮ್ಮ ತೂಕ ? " ಎಂಬ ಬೋರ್ಡಿತ್ತಾದರೂ, ಅದರ ಮುಖಕ್ಕೆ ಅಡ್ಡವಾಗಿ " ಕೆಟ್ಟುಹೋಗಿದೆ " ಎಂದು ಯಾರೋ ಚೀಟಿ ಅಂಟಿಸಿದ್ದರು. ಭಾರವಾದ ಮಹನೀಯನೊಬ್ಬನನ್ನು ಅದು ಲಘುವಾಗಿ ಕಂಡಿತೇನೋ ? ಆತನ ಕೋಪ ಈ ರೂಪ ತಾಳಿತೇನೋ ?

" ಬೆಳಿಗ್ಗೆ ೬ರಿಂದ ರಾತ್ರಿ ೧೧ರ ವರೆಗೂ ಟಿಕೇಟ್ ಕೊಡಲಾಗುತ್ತದೆ " ಎಂಬ ಮಹಾ ಬೋರ್ಡಿದ್ದರೂ, ಎಲ್ಲ ಕೈ ಕಿಂಡಿಗಳೂ ಬಂದ್ ! ಒಳಗಿಂದ ಗುಮಾಸ್ತೆಯರ ಹರಟೆಯ ಸದ್ದು ಪ್ರಯಾಣಿಕರಿಗೆ ಕೇಳಿಸಿತು.

ಸ್ಟೇಶನ್ನಿನ ಒಳಭಾಗದಲ್ಲಿ " ಹುಬ್ಬಳ್ಳಿಗೆ ಮುಂದಿನ ರೈಲು " ಎಂಬ ಬೋರ್ಡನ್ನು ನೋಡಿದೆ. ಆ ವಿಷಯದ ತಿಳಿವಳಿಕೆ ನನಗೆ ಬೇಕಾಗಿತ್ತಾದ್ದರಿಂದ ೨೩–೧೫ಕ್ಕೆ ಅಂತ ಅಲ್ಲಿ ಬರೆದಿತ್ತು. ಹನ್ನೆರಡು ಗಂಟೆತನಕ ನಮಗೆ ಗೊತ್ತು; ಇಪ್ಪತ್ತುಮೂರು ಗಂಟೆ ಯಾವಾಗ ! ಅಲ್ಲಿದ್ದ ಗಡಿಯಾರಗಳಲ್ಲೆಲ್ಲ ಗುರುತು ಹಾಕಿದ್ದದ್ದು, ೧೨ ಗಂಟೆ ಮಾತ್ರ ! ಇದೇನು ಮೋಸ, ಎಂದು ಮೂಗಿನಮೇಲೆ ಬೆರಳಿಟ್ಟೆ. ಕೊಂಚ ಹೊತ್ತಾದ ಮೇಲೆ, ತೆಗೆದೆ.

ಅಲ್ಲಿದ್ದ ನಾಲ್ಕು ಗಡಿಯಾರಗಳೂ ನಾಲ್ಕು ಬಗೆಯ ಸಮಯವನ್ನು ಸೂಚಿಸುತ್ತಿದ್ದವು. ನಂತರ ತಿಳಿಯಿತು, ಅವೆಲ್ಲ ನಿಂತುಹೋಗಿವೆ, ಎಂದು. ಮಾಸ್ತರ ಕೋಣೆ ಬಾಗಿಲಲ್ಲಿ " ಯಾರೂ ಪ್ರವೇಶಿಸ ಕೂಡದು " ಎಂಬ ಬೋರ್ಡಿದ್ದರೂ ಅನೇಕರು ಸಾಲಾಗಿ ನುಗ್ಗುತ್ತಿದ್ದುದನ್ನು ಕಂಡು ನಾನೂ ನುಗ್ಗಿದೆ. ಅಲ್ಲಿದ್ದ ಗಡಿಯಾರದ ಮುಳ್ಳುಗಳು ಯಾರಿಗೂ ಕಾಣಿಸದಂತೆ, ಅವನ್ನು ತೆಗೆದು ಬಿಸಾಕಿದ್ದರು.

" ಹಸಿ ಬಣ್ಣ ! ಒರಗ ಬೇಡಿ " ಎಂಬ ಬೋರ್ಡು ತೂಗು ಹಾಕಿದ್ದ ಗೋಡೆಯನ್ನು ಬೆರಳಿನಿಂದ ಕೆರೆದೆ; ಬಣ್ಣ ಒಣಗಿ ವರ್ಷವಾಗಿತ್ತು. ಎಂದೋ ತೂಗು ಹಾಕಿದ ಎಚ್ಚರಿಕೆಯನ್ನು ತೆಗೆದಿರಸಲು ನಮ್ಮವರಿಗೆ ಜ್ಞಾನವಿಲ್ಲವಲ್ಲಾ, ಎಂದು ಚಿಂತಿಸಿದೆ, ಕಂಬವೊಂದಕ್ಕೆ ಒರಗಿಕೊಂಡೆ, ಅದರ ಮೇಲಿನ ಬಣ್ಣ ಒಣಗಿರಲಿಲ್ಲ; ಹೊಸ ಕೋಟು ಹದಗೆಟ್ಟಿತು.

" ಫಲಹಾರ ಮಂದಿರ " ವನ್ನು ಪ್ರವೇಶಿಸಿದೆ. ಫಲ ಸಿಗಲಿಲ್ಲ; " ಕಾಫಿ ಕ್ಲಬ್ " ನಲ್ಲಿ ಟೀಯೊಂದೇ ಪಾನೀಯ ದೊರೆಯುವುದೆಂದು ಹೇಳಿದ. ಪ್ರಯಾ- ಣಿಕರಿಗೆ ಮಾತ್ರ— ಎಂದು ಬರೆದಿದ್ದ ಬೆಂಚುಗಳಲ್ಲಿ ಒಂದನ್ನು ಆರಿಸಿ ಕೊಂಚ ಹೊತ್ತು ವಿಶ್ರಮಿಸೋಣವೆಂದು ಅತ್ತ ನಡೆದೆ. ಅವುಗಳ ಮೇಲೆಲ್ಲ ಆಗಲೇ ಪೋರ್ಟರುಗಳು ಕುಳಿತು, ಒಬ್ಬರ ಬೆನ್ನೊಬ್ಬರು ಕೆರೆದು ಆನಂದಪಡುತ್ತಿದ್ದರು. ಆಗ, ನನ್ನ ಕಾಲಮೇಲೆ ಒಬ್ಬ ಸಾಯಕಲ್ಲನ್ನು ಹರಿಸುತ್ತೇ ನಡೆದ. ಅಂಥವನ್ನು ಒಳಕ್ಕೆ ತರಬಾರದು ಎಂದು ಹೊರಗಡೆ ಬೋರ್ಡಿದ್ದಂತೆ ಜ್ಞಾಪಕ. ಥೂ, ಎಂದೆ. ಆಗ, ಉಗುಳಲು ಆಸೆಯಾಯಿತು; ಗಂಟಲಲ್ಲಿ ಶ್ಲೇಷ್ಮ ಕೂಡಿ ಬಂತು. " ಇಲ್ಲಿ ಉಗುಳಿ " ಎಂಬ ಬೋರ್ಡನ್ನು ನೋಡಿ, ಅಲ್ಲಿಗೆ ಸರಿದೆ. ಆದರೆ ಬೋರ್ಡು ಬಾಣದಿಂದ ಸೂಚಿಸಿದ ಸ್ಥಳದಲ್ಲಿ ಮುದುಕಿ ಒಬ್ಬಳು ಕುಳಿತು ಕೆಮ್ಮುತ್ತಿದ್ದಳು. ಅಲ್ಲದೆ, ಅಲ್ಲೊಂದು ಸೋಜಿಗವನ್ನೂ ಕಂಡೆ. " ಇಲ್ಲಿ ಉಗುಳಿ " ಎಂದು ಅಂದವಾಗಿ ಕರಿಯ ಹಲಗೆಯ ಮೇಲೆ ಬಿಳಿ ಬಣ್ಣದಿಂದ ಬರೆದಿದ್ದನ್ನು ನೋಡಿ, ಯಾವನೋ ಒಬ್ಬ, ಆ ಬೋರ್ಡಿನ ಮೇಲೆಯೇ ಬಹಳ ಶ್ರಮಪಟ್ಟು ಉಗುಳಿದ್ದ— ಕೆಂಪಗೆ, ತುಂಬಬಾಯ ತಂಬುಲವನ್ನು ! ಕಡೆಗೆ ನನ್ನ ಕೋಪವನ್ನು ನಾನೇ ನುಂಗಬೇಕಾಯಿತು.

ಗಂಟಲೊಣಗಿತು. " ಡ್ರಿಂಕಿಂಗ್ ವಾಟರ್ ! ಕುಡಿಯುವ ನೀರು " ಎಂದು ಬರೆದಿದ್ದ ಮಡಕೆ ನೋಟ, ನಾಲಗೆ ಹೊರಬಂತು. ನಳ ತಿರುಗಿಸಿದರೆ, ಅದೂ ಮೋಸದ ಮುದ್ದೆ. ಒಳಕ್ಕೆ ಕೈ ಇಳೀಬಿಟ್ಟೆ. ಬಿಸಿಬಿಸಿ ಗಾಳಿ !

ಎರಡನೆಯ ತರಗತಿ ಸ್ತ್ರೀ ಪ್ರಯಾಕಣಿರಿಗೆ ಮಾತ್ರ ವಿಶ್ರಾಂತಿ ತೆಗೆದು ಕೊಳ್ಳಲು ಕೋಣೆಯೊಂದಿತ್ತು. ಅದರೊಳಕ್ಕೆ ಹೋಗಲು ನನಗೆ ಭಯ. ಏಕಂ ದರೆ, ಅಲ್ಲಿಂದ ಪುರುಷ ಪುಂಪರ ಆರ್ಭಟ ಕೇಳಿಬಂತು. ಪುರುಷ ಪ್ರಯಾಣ ಕರಿಗಾಗಿದ್ದ ರೂಮುಗಳಿಗೆಲ್ಲ ಬೀಗಹಾಕಿತ್ತು. ಸ್ಟೇಶನ್ ಮಾಸ್ತರರನ್ನು ವಿಚಾ ರಿಸಿದರೆ ಅವರೊಬ್ಬ ಕಿವುಡರು. ಅವರ ಕಚೇರಿಯ ಮತ್ತೊಬ್ಬ ನೌಕರ ಹೇಳಿದ, " ಬೀಗದ ಕೈ ಕಳೆದು ಹೋಗಿದೆ " ಎಂದು.

೧೦-೩೦ರ ಗಾಡಿ ಯಾವಾಗ ಬರುತ್ತದೆ, ಎಂದು ಟಿಕೇಟ್ ಪರೀಕ್ಷಕರ ರೊಬ್ಬರನ್ನು ಕೇಳಿದೆ. ಅವರು, " ಅದನ್ನು ೯-೪೫ ಕ್ಕೆ ಬದಲಾಯಿಸಿ ಆರು ತಿಂಗಳಾಯಿತು. " ಎಂದರು.

ಕಿಸೆಯೊಳಕ್ಕೆ ಕರವಸ್ತ್ರಕ್ಕೋಸ್ಕರ ಕೈ ಇಳಿಸಿದೆ. ಅದು ಯಾರ ಕರವನ್ನೋ ಸೇರಿತ್ತು. ಜೊತೆಗೆ, ಐದು ರೂಪಾಯಿ ನೋಟೊಂದು ಮಂಗಮಾಯ. ಪರಮಾತ್ಮಾ, ಎಂದು ಆಕಾಶದ ಕಡೆ ತಲೆ ಎತ್ತಿದೆ. " ಕಳ್ಳರಿದಾರೆ, ಎಚ್ಚರಿಕೆ " ಎಂಬ ಬೋರ್ಡನ್ನಾದರೂ ರೈಲಿನವರು ತಗಲಿಸಬಾರದೆ, ಎಂದ ನೌಕರನೊಬ್ಬನನ್ನು ಕೇಳಿದೆ. " ತಗುಲಿಸಿದ್ದರು, ಆದರೆ ಅದನ್ನು ಯಾರೋ ಕದ್ದು, ಒಲೆಗೆ ಉಪಯೋಗಿಸಿಕೊಂಡು ಬಿಟ್ಟಿದಾರೆ, " ಎಂದು ಅವರು ಉತ್ತರ ಕೊಟ್ಟರು.

" ಮಂಕ " ಎಂಬ ಒಂದು ಬೋರ್ಡನ್ನು ಬರೆಯಿಸಿ ನನ್ನ ಹಣೆಗೆ ತಗುಲಿಸಿಕೊಳ್ಳುವುದೊಂದೇ ಬಾಕಿ ಎಂದೆನಿಸಿತು, ನನಗೆ.

**ಶಬ್ದಾರ್ಥ:**

ಪಕ್ಕದಲ್ಲಿ – ಸಮೀಪದಲ್ಲಿ; ಗುಮಾಸ್ತೆ – ಕಾರಕೂನ; ಬಿಸಾಕು – ಒಗೆ; ಒರಗು – ಮಲಗು, ಆತು ಕುಳಿತುಕೊಳ್ಳು; ಹದಗೆಡು - ಕೆಟ್ಟುಹೋಗು; ವಿಶಮಿಸು – ವಿರಾಮ ತೆಗೆದುಕೊಳ್ಳು; ಮಂಕ – ಪೆದ್ದ, ಹುಚ್ಚ.

**ಪ್ರಶ್ನೆ:**

೧. ಮೈ ಭಾರ ನೋಡಿಕೊಳ್ಳುವ ಯಂತ್ರಕ್ಕೆ ಏನು ಅಂಟಿಸಿತ್ತು ? ಏಕೆ ?
೨. ಟಿಕೇಟು ಕೊಡುವ ಕಿಂಡಿಗಳ ಗತಿಯೇನಾಗಿತ್ತು ? ಮತ್ತು ಅಲ್ಲಿ ಏನೆಂದು ಬೋರ್ಡು ಇತ್ತು ?
೩. " ಹುಬ್ಬಳ್ಳಿಗೆ ಮುಂದಿನ ರೈಲು " ಎಂಬ ಬೋರ್ಡಿಗೂ ಗಾಡಿಬಿಡುವದಕ್ಕೂ ಹೊಂದಿಕೆಯಾಗಿತ್ತೆ ?
೪. ಮತ್ತೆ ಬೇರೆ ಬೇರೆ ಬೋರ್ಡುಗಳ ಬಗ್ಗೆ ಹೇಳಿರಿ.
೫. ' ಮಂಕ ' ಎಂಬ ಬೋರ್ಡು ಯಾಕೆ ತಗಲಿಸಬೇಕೆಂದು ಬರೆಹಗಾರರು ಹೇಳುತ್ತಾರೆ ?

**ವ್ಯಾಕರಣ:**

**ಸಂಶಯಾರ್ಥಕ ಕ್ರಿಯಾಪದಗಳು**

(ಅ) ಕೆಳಗಿನ ವಾಕ್ಯಗಳಲ್ಲಿಯ ಕ್ರಿಯಾಪದಗಳನ್ನು ನಿರೀಕ್ಷಿಸಿರಿ.

೧) ಅವನು ನಾಳೆ ಊರಿನಿಂದ ಬಂದಾನು
೨) ಉಗಿಬಂಡಿಯು ಈಗ ಬಂದೀತು.

ಈ ಎರಡೂ ವಾಕ್ಯಗಳಲ್ಲಿ ಬರುವ ಕ್ರಿಯೆ ಯಾವಾಗ ನಡೆಯುವದೆಂಬದನ್ನು ನಿಶ್ಚಯವಾಗಿ ಹೇಳಿಲ್ಲ. ಮೊದಲನೆಯ ವಾಕ್ಯದಲ್ಲಿ ಅವನು ನಾಳೆ ನಿಶ್ಚಯವಾಗಿ ಊರಿನಿಂದ ಬಂದೇಬರುವನೆಂದು ಹೇಳಿಲ್ಲ. ಅವನು ಬರುವ ಸಂಭವವಿದೆ; ಬರಬಹುದು ಎಂದು ಸಂಶಯವನ್ನು ಇಲ್ಲಿ ವ್ಯಕ್ತ ಪಡಿಸಲಾಗಿದೆ. ಇದರಂತೆ ಎರಡನೆಯ ವಾಕ್ಯದಲ್ಲಿಯೂ ಉಗಿಬಂಡಿಯ ಬರುವಿಕೆಯ ಬಗ್ಗೆ ಸಂಶಯವನ್ನು ವ್ಯಕ್ತ ಪಡಿಸಲಾಗಿದೆ.

ಹೀಗೆ ಒಂದು ಕ್ರಿಯೆ ಜರುಗುವ ಬಗ್ಗೆ ಸಂಶಯವನ್ನು, ತರ್ಕವನ್ನು ವ್ಯಕ್ತ ಪಡಿಸುವ ಕ್ರಿಯಾಪದಗಳಿಗೆ **ಸಂಶಯಾರ್ಥಕ ಕ್ರಿಯಾಪದ**ಗಳೆಂದು ಹೆಸರು.

ಸಂಶಯಾರ್ಥಕ ಕ್ರಿಯಾಪದಗಳು ಸಿದ್ಧವಾಗಬೇಕಾದರೆ ಮೂಲ ಧಾತುವಿಗೆ ಕೆಲವು ಆಖ್ಯಾತ ಪ್ರತ್ಯಯಗಳು ಹತ್ತುತ್ತವೆ. ಆದ್ದರಿಂದ ಅವುಗಳನ್ನು ನಾವು ತಿಳಿದುಕೊಳ್ಳುವದು ಅಗತ್ಯ.

**ಸಂಶಯಾರ್ಥಕ**

ಆಖ್ಯಾತ ಪ್ರತ್ಯಯಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | ಏನು | ಏವು |
| ಮಧ್ಯಮ ಪುರುಷ (ಮೂರೂ ಲಿಂಗ) | ಈ | ಈರಿ |
| ಪ್ರಥಮ ಪುರುಷ | | |
| ಪುಲ್ಲಿಂಗ | ಆನು | ಆರು |
| ಸ್ತ್ರೀಲಿಂಗ | ಆಳು | ಆರು |
| ನಪುಂಸಕಲಿಂಗ | ಈತು | ಆವು |

**ನಡೆ** ಧಾತುವಿನ ಸಂಶಯಾರ್ಥಕ ರೂಪಗಳು

| | | |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | ನಾನು ನಡೆದೇನು | ನಾವು ನಡೆದೇವು |
| ಮಧ್ಯಮ ಪುರುಷ (ಮೂರೂ ಲಿಂಗ) | ನೀನು ನಡೆದೀ | ನೀವು ನಡೆದೀರಿ |
| ಪ್ರಥಮಪುರುಷ | | |
| ಪುಲ್ಲಿಂಗ | ಅವನು ನಡೆದಾನು | ಅವರು ನಡೆದಾರು |
| ಸ್ತ್ರೀಲಿಂಗ | ಅವಳು ನಡೆದಾಳು | ಅವರು ನಡೆದಾರು |
| ನಪುಂಸಕಲಿಂಗ | ಅದು ನಡೆದೀತು | ಅವು ನಡೆದಾವು |

ನಡೆ + ದ + ಏನು = ನಡೆದೇನು ಎಂದು ರೂಪವು ಸಿದ್ಧವಾಗುತ್ತದೆ. ಉಳಿದವೂ ಇದರಂತೆಯೇ ಸಿದ್ಧವಾಗುತ್ತವೆ.

(ಬ) ಕೆಳಗಿನ ಕ್ರಿಯಾಪದಗಳ ಸಂಶಯಾರ್ಥಕ ರೂಪಗಳನ್ನು ಎಲ್ಲ ಪುರುಷ ಹಾಗೂ ವಚನಗಳಲ್ಲಿ ಹೇಳಿರಿ.

ಬರು, ಕೇಳು, ನುಡಿ, ಹೊಡೆ, ಮಲಗು, ನಿಲ್ಲು, ಮೆಲ್ಲು, ಗೆಲ್ಲು, ಓಡು, ಬೀಳು.

# ೨೨. ಆನೆ

[ ಆನೆಯು ಭಾರತದ ಒಂದು ಪ್ರಾಚೀನ ಪ್ರಾಣಿ. ಅದು ನಮ್ಮ ಇತಿಹಾಸ-ಪುರಾಣಗಳಲ್ಲೆಲ್ಲ ಹೆಸರಾಗಿದೆ. ಅದು ನಮ್ಮ ಉತ್ಸವ, ಸಮಾರಂಭಗಳ ಶೋಭೆಯಾಗಿದೆ. ಅಂಥ ಆನೆಯ ಪರಿಚಯವನ್ನು ಇಲ್ಲಿ ನೀವು ಮಾಡಿಕೊಳ್ಳುವಿರಿ. ]

ವಸಂತನು ಇದ್ದ ಊರು ಒಂದು ಹಳ್ಳಿಯಾಗಿತ್ತು. ಅವನು ಇನ್ನೂ ಪ್ರಾಥಮಿಕ ಶಾಲೆಯಲ್ಲಿ ಕಲಿಯುತ್ತಿದ್ದುದರಿಂದ ಪಟ್ಟಣಕ್ಕೆ ಹೋಗುವ ಪ್ರಸಂಗ ಬಂದಿರಲಿಲ್ಲ. ಅವನು ಆನೆಯನ್ನು ಎಂದೂ ನೋಡಿರಲಿಲ್ಲ. ಒಂದು ಬೇಸಿಗೆಯಲ್ಲಿ ಆ ಹಳ್ಳಿಗೆ ಒಂದು ಸರ್ಕಸ ಬಂದಿತು. ಸರ್ಕಸ್ಸಿನವರು ತಮ್ಮ ಆನೆಯನ್ನು ಊರ ತುಂಬ ಅಡ್ಡಾಡಿಸಿ ಪ್ರಚಾರ ಮಾಡಲು ತೊಡಗಿದರು. ವಸಂತನು ದೂರದಿಂದಲೇ ಬರುವ ಆನೆಯನ್ನು ನೋಡಿ ಭವ್ಯವೂ ಭಯಾನಕವೂ ಆದ "ಮುಂಬಾಲದ ದೊಡ್ಡ ಎಮ್ಮೆಯಂತಿರುವ ಈ ಪ್ರಾಣಿ ಯಾವದು ಅಣ್ಣಾ?" ಎಂದು ತನ್ನ ಅಣ್ಣನಾದ ವಿನೋದನನ್ನು ಕೇಳಿದನು. ಆಗ ವಿನೋದನು "ಇದು ಆನೆ" ಎಂದು ಹೇಳಿದನು.



ಅಂದು ರಾತ್ರಿ ಅಣ್ಣ-ತಮ್ಮಂದಿರಿಬ್ಬರೂ ಸರ್ಕಸ ನೋಡಿ ಬಂದರು. ಮರುದಿನ ವಸಂತನು "ಆನೆಯನ್ನು ಎಲ್ಲಿಂದ ಹಿಡಿದು ತಂದಿರುವರು? ಅದು ಹೇಗೆ ಊಟ ಮಾಡುವದು? ಅದು ಹೇಗೆ ನೀರು ಕುಡಿಯುವದು? ಮುಂತಾದ ಪ್ರಶ್ನೆಗಳಿಂದ ವಿನೋದನನ್ನು ಪೀಡಿಸಹತ್ತಿದನು. ವಿನೋದನು ಕಾಲೇಜಿನಲ್ಲಿ ಓದುತ್ತಿದ್ದನು. ಅವನು ವಸಂತನಿಗೆ ಆನೆಯ ಬಗ್ಗೆ ಹೀಗೆ ಹೇಳಿದನು:

ನೆಲದ ಮೇಲೆ ನಡೆದಾಡುವ ಪ್ರಾಣಿಗಳಲ್ಲೆಲ್ಲ ಆನೆಯು ದೊಡ್ಡದು. ಇದು ದಟ್ಟವಾದ ಹಳವುಗಳಲ್ಲಿ ವಾಸಿಸುತ್ತದೆ. ಪೃಥ್ವಿಯಲ್ಲಿ ಭಾರತ ಮತ್ತು ಆಫ್ರಿಕಾ

ಖಂಡಗಳಲ್ಲಿ ಮಾತ್ರ ಆನೆಗಳು ಜೀವಿಸಿರುತ್ತವೆ. ಇವುಗಳಲ್ಲಿ ಆಫ್ರಿಕೆಯ ಆನೆಗಳು ಭಾರತದ ಆನೆಗಳಿಗಿಂತಲೂ ದೊಡ್ಡವಿರುತ್ತವೆ.

ಆನೆಯು ಬೂದಿ ಬಣ್ಣದ್ದಿರುತ್ತದೆ. ಅದಕ್ಕೆ ಕಂಬದಂಥ ಕಾಲುಗಳೂ ಮರದಂಥ ಕಿವಿಗಳೂ ಇರುತ್ತವೆ. ಅದರ ಕಣ್ಣುಗಳು ತೀರ ಚಿಕ್ಕವಾಗಿರುತ್ತವೆ. ಆನೆಗೆ ಹಿಂಭಾಗದಲ್ಲಿ ಒಂದು ಚಿಕ್ಕ ಬಾಲವೂ ಮುಂಭಾಗದಲ್ಲಿ ದೊಡ್ಡ ಬಾಲದಂತಿರುವ ಸೊಂಡಿಲೂ ಇರುತ್ತವೆ. ಸೊಂಡಿಲಿನ ಎರಡೂ ಬದಿಗೆ ಆನೆಯ ಬಾಯಿಯಲ್ಲಿ ಎರಡು ಕೋರೆಯ ಹಲ್ಲುಗಳಿರುತ್ತವೆ. ಈ ಹಲ್ಲುಗಳಿಗೆ 'ಆನೆಯ ಕೋರೆ', 'ಹಸ್ತಿದಂತ' ವೆನ್ನುತ್ತಾರೆ.

ಆನೆಯ ನೋಟವು ಬಹಳ ದೂರ ಹರಿಯುವದಿಲ್ಲ. ಆದರೆ ಅದರ ಕಿವಿಗಳು ಮಾತ್ರ ಬಹಳ ತೀಕ್ಷ್ಣವಾಗಿರುತ್ತವೆ. ಒಂದು ಸೂಜಿಬಿದ್ದ ಸಪ್ಪಳವೂ ಕೂಡ ಅದಕ್ಕೆ ಕೇಳುತ್ತದೆ. ಅದರಂತೆ ಅದರ ಮೂಗು ಕೂಡ ಬಹಳ ತೀಕ್ಷ್ಣವಾಗಿದೆ. ಮನುಷ್ಯರ ವಾಸನೆಯನ್ನು ಬಹು ದೂರಿನಿಂದಲೇ ಅದು ಹಿಡಿಯುತ್ತದೆ. ಆನೆಯು ತನ್ನ ಕಿವಿಗಳನ್ನು ಬೀಸಣಿಕೆಯಂತೆ ಉಪಯೋಗಿಸುತ್ತದೆ.

ಆನೆಯ ಸೊಂಡಿಲು ಎಂದರೆ ಆನೆಯ ಮೂಗು. ಅದು ತನ್ನ ಸೊಂಡಿಲಿನಿಂದಲೇ ಉಸಿರಾಡಿಸುತ್ತದೆ; ಆ ಸೊಂಡಿಲು ಕೈಯಂತೆ ಉದ್ದವಾಗಿರುವದರಿಂದ ಅದನ್ನು ಆನೆಯು ತನ್ನ ಕೈಯಂತೆಯೂ ಉಪಯೋಗಿಸುತ್ತದೆ. ಆನೆಯು ತನ್ನ ಸೊಂಡಿಲಿನಿಂದ ತನ್ನ ಬಾಯಿಯಲ್ಲಿ ತುತ್ತು ಹಾಕಿಕೊಳ್ಳುತ್ತದೆ; ತನಗೆ ಬೇಕಾದ ಪದಾರ್ಥಗಳನ್ನು ಎತ್ತಿಕೊಳ್ಳುತ್ತದೆ. ಗಿಡಗಂಟಿಗಳನ್ನು ಮುರಿಯಲಿಕ್ಕೂ, ಭಾರ ಎತ್ತಲಿಕ್ಕೂ, ಮೈಮೇಲೆ ಮಣ್ಣುಗಳನ್ನು ಉಗ್ಗಿಕೊಳ್ಳಲಿಕ್ಕೂ ಅದು ತನ್ನ ಸೊಂಡಿಲವನ್ನೇ ಉಪಯೋಗಿಸುತ್ತದೆ. ಹೀಗೆ ಕೈಯಂತೆ ತನ್ನ ಸೊಂಡಿಲವನ್ನು ಉಪಯೋಗಿಸಿಕೊಳ್ಳುವದರಿಂದ ಆನೆಗೆ 'ಹಸ್ತಿ', 'ಕರಿ' ಎಂಬ ಹೆಸರುಗಳು ಬಂದಿವೆ. ಇದಲ್ಲದೆ ಆನೆಯು ತನ್ನ ಸೊಂಡಿಲಿನಲ್ಲಿ ನೀರನ್ನು ತುಂಬಿಕೊಂಡು ನಂತರ ತನ್ನ ಬಾಯಿಯಲ್ಲಿ ಹಾಕಿಕೊಳ್ಳುತ್ತದೆ; ಹೀಗೆ ಎರಡು ಸಾರೆ ಅದು ನೀರನ್ನು ತೆಗೆದುಕೊಳ್ಳುವದರಿಂದ ಅದಕ್ಕೆ "ದ್ವಿಪ" ಎಂಬ ಹೆಸರು ಕೊಡಲ್ಪಟ್ಟಿದೆ. ಹಲವು ಜನರಲ್ಲಿ ಆನೆಯು ಸೊಂಡಿಲಿನಿಂದ ನೀರು ಕುಡಿಯುವದೆಂಬ ಕಲ್ಪನೆ ಇದೆ; ಇದು ತಪ್ಪು. ಆನೆಯು ಬಾಯಿಯಿಂದಲೇ ನೀರು ಕುಡಿಯುತ್ತದೆ; ಆದರೆ ಅದರ ಬಾಯಿಯು ಎತ್ತರವಾಗಿರುವದರಿಂದಲೂ ಅದರ ಕುತ್ತಿಗೆ ಉದ್ದವಾಗಿಲ್ಲವಾದುದರಿಂದಲೂ ಆನೆಯು ಸೊಂಡಿಲಿನಲ್ಲಿ ಮೊದಲು ನೀರನ್ನು ತುಂಬಿಕೊಂಡು ನಂತರ ಅದನ್ನು ಬಾಯಿಯಲ್ಲಿ ಹಾಕಿಕೊಳ್ಳುತ್ತದೆ.

ಆನೆಯ ಕೋರೆಗಳು ಅಂದರೆ ಅದರ ಮೇಲ್ದವಡೆಯ ಹಲ್ಲುಗಳು. ಈ ಕೋರೆಗಳು ಎಂಟು ಫೂಟಿನ ವರೆಗೂ ಉದ್ದವಿರುತ್ತವಲ್ಲದೆ ಐವತ್ತರಿಂದ ನಾಲ್ಕೈದು ನೂರು ಪೌಂಡುಗಳ ವರೆಗೂ ಭಾರವಿರುತ್ತವೆ.

ಆನೆಗೆ ನೀರಾಟವು ಬಹಳ ಸೇರುತ್ತದೆ; ಆದ್ದರಿಂದ ದೊಡ್ಡ ದೊಡ್ಡ ಸರೋವರಗಳು, ಹೊಳೆಯ ಮಡುವುಗಳಿದ್ದಲ್ಲಿ ಆನಂದದಿಂದ ನೀರೆರೆಚುತ್ತ ಜಲಕ್ರೀಡೆ ಯಾಡುತ್ತ ಕಾಲಕಳೆಯುತ್ತವೆ. ಆನೆಯು ಮಾಂಸಾಹಾರಿ ಪ್ರಾಣಿಯಲ್ಲ. ಅದು ತನ್ನ ಆಹಾರಕ್ಕಾಗಿ ಎಂದೂ ಜನರನ್ನಾಗಲಿ ಪ್ರಾಣಿಗಳನ್ನಾಗಲಿ ಕೊಲ್ಲುವದಿಲ್ಲ. ಅದು ಶಾಕಾಹಾರಿ ಪ್ರಾಣಿ. ಆದ್ದರಿಂದ ಹುಲ್ಲು, ಎಲೆ, ಗಡ್ಡೆ ಗೆಣಸು, ಕಬ್ಬು, ಗೋವಿನಜೋಳ ಮೊದಲಾದ ಬೆಳೆಗಳನ್ನು ತಿಂದು ಜೀವಿಸುತ್ತದೆ. ಆನೆಯು ಒದರುವದಕ್ಕೆ 'ಘೀಳಿಡು' ಎನ್ನುತ್ತಾರೆ. ಆನೆಯು ರಾತ್ರಿ ಕಾಲದಲ್ಲಿ ಬಹಳ ದೂರದವರೆಗೂ ನಡೆಯುತ್ತದೆ. ಬಿಸಿಲಿನಲ್ಲಿ ಅದು ಗಿಡಗಳ ಗುಂಪಿನಲ್ಲಿ ವಿಶ್ರಾಂತಿ ಪಡೆಯುತ್ತದೆ.

ಆನೆಯು ಅತಿ ಜಾಣವಾದ ಪ್ರಾಣಿಗಳಲ್ಲಿ ಒಂದಾಗಿದೆ. ಅದರ ನೆನಪಿನ ಶಕ್ತಿಯೂ ಬಹಳವಾಗಿದೆ. ಅದು ತನಗೆ ಉಪಕಾರಮಾಡಿದವರನ್ನು ಎಂದೂ ಮರೆಯುವದಿಲ್ಲ; ಅಪಕಾರಮಾಡಿದವರನ್ನು ಸೇಡುತೀರಿಸಿಕೊಳ್ಳದೇ ಬಿಡುವದಿಲ್ಲ. ಇದು ಸ್ವಾಭಾವಿಕವಾಗಿಯೇ ಶಾಂತಿಪ್ರಿಯವಾದ ಪ್ರಾಣಿಯಾಗಿದೆ. ಆದರೆ ತನಗೆ ಅಪಕಾರ ಮಾಡಿದವರ ಮೇಲೆ ಸೇಡುತೀರಿಸಿಕೊಳ್ಳುವಾಗ ಇಲ್ಲವೆ 'ಮದ' ಬಂದಾಗ ಬಹಳ ಕ್ರೂರವೂ ಉಗ್ರವೂ ಆಗುತ್ತದೆ; ಆಗ ಇದನ್ನು ಎದುರಿಸಿ ಬದುಕುವದೇ ಶಕ್ಯವಿಲ್ಲ.

ಆನೆಗಳು ಬೆಟ್ಟಗಳ ಹಳವುಗಳಲ್ಲಿ ಹಿಂಡುಗಟ್ಟಿಕೊಂಡಿರುತ್ತವೆ; ಆಗ ಇವುಗಳಿಗೆ ಕಾಡಾನೆಗಳೆಂದು ಕರೆಯುತ್ತಾರೆ. ಈ ಕಾಡಾನೆಗಳು ತಮ್ಮ ತಮ್ಮ ಆಹಾರಕ್ಕಾಗಿ ಅಲ್ಲಲ್ಲಿ ಅಲೆದಾಡುತ್ತವೆ. ಅವುಗಳಿಗೆ ಕಬ್ಬಿನ ತೋಟಗಳೂ ಗೋವಿನಜೋಳದ ಹೊಲಗಳೂ ಸಿಕ್ಕರೆ ತೀರೇ ಹೋಯಿತು; ಒಂದೇ ರಾತ್ರಿಯಲ್ಲಿ ಎಲ್ಲವನ್ನು ತಿಂದು ಹಾಳು ಮಾಡಿಬಿಡುತ್ತವೆ.

ಕಾಡಾನೆಗಳಲ್ಲಿ ಕೆಲವನ್ನು ಯುಕ್ತಿಯಿಂದ ಹಿಡಿದು ಪಳಗಿಸುತ್ತಾರೆ; ಹೀಗೆ ಪಳಗಿಸಿದ ಆನೆಗಳು ಮನುಷ್ಯನಿಗೆ ಈಲಾಗಿ ಅವನು ಹೇಳಿದಂತೆ ಕೇಳುತ್ತವೆ; ಮತ್ತು ಈ ಈಲಾದ ಆನೆಗಳು ಕಾಡಾನೆಗಳನ್ನು ಹಿಡಿದು ಕೊಡಲು ಬಹಳ ಸಹಾಯ ಮಾಡುತ್ತವೆ. ಈಲಾದ ಆನೆಯ ಸಹಾಯದಿಂದ ಕಾಡಾನೆಗಳನ್ನು

ಹಿಡಿಯುವದಕ್ಕೆ 'ಖೆಡ್ಡಾ' ಎಂದು ಕರೆಯುತ್ತಾರೆ. ಮೈಸೂರಿನಲ್ಲಿ ಈ 'ಖೆಡ್ಡಾ' ಕಾರ್ಯಕ್ರಮವು ಬಹಳ ಚನ್ನಾಗಿ ನಡೆಯುತ್ತದೆ! ಅದನ್ನು ನೋಡಲು ಬಹಳ ಹಣ ಖರ್ಚು ಮಾಡಿ ದೂರ ದೂರ ದೇಶದಿಂದ ಜನರು ಬರುತ್ತಾರೆ.

ಆನೆಯು ಬಹಳ ಉಪಯುಕ್ತ ಪ್ರಾಣಿಯು. ಅದು ಜೀವಂತವಿರುವಾಗ ಅದನ್ನು ರಾಜಮಹಾರಾಜರೂ ಮಠಾಧಿಪತಿಗಳೂ ಹತ್ತಲಿಕ್ಕೆ ಉಪಯೋಗಿಸು ತ್ತಾರೆ. ಅಲ್ಲದೆ ಅರಣ್ಯದಲ್ಲಿ ಕಟ್ಟಿಗೆ ಮುಂಡಿಗೆಗಳನ್ನು ಸಾಗಿಸಲು, ಹೊಳೆ ಯನ್ನು ದಾಟಲು, ಭಾರ ಜಗ್ಗಲು ಆನೆಗಳನ್ನು ಉಪಯೋಗಿಸುತ್ತಾರೆ. ಪ್ರಾಚೀನ ಕಾಲದಲ್ಲಿ ನಮ್ಮ ದೇಶದಲ್ಲಿ ಆನೆಗಳನ್ನು ಯುದ್ಧ ಮಾಡುವದಕ್ಕೆ ಉಪಯೋಗಿ ಸುತ್ತಿದ್ದರು.

ಆನೆಯು ಸತ್ತ ಮೇಲೆ ಅದರ ಎಲುವುಗಳಿಗೆ ಬಹಳ ಬೆಲೆ ಬರುತ್ತದೆ. ಅದರ ಎಲುವಿನಿಂದ ಹಸ್ತಿದಂತದ ಕೆತ್ತನೆಯ ಕೆಲಸಗಳನ್ನು ಬಹಳ ಕಲಾಪೂರ್ಣ ವಾಗಿ ಮಾಡುತ್ತಾರೆ. ಒಂದು ಜೀವಂತ ಆನೆಯನ್ನು ಕೊಳ್ಳಲು ನೀವು ಎಷ್ಟು ಬೆಲೆ ಕೊಡುವಿರೋ ಅಷ್ಟೇ ಬೆಲೆಯನ್ನು ಸತ್ತ ಆನೆಯನ್ನು ಕೊಳ್ಳಲೂ ಕೊಡ ಬೇಕಾಗುತ್ತದೆ. ಒಟ್ಟಿನಲ್ಲಿ ಆನೆಯು ಆಸ್ಥಾನಕ್ಕೆ ಶೋಭೆ ತರುವಂತೆ ಅರಣ್ಯಕ್ಕೂ ಶೋಭೆ ತರುತ್ತದೆ.

**ಶಬ್ದಾರ್ಥ:**

ಶಾಕಾಹಾರಿ – ಹಣ್ಣುಹಂಪಲು, ತರುಲತೆಗಳು ಆಹಾರವಾಗಿರುವ ಪ್ರಾಣಿ; ಪಳಗಿಸು – ಸಾದುಮಾಡು, ಈಲುಮಾಡು, ತರಬೇತು ಕೊಡು; ಮುಂಡಿಗೆ – ದೊಡ್ಡ ದೊಡ್ಡ ತೊಲೆ.

**ಪ್ರಶ್ನೆ:**

೧. ವಸಂತನಿಗೆ ಆನೆ ಹೇಗೆ ಕಂಡಿತು ? ಅದನ್ನು ಅವನು ಹೇಗೆ ವರ್ಣಿಸಿದನು ?
೨. ಆನೆಯ ವಿಶಿಷ್ಟವಾದ ಅವಯವಗಳು ಯಾವವು ? ಸ್ವಲ್ಪದರಲ್ಲಿ ಹೇಳಿರಿ. ಆನೆಗಳು ಯಾವ ಖಂಡಗಳಲ್ಲಿ ಜೀವಿಸಿವೆ ?
೩. 'ಹಸ್ತಿ', 'ಕರಿ', 'ದ್ವಿಪ' ಎಂಬ ಹೆಸರುಗಳು ಆನೆಗೆ ಏಕೆ ಬಂದವು ? ವಿವರಿಸಿ ಹೇಳಿರಿ.
೪. ಆನೆಯ ಆಹಾರವು ಯಾವದು ? ಆನೆಯ ಗುಣ ಸ್ವಭಾವ ಹೇಗಿವೆ ? 'ಖೆಡ್ಡಾ' ಎಂದರೇನು ? ವಿವರಿಸಿ ಹೇಳಿರಿ.
೫. ಆನೆಯ ಉಪಯೋಗವೇನು ? ಅದು ಮರಣ ಹೊಂದಿದಾಗಲೂ ಅದರ ಬೆಲೆ ಏಕೆ ಕಡಿಮೆಯಾಗುವದಿಲ್ಲ ?

**ವ್ಯಾಕರಣ:**

## ವಿಧ್ಯರ್ಥಕ ಕ್ರಿಯಾಪದಗಳು

(ಅ) ಕೆಳಗಿನ ವಾಕ್ಯಗಳಲ್ಲಿಯ ಕ್ರಿಯಾಪದಗಳನ್ನು ನಿರೀಕ್ಷಿಸಿರಿ.

೧) ಆನೆಯು ಬರಲಿ.

೨) ನೀನು ಸರ್ಕಸ್ ನೋಡಲು ಹೋಗು.

೩) ಮಹಾನುಭಾವರು ದಯಮಾಡಿಸಲಿ.

ಈ ಮೂರೂ ವಾಕ್ಯಗಳಲ್ಲಿಯ ಕ್ರಿಯಾಪದಗಳಲ್ಲಿ 'ವಿಧಿ' ಇದೆ. ವಿಧಿ ಅಂದರೆ ಅಪ್ಪಣೆ, ಆಶೀರ್ವಾದ, ಆಶೆ, ಬಿನ್ನಹ, ಹರಕೆ ಮುಂತಾಗಿ ಅರ್ಥವಾಗುತ್ತದೆ. ಇಲ್ಲಿ ಮೊದಲನೆಯ ವಾಕ್ಯದಲ್ಲಿ ಆಶೆ ಇದೆ. ಎರಡನೆಯ ವಾಕ್ಯದಲ್ಲಿ ಅಪ್ಪಣೆ ಇದೆ. ಮೂರನೆಯ ವಾಕ್ಯದಲ್ಲಿ ಬಿನ್ನಹವಿದೆ. ಹೀಗೆ '**ವಿಧಿ**'ಯನ್ನೊಳಗೊಂಡ ಕ್ರಿಯಾಪದಗಳನ್ನು **ವಿಧ್ಯರ್ಥಕ** ಕ್ರಿಯಾಪದಗಳೆಂದು ಕರೆಯುತ್ತಾರೆ.

ಮೂಲ ಧಾತುವಿಗೆ ವಿಧ್ಯರ್ಥದ ಆಖ್ಯಾತ ಪ್ರತ್ಯಯಗಳು ಹತ್ತಿ ವಿಧ್ಯರ್ಥಕ ಕ್ರಿಯಾಪದಗಳಾಗುತ್ತವೆ.

### ವಿಧ್ಯರ್ಥಕ

ಆಖ್ಯಾತ ಪ್ರತ್ಯಯಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | ಉವೆ. | ಉವ, ಓಣ. |
| ಮಧ್ಯಮ ಪುರುಷ (ಮೂರೂ ಲಿಂಗ) | ........,ಉವದು | ಇರಿ, ಉವದು |
| ಪ್ರಥಮ ಪುರುಷ (ಮೂರೂ ಲಿಂಗ) | ಅಲಿ | ಅಲಿ |

**ನಡೆ** ಧಾತುವಿನ ವಿಧ್ಯರ್ಥಕ ರೂಪಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂ ಲಿಂಗ) | ನಾನು ನಡೆಯುವೆ | ನಾವು ನಡೆಯವೆವು<br>ನಾವು ನಡೆಯೋಣ |
| ಮಧ್ಯಮ ಪುರುಷ (ಮೂರು ಲಿಂಗ) | ನೀನು ನಡೆ; ನೀನು ನಡೆಯುವದು | ನೀವು ನಡೆಯಿರಿ;<br>ನೀವು ನಡೆಯುವಗು |
| ಪ್ರಥಮ ಪುರುಷ (ಮೂರೂ ಲಿಂಗ) | ಅವನು<br>ಅವಳು } ನಡೆಯಲಿ<br>ಅದು | ಅವರು<br>ಅವರು } ನಡೆಯಲಿ<br>ಅವು |

(ಬ) ಕೆಳಗಿನ ಧಾತುಗಳ ವಿಧ್ಯರ್ಥಕ ರೂಪಗಳನ್ನು ಹೇಳಿರಿ.

ಬರು, ಕರೆ, ಬೀಳು, ನಿಲ್ಲು, ಕುಣಿ, ಬರೆ, ಸಾಕು, ಬೆಳೆ, ಓದು, ನಗು.

# ೨೩. ಬಿಡುಗಡೆ ಹೊಂದಿದ ಭೂತ

• • •

ಒಂದು ಊರಿನಲ್ಲಿ ಒಬ್ಬ ನಾವಿಕನಿದ್ದನು. ಅವನು ವಯೋವೃದ್ಧನು. ಮೂರು ಮಕ್ಕಳು ಮತ್ತು ಹೆಂಡತಿಯುಳ್ಳ ಸಂಸಾರ ಅವನದು. ಅವರ ಹೊಟ್ಟೆ ಬಟ್ಟೆಗೆ ಏಳುಹನ್ನೊಂದು. ಬಡತನ ಯಾವಾಗಲೂ ತಪ್ಪಿರಲಿಲ್ಲ. ಇದರಿಂದ ಅವನು ತುಂಬಾ ನೊಂದುಕೊಂಡಿದ್ದನು. ದಿನಂಪ್ರತಿ ಬಲೆಯನ್ನು ತೆಗೆದು ಕೊಂಡು ಸಮುದ್ರದಲ್ಲಿ ಬೀಸುತ್ತಿದ್ದನು. ರಾತ್ರಿ ಕೂಡ ಅವನು ಮೀನು ಹಿಡಿ ಯುತ್ತಿದ್ದ. ಆದರೆ, ದಿನಕ್ಕೆ ನಾಲ್ಕು ಸಲಕ್ಕಿಂತ ಹೆಚ್ಚು ಎಂದೂ ಬಲೆ ಬೀಸು ತ್ತಿದ್ದಿಲ್ಲ. ಹೀಗಿರುತ್ತಿರಲು ಒಂದು ದಿನ ರಾತ್ರಿ ಬಲೆ ಬೀಸಿ ಎಳೆದಾಗ, ಬಲೆ ಬಹಳ ಭಾರವಾಗಿ ತೋರಿತು. ಅತ್ಯಂತ ಸಂತೋಷಭರಿತನಾಗಿ ಅವನು ಬಲೆ ಯನ್ನು ಎಳೆದು ನೋಡಲು, ಅಷ್ಟೇ ಅವನಿಗೆ ನಿರಾಶೆಯಾಯ್ತು; ಸತ್ತ ಕತ್ತೆಯ ಒಂದು ಶವವು ಬಲೆಯೊಳಗೆ ಸಿಕ್ಕಿಬಿದ್ದಿತ್ತು. ಮುದುಕನು ಮತ್ತೆ ಎರಡನೆಯ ಸಲವೂ ಬಲೆ ಬೀಸಿದನು.

ಎರಡನೇ ಸಲ ಆ ಮುದುಕನು ಬಲೆಯನ್ನೆಳೆದು ನೋಡಲು, ಅದರಲ್ಲಿ ಕಲ್ಲು–ಮಣ್ಣುಗಳು ಮಾತ್ರ ಇದ್ದವು; ಮೂರನೆಯ ಸಲ ಚಿಪ್ಪುಗಳು, ಸಣ್ಣ ಸಣ್ಣ ಕಲ್ಲುಗಳು ದೊರೆತುವು; ಇದರಿಂದ ಮುದುಕನಿಗೆ ಬಹಳ ನಿರಾಶೆಯಾಯ್ತು. ದೈವವನ್ನು ಅವನು ನಿಂದಿಸಿದನು. ‘ವಯಸ್ಸಿನ ಕಾರಣದಿಂದ ಬೇರೆ ಯಾವ ಕೆಲಸವೂ ನನ್ನಿಂದ ಆಗುವದಿಲ್ಲ. ಇದೊಂದೇ ನನ್ನ ಉದ್ಯೋಗ. ಈ ಸಮುದ್ರದಲ್ಲಿ ಅನೇಕ ಜೀವಜಂತುಗಳೂ ಇವೆ. ಆದರೆ ನನಗೆ ಒಂದೂ ದೊರೆ ತಿಲ್ಲ. ಇದು ನನ್ನ ಹಣೆಬರೆಹವೇ ಹೇಗೆ?’ ಎಂದು ಮುಂತಾಗಿ ನಾನಾ ಪರಿ ಯಾಗಿ ಶೋಕಿಸಿದನು. ಕೊನೆಗೆ ದೇವರ ಪ್ರಾರ್ಥನೆ ಮಾಡಿ ನಾಲ್ಕನೆಯ ಸಲ ಸಮುದ್ರದಲ್ಲಿ ಬಲೆ ಬೀಸಿದನು. ಈಗಲೂ ಎಳೆದಾಗ ಬಹಳ ಭಾರವಾಗಿ ಕಂಡಿತು. ಎಳೆದು ನೋಡಲು ಕೇವಲ ಒಂದು ಹಿತ್ತಾಳಿಯ ಹೂಜೆ ಮಾತ್ರ ಇದ್ದಿತು. ಪ್ರಾಯಶಃ ಅದರೊಳಗೆ ಚಿನ್ನ ಅಥವಾ ನಾಣ್ಯಗಳು ಇರಬಹುದೆಂದು ಅವನು ಗ್ರಹಿಸಿ, ಅದರ ಮುಚ್ಚಳವನ್ನು ತೆರೆದನು. ಒಳಗೇನೂ ಇರಲಿಲ್ಲ. ಆದರೆ ಅದರ ಒಳಗಿಂದ ಹೊಗೆ ಮಾತ್ರ ಬರಲಾರಂಭಿಸಿತು. ಅದು ನಭಕ್ಕೂ ಮುಟ್ಟಿತು. ನಾವಿಕನು ನೋಡುತ್ತಿದ್ದಂತೆಯೇ ಆ ಹೊಗೆಯು ಒಂದು ಭೂತದ ಆಕಾರವನ್ನು ತಾಳಿತು. ಆಮೇಲೆ “ಓ ಸೊಲೋಮನ್ ಮಹಾರಾಜನೇ, ನನ್ನ ಅಪರಾಧವನ್ನು ಮನ್ನಿಸು” ಎಂದು ಕೂಗಿಕೊಂಡಿತು.



"ಮಹಾರಾಯನೇ", ಈ ರೀತಿ ಭೂತವು ಹೇಳಿದೊಡನೆಯೇ ಮುದುಕನಾದ ನಾವಿಕನಿಗೆ ಸ್ವಲ್ಪ ಧೈರ್ಯವು ಬಂದಿತು. "ಯಾಕೆ ಸುಮ್ಮನೆ ಸೊಲೋಮನ್ನನ ಮಾತನ್ನೆತ್ತುವೆ? ಅವನು ಸತ್ತು ನಾವಿರಾರು ವರುಷಗಳಾದುವು. ನಿನ್ನ ಕಥೆಯೇನು? ಹೇಳು" ಎಂದನು. ಆಗ ಭೂತಕ್ಕೆ ಕೋಪ ಬಂದಿತು. ಮುದುಕನನ್ನು ಹಿಡಿದು, "ನಿನ್ನನ್ನು ನಾನು ಕೊಲುತ್ತೇನೆ. ಯಾವ ರೀತಿಯಾಗಿ ಮರಣ ಹೊಂದಲು ನೀನು ಬಯಸುತ್ತೀ?" ಎಂದು ಪ್ರಶ್ನಿಸಿತು. ಉಪಕಾರ ಮಾಡಿದವರಿಗೆ ಅಪಕಾರ ಮಾಡಬಾರದೆಂದು ವೃದ್ಧ ನಾವಿಕನು ಎಷ್ಟು ಬೇಡಿಕೊಂಡರೂ ಫಲಕಾರಿಯಾಗಲಿಲ್ಲ. ಕೊಲ್ಲಲು ಭೂತವು ಕಾರಣ ಕೊಡುತ್ತಾ ಇಂತೆಂದಿತು:

' ನಾವಿಕನೇ ನಾನು ಪಿಶಾಚಿಯಾಗಿದ್ದೆನು. ಸೊಲೋಮನ್‌ನು ನನ್ನನು ಎಳೆದು ತಂದು ವಿಧೇಯನಾಗುವನಂತೆ ಆಜ್ಞಾಪಿಸಿದನು. ನಾನು ಒಪ್ಪಲಿಲ್ಲ. ಆಗ ಅವನು ಈ ಹಿತ್ತಾಳಿಯ ಹೂಜಿ ತರಿಸಿ, ಅದರೊಳಗೆ ತುಂಬಿಸಿ, ಮುಚ್ಚಳ ಮುಚ್ಚಿದನು. ಅಂದಿನಿಂದ ಇಷ್ಟು ಶತಮಾನಗಳು ದಾಟಿದರೂ ಯಾರೂ ನನ್ನ ಸೆರೆ ಬಿಡಿಸಲಿಲ್ಲ. ಸೆರೆ ಬಿಡಿಸಿದವರಿಗೆ ಅಪಾರ ಹೊನ್ನು ಕೊಡುವುದಾಗಿ

ಪ್ರತಿಜ್ಞೆ ಮಾಡಿದ್ದೆನು. ಯಾರೂ ಬಿಡಿಸಲಿಲ್ಲ. ಆ ಮೇಲೆ ನಿರಾಶೆಯಿಂದ ಬಂಧಮುಕ್ತಗೊಳಿಸಿದವರನ್ನು ಕೊಲ್ಲುತ್ತೇನೆಂದು ನಿರ್ಧರಿಸಿದೆನು. ಆ ಕಾರಣ ದಿಂದ ಈಗ ನಿನ್ನನ್ನು ಕೊಲ್ಲಬೇಕಾಗಿದೆ' ಎಂದು ನುಡಿಯಿತು. ಉಪಕಾರ ಮಾಡಿದವರಿಗೆ ಅಪಕಾರ ಮಾಡಬಾರದೆಂದು ಆ ಮುದುಕನು ಪರಿಪರಿಯಾಗಿ ಹೇಳಿದರೂ ಅದು ಬೋರ್ಗಲ್ಲ ಮೇಲೆ ಹೊಯ್ದ ನೀರಿನಂತಾಗಿ ಪರಿಣಮಿಸಿತು. ಪ್ರಾಣಕ್ಕೆ ಅಪಾಯ ಬಂದ ಆ ಹೊತ್ತಿನಲ್ಲಿ ವಯೋವೃದ್ಧನಾದ ಮುದುಕನಿಗೆ ಕೂಡಲೆ ಒಂದು ಯುಕ್ತಿ ಹೊಳೆಯಿತು. ಅದನ್ನು ಬಯಲುಗೊಳಿಸದೆ ಆ ಮುದು ಕನು ಭೂತರಾಜನಿಗೆ ಕೈಮುಗಿದು, "ಭೂತರಾಜನೇ, ನಿನ್ನ ಕೈಯಿಂದ ನನ್ನ ಸಾವು ಬಂದಂತೆ ಕಾಣುತ್ತದೆ. ಅದು ನನ್ನ ಹಣೆಬರೆಹ. ಇರಲಿ, ನಾನು ಸಾವಿಗೆ ಸಿದ್ಧ. ಆದರೆ ಅದರ ಮೊದಲು ನನ್ನ ಒಂದು ಪ್ರಶ್ನೆಗೆ ಉತ್ತರ ಕೊಡ ಬೇಕೆಂದು ನೀನು ನಂಬಿರುವ ಆ ಸೋಲೋಮನ್ ಹಾಗೂ ಅವನ ದೇವರ ಹೆಸ ರಲ್ಲಿ ಆಣೆ ಇಡುತ್ತೇನೆ" ಎಂದನು.

ದೇವರು ಮತ್ತು ಸೋಲೋಮನ್‌ನ ಆಣೆಯಿಟ್ಟದುಗರಿಂದ ಅದನ್ನು ಉಲ್ಲಂಘಿಸಲು ಭೂತಕ್ಕೆ ಶಕ್ಯವಾಗಲಿಲ್ಲ. ಆದುದರಿಂದ ಮುದುಕನ ಪ್ರಶ್ನೆಗೆ ಉತ್ತರ ಕೊಡುವುದಾಗಿ ಭೂತವು ವಚನವಿತ್ತಿತು. ಆ ಮುದುಕನು ಭೂತ ವನ್ನುದ್ದೇಶಿಸಿ, 'ಈ ಹಿತ್ತಾಳಿಯ ಹೂಜಿಯೊಳಗೆ ಭೂತರಾಜನು ಇದ್ದುದ್ದು ನಿಜವೇ?' ಎಂದು ಪ್ರಶ್ನಿಸಿದನು. ಹೌದೆಂದು ಭೂತವು ಹೇಳಿದರೂ ಮುದು ಕನು ನಂಬಲಿಲ್ಲ. 'ಆಕಾಶಕ್ಕೆ ಮುಟ್ಟುವಂತಹ ದೈತ್ಯಾಕೃತಿಯ ಭೂತವು ಈ ಸಣ್ಣ ಪಾತ್ರೆಯಲ್ಲಿ ಇರುವುದೆಂದರೇನು? ಒಂದು ಪಾದ ಕೂಡ ಅದರೊಳಗೆ ಇರಲಾರದು' ಎಂದು ಮುದುಕನು ಅಣಕಿಸಿದನು. ಆಗ ಭೂತಕ್ಕೆ ಕೋಪ ಬಂದಿತು. 'ಕಣ್ಣಾರೆ ಇನ್ನೊಮ್ಮೆ ನೋಡು' ಎಂದು ಹೇಳಿತು. ಕೂಡಲೇ ಭೂತವು ಮಾಯವಾಯಿತು. ಅದರ ಬದಲು ಕರಿ ಹೊಗೆ ಮುಸುಕಿತು. ಆ ಹೊಗೆ ಹೂಜಿಯೊಳಗೂ ಪ್ರವೇಶಿಸಿತು. ಮುದುಕನು ಬೇಗನೇ ಆ ಹೂಜಿಯ ಮುಚ್ಚಳವನ್ನು ಭದ್ರಗೊಳಿಸಿ "ಭೂತವೇ, ನೀನು ಹೂಜಿಯೊಳಗಿದ್ದೀ ಎಂದು ಈಗ ನಂಬಿದೆ. ಅಲ್ಲೇ ಇರು. ನಿನ್ನನ್ನು ನಾನು ಕೊಲ್ಲುತ್ತೇನೆ. ಸಮುದ್ರಕ್ಕೆ ಈ ಹೂಜಿಯನ್ನು ಎಸೆದು ಬಿಡುತ್ತೇನೆ" ಎಂದನು.

ಇದನ್ನು ಕೇಳಿ ಭೂತಕ್ಕೆ ಬಹಳ ಸಿಟ್ಟು ಬಂದಿತು. ಹೊರಗೆ ಬಂದು ನಾವಿಕನನ್ನು ಕೊಲ್ಲಬೇಕೆಂದು ಬಯಸಿತು. ಆದರೆ ಎಷ್ಟೆಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಆಗ ಅದು ಕೃತ್ರಿಮ ಪ್ರೀತಿಯನ್ನು ನಟಿಸುತ್ತ ಹೇಳಿತು.

" ನಾವಿಕನೇ, ನಾನು ನಿನ್ನನ್ನು ಪರೀಕ್ಷೆ ಮಾಡಲು ಕೊಲ್ಲುತ್ತೇನೆಂದು ಹೇಳಿದೆ. ನಿನ್ನನ್ನು ಕೊಂದು ನನಗೇನಾಗಬೇಕು ? ಎಷ್ಟಾದರೂ ನೀನು ಮುದುಕ, ನನಗೆ ಪ್ರಾಣದಾನ ಮಾಡಿದ ಗೆಳೆಯನು. ಈಗ ಮಿತ್ರನಾದ ನನ್ನನ್ನು ಮತ್ತೆ ಸಮುದ್ರಕ್ಕೆ ದೂಡಿ ಮಿತ್ರದ್ರೋಹವನ್ನು ಮಾಡುತ್ತೀಯಾ ? " ಎಂದು ಕುಹಕತನದ ಮಾತುಗಳನ್ನು ಹೇಳಿ ನಗತೊಡಗಿತು. ಆದರೆ, ಮುದುಕನನ್ನು ಈ ಸವಿಮಾತುಗಳಿಂದ ಮೋಸಗೊಳಿಸಲು ಸಾಧ್ಯವಿರಲಿಲ್ಲ. ಧೂರ್ತರು ನಗೆಮೊಗದಿಂದ ಸವಿಮಾತನಾಡುವರು.

" ನೀನು ದುಷ್ಟನು. ಈಗ ನಿನ್ನ ಸವಿಮಾತಿಗೆ ಮರುಳಾಗಿ ನಾನು ಜೀವದಾನ ಮಾಡಿದರೆ ನನ್ನನ್ನು ಆಹುತಿ ತೆಗೆದುಕೊಳ್ಳದೆ ಬಿಡಲಾರೆ. ಓ ಭೂತವೇ, ನಿನ್ನನ್ನು ರಕ್ಷಿಸಿದ ವೃದ್ಧ ನಾವಿಕನಾದ ನನ್ನನ್ನು ನೀನು ಕೊಲ್ಲಬಯಸಿದುದು ನ್ಯಾಯವೇ ? ' ಎಂದು ನಾವಿಕ ಪ್ರಶ್ನಿಸಿದನು. ಭೂತವು ಕ್ಷಮಿಸಬೇಕೆಂದು ನಾನಾರೀತಿಯಾಗಿ ಬೇಡಿಕೊಂಡಿತು. ಕೊನೆಗೆ ನಾವಿಕನು ನಂಬಿ ಮುಚ್ಚಳವನ್ನು ತೆರೆದನು. ಮತ್ತೆ ಹೊಗೆಯು ದಿಗಂತವನ್ನು ವ್ಯಾಪಿಸಿತು. ಭೂತವು ವಿಕಾರ ಸ್ವರೂಪ ಧರಿಸಿ, ಆ ಹಿತ್ತಾಳೆ ಹೂಜಿಯನ್ನು ಸಮುದ್ರಕ್ಕೆ ನೂಕಿತು. ಮುದುಕ ನಾವಿಕನನ್ನು ಕೊಲ್ಲದೆ, ಬೆಟ್ಟದ ಆಚೆ ಇರುವ ಒಂದು ಸರೋವರದ ಧಡಕ್ಕೆ ಕರೆದೊಯ್ದಿತು. ಅದರಲ್ಲಿ ಅಸಂಖ್ಯ ಮೀನುಗಳಿದ್ದುವು. ' ಈ ಸರೋವರದಲ್ಲಿ ದಿನಕ್ಕೆ ಒಂದಾವರ್ತಿ ಮಾತ್ರ ಬಲೆ ಬೀಸಿ ಮೀನು ಹಿಡಿ. ಅದಕ್ಕಿಂತ ಹೆಚ್ಚು ಸಲ ಬೀಸಿದರೆ ಗಂಡಾಂತರವಿದೆ. ಬಂದ ಮೀನುಗಳನ್ನು ಅರಸನಿಗೆ ಒಪ್ಪಿಸು. ಅವನು ಅಪಾರ ಧನವನ್ನು ಕೊಡುತ್ತಾನೆ. ನಡೆ ' ಎಂದು ಭೂತವು ಹೇಳಿ ಭೂಮಿಯ ಬಿರುಕಿನಲ್ಲಿ ಇಳಿದು ಹೋಯಿತು.

ವೃದ್ಧ ನಾವಿಕನು ಅತ್ಯಂತ ಸಂತೋಷದಿಂದ ಬಲೆ ಬೀಸಲು ಉದ್ಯುಕ್ತನಾದನು.

**ಶಬ್ದಾರ್ಥ:**

ಗ್ರಹಿಸು – ತಿಳಕೊಳ್ಳು; ಸೊಲೋಮನ್ – ಒಬ್ಬ ರಾಜನ ಹೆಸರು; ಕುಹಕ– ಮೋಸ; ಉಲ್ಲಂಘಿಸು – ಮೀರು.

**ಪ್ರಶ್ನೆ:**

(ಅ) ೧. ನಾವಿಕನ ಬಾಳುವೆ ಹೇಗೆ ಇದ್ದಿತು ?

೨. ಒಂದು ದಿನ ರಾತ್ರಿ ಬಲೆ ಬೀಸಿದಾಗ ಮೊದಲು ನಾವಿಕನಿಗೆ ಏಕೆ ನಿರಾಶೆಯಾಯಿತು ?

೩. ನಾಲ್ಕನೆಯ ಸಲ ಬಲೆ ಎತ್ತಿದಾಗ, ನಾವಿಕನು ಏನು ಕಂಡನು?
೪. ಭೂತವು ಹೇಗೆ ಕಾಣಿಸಿಕೊಂಡಿತು ?
೫. ನಾವಿಕನನ್ನು ಕೊಲ್ಲಲು ಭೂತವು ಏನು ಕಾರಣ ಕೊಡುತ್ತದೆ?
೬. ಭೂತದ ಮರಣದಿಂದ ಪಾರಾಗಲು ನಾವಿಕನು ಏನು ಯುಕ್ತಿ ಮಾಡಿದನು?
೭. ನಾವಿಕ ಮತ್ತು ಭೂತ ಇಬ್ಬರೂ ಕೊನೆಗೆ ಹೇಗೆ ಮಿತ್ರರಾದರು?

(ಬ) ಕೆಳಗಿನ ವಾಕ್ಯಗಳನ್ನು ಸ್ಪಷ್ಟೀಕರಿಸಿ ಬರೆಯಿರಿ.

೧. ಮುದುಕನು ಪರಿಪರಿಯಾಗಿ ಹೇಳಿದರೂ ಅದು ಬೋರ್ಗಲ್ಲ ಮೇಲೆ ಹೊಯ್ದ ನೀರಿನಂತಾಗಿ ಪರಿಣಮಿಸಿತು.
೨. ಧೂರ್ತರು ನಗೆಮೊಗದಿಂದ ಸವಿಮಾತನಾಡುವರು.

(ಕ) ಏಳುಹನ್ನೊಂದು, ಬಯಲುಗೊಳಿಸು ಈ ಪಡೆನುಡಿಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.

(ಡ) ಕೆಳಗಿನ ರೂಪರೇಷೆಯ ಸಹಾಯದಿಂದ ಒಂದು ಚಿಕ್ಕ ಕಥೆಯನ್ನು ರಚಿಸಿರಿ.
ನೀರೊಳಗೆ ಮುಳುಗಿ ಸಾಯುತ್ತಿರುವ ಒಂದು ಗುಂಗೀಹುಳ... .... ಕೆರೆಯ ದಂಡೆಯ ಮರದ ಮೇಲಿನ ಪಾರಿವಾಳ ನೋಡುತ್ತದೆ... .... ಪಾರಿವಾಳ ಒಂದು ಎಲೆಯನ್ನು ಗುಂಗೀಹುಳದತ್ತ ಒಗೆಯುತ್ತದೆ....... ಗುಂಗೀಹುಳ ಎಲೆಯ ಮೇಲೆ ಕುಳಿತು ಪಾರಾಗುತ್ತದೆ ....... ಮುಸ್ಸೊಮ್ಮೆ ಒಬ್ಬ ಬೇಟೆಗಾರ ಗುರಿಯಿಟ್ಟು ಪಾರಿವಾಳಕ್ಕೆ ಹೊಡೆಯಲು ಸಿದ್ಧನಾಗಿರುತ್ತಾನೆ........ ಗುಂಗೀಹುಳ ಕಟ್ಟನೇ ಅವನ ಕೈ ಕಡಿಯುತ್ತದೆ........ಕಲಿಯತಕ್ಕ ಪಾಠ.

**ವ್ಯಾಕರಣ:**

## ನಿಷೇಧಾರ್ಥಕ ಕ್ರಿಯಾಪದಗಳು

(ಅ) ಕೆಳಗಿನ ವಾಕ್ಯಗಳಲ್ಲಿಯ ಕ್ರಿಯಾಪದಗಳನ್ನು ನಿರೀಕ್ಷಿಸಿರಿ.

೧. ವಯಸ್ಸಿನ ಕಾರಣದಿಂದ ಬೇರೆ ಯಾವ ಕೆಲಸವೂ ನನ್ನಿಂದ ಆಗುವದಿಲ್ಲ.
೨. ಈಗ ನಿನ್ನ ಸವಿಮಾತಿಗೆ ಮರುಳಾಗಿ ನಾನು ಜೀವದಾನ ಮಾಡಿದರೆ ನನ್ನನ್ನು ಆಹುತಿ ತೆಗೆದುಕೊಳ್ಳದೆ ಬಿಡಲಾರೆ.

ಇಲ್ಲಿ ಮೊದಲನೆಯ ವಾಕ್ಯದಲ್ಲಿ ಕೆಲಸ ಮಾಡುವ ಕ್ರಿಯೆ ನಡೆಯಲಾರದು ಎಂದು ಹೇಳಿದೆ. ಎರಡನೆಯ ವಾಕ್ಯದಲ್ಲಿ ಆಹುತಿ ತೆಗೆದುಕೊಳ್ಳದೆ ಇರುವ ಕ್ರಿಯೆ ನಡೆಯಲಾರದು ಎಂದು ಹೇಳಿದೆ. ಹೀಗೆ ಒಂದು ಕ್ರಿಯೆ ನಡೆಯಲಾರದು ಎಂದು ಹೇಳುವದಕ್ಕೆ **ನಿಷೇಧ**ವೆಂದು ಹೆಸರು. ನಿಷೇಧವನ್ನೊಳಗೊಂಡ ಕ್ರಿಯಾಪದಗಳಿಗೆ ನಿಷೇಧಾರ್ಥಕ ಕ್ರಿಯಾಪದಗಳೆಂದು ಹೆಸರು.

ಮೂಲಧಾತುವಿಗೆ ನಿಷೇಧಾರ್ಥಕ ಆಖ್ಯಾತ ಪ್ರತ್ಯಯಗಳು ಹತ್ತಿ ನಿಷೇಧಾರ್ಥಕ ಕ್ರಿಯಾಪದಗಳಾಗುತ್ತವೆ.

## ನಿಷೇಧಾರ್ಥಕ ಆಖ್ಯಾತ ಪ್ರತ್ಯಯಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂಲಿಂಗ) | ಎನು | ಎವು |
| ಮಧ್ಯಮ ಪುರುಷ (ಮೂರೂಲಿಂಗ) | | ಅರಿ |
| ಪ್ರಥಮ ಪುರುಷ | | |
| ಪುಲ್ಲಿಂಗ | ಅನು | ಅರು |
| ಸ್ತ್ರೀಲಿಂಗ | ಅಳು | ಅರು |
| ನಪುಂಸಕಲಿಂಗ | ಅದು | ಅವು |

### ಹೇಳು ಧಾತುವಿನ ನಿಷೇಧಾರ್ಥಕ ರೂಪಗಳು

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ (ಮೂರೂಲಿಂಗ) | ನಾನು ಹೇಳೆನು | ನಾವು ಹೇಳೆವು |
| ಮಧ್ಯಮ ಪುರುಷ (ಮೂರೂಲಿಂಗ) | ನೀನು ಹೇಳೆ | ನೀವು ಹೇಳರಿ |
| ಪ್ರಥಮ ಪುರುಷ | | |
| ಪುಲ್ಲಿಂಗ | ಅವನು ಹೇಳನು | ಅವರು ಹೇಳರು |
| ಸ್ತ್ರೀಲಿಂಗ | ಅವಳು ಹೇಳಳು | ಅವರು ಹೇಳರು |
| ನಪುಂಸಕಲಿಂಗ | ಅದು ಹೇಳದು | ಅವು ಹೇಳವು |

ಕ್ರಿಯಾಪದಗಳ ಮುಂದೆ ಅಲ್ಲ, ಇಲ್ಲ ಮುಂತಾದ ನಿಷೇಧಾರ್ಥಕ ಶಬ್ದಗಳನ್ನು ಇಟ್ಟು ಒಮ್ಮೊಮ್ಮೆ ನಿಷೇಧಾರ್ಥಕ ರೂಪಗಳನ್ನು ಮಾಡಿಕೊಳ್ಳುತ್ತಾರೆ.

(ಬ) ಕೆಳಗಿನ ಕ್ರಿಯಾಪದಗಳ ನಿಷೇಧಾರ್ಥಕ ರೂಪಗಳನ್ನು ಕೊಡಿರಿ.

ಬಾ; ಹೋಗು; ನಡೆ; ನುಡಿ; ಓಡು; ಕುಡಿ; ಜಿಗಿ; ತಿನ್ನು, ಹಿಡಿ; ಬೇಡು.

# ೨೪. ಆಕಾಶವಾಣಿ

[ ನಮ್ಮ ಪುರಾಣಗಳಲ್ಲಿ ಅಶರೀರವಾಣಿ, ಆಕಾಶವಾಣಿಗಳ ಬಗ್ಗೆ ಓದಿದಾಗ, ಕೇಳಿದಾಗ, ಅದೆಲ್ಲ ನಮ್ಮ ಪೂರ್ವಜರ ಒಂದು ನಂಬಲಾಗದ ಕಲ್ಪನೆ ಎಂದು ನಾವು ಆಕ್ಷೇಪಿಸುತ್ತಿದ್ದೆವು. ಆದರೆ ಇಂದು ರೇಡಿಯೋ ಬಳಕೆಯಲ್ಲಿ ಬಂದುದನ್ನು ನೋಡಿದರೆ ನಮ್ಮ ಪುರಾಣಗಳಲ್ಲಿ ಬಂದ ವಿಷಯಗಳಲ್ಲಿ ತುಸುಮಟ್ಟಿಗೆ ಸತ್ಯವಿರಬೇಕೆಂದು ನಮಗೆ ಅನಿಸತೊಡಗಿದೆ. ಹೀಗೆ ನಮ್ಮನ್ನು ವಿಚಾರಕ್ಕೆ ಹಚ್ಚಿದ ಹಾಗೂ ಈಗಿನ ಕಾಲದ ಒಂದು ಅದ್ಭುತವಾದ ರೇಡಿಯೋದ ಪರಿಚಯವು ನಿಮಗೆ ಈ ಪಾಠದಲ್ಲಿ ಆಗುತ್ತದೆ. 'ರೇಡಿಯೋ' ಅಂದರೆ ಕನ್ನಡದಲ್ಲಿ ಬಾನುಲಿ, ಆಕಾಶವಾಣಿ, ನಭೋವಾಣಿ ಎಂದು ಅರ್ಥವಾಗುತ್ತದೆ. ]

• • •

ವಸುದೇವ–ದೇವಕಿಯರ ಮದುವೆಯ ಮಂಗಲಸಮಯ. ಅವರ ಮೆರವಣಿಗೆ ರಾಜಬೀದಿಯಲ್ಲಿ ವೈಭವದಿಂದ ಸಾಗಿತ್ತು. ಆಗ "ದೇವಕಿಯ ಗರ್ಭದಿಂದ ಹುಟ್ಟುವ ಮಗುವಿನಿಂದಲೇ ಕಂಸಸಂಹಾರ" ಎಂಬ ಯಾವದೋ ಅಶರೀರವಾಣಿಯೊಂದು ಆಕಾಶದಲ್ಲಿ ಗರ್ಜಿಸಿತು. ಅದು ಅಶರೀರವಾಣಿ, ಆಕಾಶವಾಣಿ, ದೇವವಾಣಿ. ನಿಶ್ಚಿತವಾಗಿ ಸಂಭವಿಸುವ ಮಾತನ್ನೇ ಆ ದೇವವಾಣಿಯಲ್ಲಿ ಹೇಳಲಾಗಿತ್ತು. ಅಂತೆಯೇ ಕೃಷ್ಣಲೀಲೆ ನಡೆದು, ಕೊನೆಗೆ ಕಂಸನ ಸಂಹಾರವಾಯಿತು.

ಪುರಾಣ ಕಾಲದಲ್ಲಿ ಆಕಾಶವಾಣಿಯನ್ನು ಕೇಳಿ ಜನರು ಜನರು ಬೊಟ್ಟು ಕಚ್ಚುತ್ತಿದ್ದರು. ದೇವಲೋಕದಿಂದ ಬಂದು ಸುರರು ಅಮರವಾದ ಮಾತು ಹೇಳುತ್ತಾರೆಂದು ಅವರು ನಂಬಿದ್ದರು. ಆ ದೇವಲೋಕವು ಎಲ್ಲಿದೆಯೋ! ದೇವತೆಗಳು ಬಂದು ಹೇಗೆ ಮಾತನಾಡುತ್ತಿದ್ದರೋ! ಅದನ್ನು ಪುರಾಣಕಾಲದ ಆ ಪ್ರಾಚೀನ ಜನರಿಗೇ ಬಿಟ್ಟುಬಿಡೋಣ. ಆದರೆ ಇದೀಗ ಆ ದೇವವಾಣಿಯು ಯಂತ್ರವಾಣಿಯಾಗಿ ದೇವಲೋಕವೇ ಇಳಿಗಿಳಿದು ಬಂದಂತಾಗಿದೆ. ನಮ್ಮ ವಾಣಿಯು ಆಕಾಶದಲ್ಲಿ ಹಕ್ಕಿಯಂತೆ ರೆಕ್ಕೆಗೊಂಡು ಹಾರಿಹೋಗಿ ದೂರ ದೂರ ಪ್ರತಿ ದೇಶದಲ್ಲಿಯೂ ಪ್ರತಿ ಮನೆಯಲ್ಲಿಯೂ ಕೇಳಿಸುವಂತಾಗಿದೆ. ಯಾವುದು ಅಸಾಧ್ಯವೆಂದು ಜನರು ತಿಳಿದುಕೊಂಡಿದ್ದರೋ ಅದು ಸಾಧ್ಯವಿದೆಯೆಂಬುದನ್ನು ಆಧುನಿಕ ವಿಜ್ಞಾನಿಗಳು ಸಿದ್ಧಮಾಡಿ ತೋರಿಸಿದ್ದಾರೆ. ರೇಡಿಯೋ ಅಥವಾ ಆಕಾಶವಾಣಿ ವಿಜ್ಞಾನಿಗಳ ಅದ್ಭುತ ಸಾಹಸವಾಗಿದೆ.

ಭಾರತದಲ್ಲಿ ಅನೇಕ ಆಕಾಶವಾಣಿ ಕೇಂದ್ರಗಳಿರುವವು. ಧಾರವಾಡ, ಮುಂಬಯಿ, ಮೈಸೂರ, ಮದ್ರಾಸ, ಹೈದರಾಬಾದ ಈ ಆಕಾಶವಾಣಿ ಕೇಂದ್ರ

ಗಳಿಂದ ಕನ್ನಡ ಕಾರ್ಯಕ್ರಮಗಳನ್ನು ಬಿತ್ತರಿಸುವರು. ಯಾವುದಾದರೊಂದು ಆಕಾಶವಾಣಿ ಕೇಂದ್ರಕ್ಕೆ ನಾವು ಭೆಟ್ಟಿಕೊಟ್ಟರೆ ಈ ಕಾರ್ಯವು ಹೇಗೆ ನಡೆಯುತ್ತದೆಂಬುದು ತಿಳಿಯುವದು.




ಒಳಗಿನ ಧ್ವನಿಯು ಹೊರಗೆ ಹೋಗದಂತೆ ಮತ್ತು ಹೊರಗಿನ ಧ್ವನಿಯು ಒಳಗೆ ಬರದಂತೆ ಭದ್ರವಾಗಿರುವ ಕೋಣೆಯಲ್ಲಿ ಆಕಾಶವಾಣಿ ಕಾರ್ಯಕ್ರಮಗಳು ಜರುಗುವವು. ಈ ಕೋಣೆಗಳಲ್ಲಿ ಭಾಷಣ, ಸಂಗೀತ, ನಾಟಕ ಮುಂತಾದ ಕಾರ್ಯಕ್ರಮಗಳು ಸೂಕ್ಷ್ಮಶ್ರಾವಕ (ಮೈಕ್ರೋಫೋನ್) ದ ಮುಂಗಡೆ ಜರುಗುವವು. ಈ ಕಾರ್ಯಕ್ರಮಗಳಲ್ಲಿ ಹೊರಟ ಧ್ವನಿಯ ಅಲೆಗಳು ಸೂಕ್ಷ್ಮಶ್ರಾವಕದಲ್ಲಿ ಹಾಯ್ದು ವಿದ್ಯುತ್ತಿನ ಅಲೆಗಳ ರೂಪ ಧರಿಸಿ ಹರಿಯುವುವು. ಮತ್ತು ಧ್ವನಿಯ ಪರಿಳಿತಗಳಿಗೆ ಅನುಗುಣವಾಗಿ ಹರಿಯುವ ಈ ವಿದ್ಯುತ್ ಪ್ರವಾಹದಲ್ಲಿಯೂ ಪರಿಳಿತಗಳಾಗುವವು.



ಕಾರ್ಯಕ್ರಮಗಳ ಕೋಣೆಯೊಳಗಿಂದ ಹರಿದು ಬಂದ ಪ್ರವಾಹವು ಆಕಾಶವಾಣಿ ಕೇಂದ್ರದಲ್ಲಿರುವ ಬಿತ್ತರಿಸುವ ಕಾರ್ಯಾಲಯಕ್ಕೆ ಬರುವದು. ಧ್ವನಿಯ ಪರಿಣಾಮವಾಗಿ ವ್ಯತ್ಯಸ್ಥಗೊಂಡ ಪ್ರವಾಹವು ಈ ಕಾರ್ಯಾಲಯದಲ್ಲಿರುವ "ವರ್ಧಕ ಯಂತ್ರ" ಎಂಬ ಉಪಕರಣದ ಮೂಲಕ ಹೆಚ್ಚಿಗೆ ಬಲಗೊಳ್ಳುವದು.

ಆಕಾಶವಾಣಿ ಕೇಂದ್ರದಲ್ಲಿ ಕಾಣುವ ಮೂರನೆಯ ವಿಭಾಗವೆಂದರೆ ಆಕಾಶತಂತಿ ಎಂಬ ಸರಿಗೆ. ಈ ಸರಿಗೆ ಆಕಾಶವನ್ನೇ ಮುಟ್ಟುತ್ತದೇನೋ ಎಂಬು-ವಷ್ಟು ಎತ್ತರವಾಗಿರುತ್ತದೆ. ಒಂದು ವಿಶೇಷ ಯಂತ್ರ ಸಾಧನೆಯಿಂದ ಈ ಸರಿಗೆಯಲ್ಲಿ ವಿದ್ಯುತ್ಪ್ರವಾಹವನ್ನು ಹರಿಯಿಸುತ್ತಾರೆ. ಪ್ರಶಾಂತವಾದ ಒಂದು ಕೊಳದ

ನೀರಿನಲ್ಲಿ ಮರದ ತುಂಡು ಲಂಬವಾಗಿ ಮೇಲೆ ಕೆಳಗೆ ತೇಲುತ್ತಿದ್ದರೆ, ಅದರ ಸುತ್ತಲೂ ಅಲೆಗಳು ಪಸರಿಸಿ, ಕೊಳದ ದಡಗಳಿಗೆ ಬಡಿಯುತ್ತವೆ. ಅದರಂತೆಯೆ ವಿದ್ಯುತ್ ಪ್ರವಾಹದಿಂದ ವಿದ್ಯುದಲೆಗಳು ಹುಟ್ಟಿ ಈ ಸರಿಗೆಯ ತಂತಿಯ ಸುತ್ತಲು ಹಬ್ಬುತ್ತವೆ. ಮತ್ತು ವರ್ಧಕ ಯಂತ್ರದಿಂದ ಬಲಗೊಂಡ ಧ್ವನಿಯ ವಿದ್ಯುದಲೆಗಳು ಆಕಾಶ ತಂತಿಯಲ್ಲಿ ಮೊದಲೇ ಹರಿಯುತ್ತಿರುವ ವಿದ್ಯುದಲೆಗಳಲ್ಲಿ ಬೆರೆತು ಸುತ್ತಲೂ ಪ್ರಸರಣ ಹೊಂದುವವು.



ಆಕಾಶ ತಂತಿಯಿಂದ ಆಕಾಶದಲ್ಲಿ ವಿದ್ಯುತ್ ಅಲೆಗಳ ರೂಪವಾಗಿ ಹೊರಹೊಮ್ಮಿದ ಧ್ವನಿಯು ದೂರ ದೂರ ಹರಿದು ಹೋಗಲು ಕಾರಣವೇನು ? ಪ್ರಪಂಚದಲ್ಲಿರುವ ಎಲ್ಲ ವಸ್ತುಗಳ ಹೊರಗೂ–ಒಳಗೂ ಸಮಸ್ತಾವಕಾಶವನ್ನು ಆವರಿಸಿರುವ, ಅದೃಶ್ಯವಾದ, ಭಾರರಹಿತವಾದ, ‘ ಈಥರ ’ ಎಂಬ ಪದಾರ್ಥವಿದೆ. ಈಥರಿನ ಮೂಲಕ ವಿದ್ಯುತ್ತಿನ ರೂಪತಾಳಿದ ಧ್ವನಿಯು ಸೆಕಂದಿಗೆ ೧೮೬,೦೦೦ ಮೈಲುಗಳಂತೆ ಚಲಿಸಬಲ್ಲದು. ಹೀಗೆ ವಿದ್ಯುತ್ ಅಲೆಗಳು ಆಕಾಶ ಮಾರ್ಗದಲ್ಲಿ ಚಲಿಸುತ್ತವೆ.

ವಿದ್ಯುತ್ ಅಲೆಗಳಲ್ಲಿ ನಮ್ಮ ಧ್ವನಿಯು ಚಲಿಸುವ ರೀತಿಯನ್ನು ಕಂಡುಕೊಳ್ಳಲು ನಾವು ಒಂದು ಹೋಲಿಕೆಯನ್ನು ತೆಗೆದುಕೊಳ್ಳುವಾ. ನಿಧಾನವಾಗಿ ನಡೆಯುವ ಕುಂಟನನ್ನು ಧ್ವನಿಯ ಅಲೆಗಳಿಗೆ ಹೋಲಿಸಬಹುದು. ಮತ್ತು ವೇಗದಿಂದ ಓಡುವ ಕುದುರೆಯನ್ನು ವಿದ್ಯುತ್ತಿನ ಅಲೆಗಳಿಗೆ ಹೋಲಿಸಬಹುದು. ಕುಂಟನು ಕುದುರೆಯ ಮೇಲೆ ಕುಳಿತು ಹೋದರೆ, ಕುದುರೆಯಂತೆಯೇ ಕುಂಟನ ವೇಗವೂ ಹೆಚ್ಚುವದು. ಹಾಗೆಯೇ ಧ್ವನಿಯ ಅಲೆಗಳು. ಕುಂಟನು ಕುದುರೆಯ ವೇಗದಿಂದ ಸಾಗಲು ಅವನನ್ನು ಕುದುರೆಯ ಮೇಲೆ ಕೂಡ್ರಿಸುವಂತೆ ವಿದ್ಯುತ್ ಕುದುರೆಯ ಮೇಲೆ ಧ್ವನಿ–ಕುಂಟನನ್ನು ಕೂಡ್ರಿಸುವೆವು. ಗ್ರಾಹಕದಲ್ಲಿ ಕುದುರೆಯನ್ನು ಹಿಂದೆ ಬಿಟ್ಟು ಕುಂಟನು ಮುಂದೆ ಬರುವ ವ್ಯವಸ್ಥೆಯು ಇರುತ್ತದೆ. ಅಂದರೆ ನಮ್ಮ ಮನೆಗಳಲ್ಲಿ ಕಂಡುಬರುವ ರೇಡಿಯೋ ಗ್ರಾಹಕದಲ್ಲಿ ಆಕಾಶವಾಣಿ ಕೇಂದ್ರದಿಂದ ಬಂದ ವಿದ್ಯುತ್ತಿನ ಅಲೆಗಳು ಪುನಃ ಧ್ವನಿಯ ಅಲೆಗಳಾಗಿ ಮಾರ್ಪಾಟಾಗುವವು. ಮತ್ತು ಆಕಾಶವಾಣಿ ಕೇಂದ್ರದಲ್ಲಿ ನಡೆದ ಕಾರ್ಯಕ್ರಮುಗಳು ಕ್ಷಣಾರ್ಧದಲ್ಲಿಯೇ ನಮ್ಮ ಮನೆಯಲ್ಲಿ ಕೇಳಬರುವವು.

ಆಕಾಶವಾಣಿಯನ್ನು ಪ್ರತ್ಯಕ್ಷ ಉಪಯೋಗಕ್ಕೆ ತಂದ ಕೀರ್ತಿ ಮಾರ್ಕೊನಿಯದಾಗಿದೆ. ಮಾರ್ಕೊನಿಯು ಇಟಲಿ ದೇಶದವನು. ೧೮೯೫ರಲ್ಲಿ ಅವನು ಮೊದಲನೆಯ ಪ್ರಯೋಗಮಾಡಿ ತೋರಿಸಿ ಅತ್ಯಾಶ್ಚರ್ಯವನ್ನುಂಟು ಮಾಡಿದನು. ಐವತ್ತೈದು ವರ್ಷಗಳಲ್ಲಿ ಆಕಾಶವಾಣಿಯು ಪ್ರಚಾರಗೊಂಡು ಜನತೆಗೆ ಅತ್ಯಂತ ಪ್ರಯೋಜನಕಾರಿಯಾಗಿದೆ.

ಸಾವಿರಾರು ಮೈಲು ದೂರದಲ್ಲಿರುವ ಜನರ ಹಾಡುಗಳನ್ನು, ಮಾತುಗಳನ್ನು ಇಂದು ನಾವು ಆಕಾಶವಾಣಿಯಿಂದ ಕೇಳಲು ಶಕ್ತರಾಗಿದ್ದೇವೆ. ಸರಕಾರದ ಪ್ರಚಾರ, ದೇಶ-ವಿದೇಶದ ವಾರ್ತೆ, ಸಂಗೀತ, ನಾಟಕ ಮುಂತಾದವುಗಳು ಆಕಾಶವಾಣಿ ಕೇಂದ್ರದಲ್ಲಿ ನಡೆಯುತ್ತವೆ. ಹಳ್ಳಿಗರನ್ನು ಸುಧಾರಿಸಲು, ಬಾಲಕರಿಗೆ ಶಿಕ್ಷಣ ಕೊಡಲು, ಸಾರ್ವಜನಿಕ ಸ್ಥಳಗಳಲ್ಲಿ ಮನರಂಜಿಸಲು, ಬೇರೆ ಬೇರೆ ದೇಶದ ಭಾಷೆಗಳನ್ನು ಅರಿತುಕೊಳ್ಳಲು ಆಕಾಶವಾಣಿಯು ಶ್ರೇಷ್ಠ ಸಾಧನವಾಗಿದೆ.

ಒಂದು ವೇಳೆ ಧ್ರುವನಿಗೆ ಪ್ರತ್ಯಕ್ಷನಾದಂತೆ, ದೇವರು ಬಂದು "ನೀನು ಬೇಕಾದ ಒಂದು ವರ ಬೇಡಿಕೋ, ಕೊಡುತ್ತೇನೆ" ಎಂದು ಅಂದರೆ "ನೀವು ಏನು ಕೇಳುವಿರಿ? ಒಂದು ರೇಡಿಯೋ ಕೇಳಿರಿ. ಅದೊಂದು ಮನೆಯಲ್ಲಿದ್ದರೆ ಸಾಕು. ಜ್ಞಾನ, ಮನರಂಜನೆ ಎಲ್ಲವೂ ದೊರೆಯುವವು.

**ಶಬ್ದಾರ್ಥ:**

ಅಶರೀರವಾಣಿ – ಶರೀರವಿಲ್ಲದೆ ಬರಿ ಧ್ವನಿಮಾತ್ರ ಕೇಳುವ ಮಾತು. ಆಕಾಶವಾಣಿ – ಮುಗಿಲಿನಲ್ಲಿ ಕೇಳಬರುವ ಮಾತು; ಬಿತ್ತರಿಸು – ಎಲ್ಲ ಕಡೆಗೂ ಹಬ್ಬಿಸು; ವ್ಯತ್ಯಸ್ಥಗೊಳ್ಳು – ಹೆಚ್ಚುಕಡಿಮೆಯಾಗು; ಅವಕಾಶ – ಸ್ಥಳ.

**ಪ್ರಶ್ನೆ:**

೧. ವಸುದೇವ–ದೇವಕಿಯರ ಮದುವೆಯ ಸಮಯದಲ್ಲಿ ಏನೇನು ನಡೆಯಿತು?
೨. ದೇವವಾಣಿಯು ಇಂದು ಯಂತ್ರವಾಣಿ ಹೇಗಾಗಿದೆ?
೩. ಆಕಾಶವಾಣಿಯು ಹೇಗೆ ಕಾರ್ಯ ಮಾಡುವದು? ಸಂಕ್ಷಿಪ್ತವಾಗಿ ವಿವರಿಸಿರಿ.
೪. ಆಕಾಶವಾಣಿಯನ್ನು ಮೊದಲು ಪ್ರತ್ಯಕ್ಷ ಉಪಯೋಗಕ್ಕೆ ತಂದವರು ಯಾರು? ಇಲ್ಲಿಯವರೆಗೂ ಅದರಲ್ಲಿ ಏನೇನು ಪ್ರಗತಿಯಾಗಿದೆ?
೫. ಆಕಾಶವಾಣಿಯ ಉಪಯೋಗವೇನು?

## ಅವ್ಯಯ ಕ್ರಿಯಾಪದಗಳು

(ಅ) ಕೆಳಗಿನ ವಾಕ್ಯಗಳಲ್ಲಿಯ ಕ್ರಿಯಾಪದಗಳನ್ನು ನಿರೀಕ್ಷಿಸಿರಿ.

೧) ಭಾರತದಲ್ಲಿ ಬಹಳ ಆನೆಗಳು **ಉಂಟು.**
೨) ಅವನಲ್ಲಿ ಹಣವು ಇಲ್ಲ.
೩) ನನಗೆ ಒಂದು ಚೆಂಡು **ಬೇಕು.**
೪) ಇನ್ನು ಆಟ **ಸಾಕು.**
೫) ಆ ಮನೆ **ಬೇಡ.**

ಇಲ್ಲಿ ಬಂದ ಕ್ರಿಯಾಪದಗಳಿಗೆ ಯಾವ ಆಖ್ಯಾತ ಪ್ರತ್ಯಯಗಳು ಹತ್ತಿಲ್ಲ. ಈ ಕ್ರಿಯಾಪದಗಳು ಮೂಲ ರೂಪದಲ್ಲಿಯೇ ಉಳಿದಿವೆ. ಕ್ರಿಯಾಪದಗಳಿಗೆ ಕರ್ತೃವಿನ ಪುರುಷ – ಲಿಂಗ – ವಚನಗಳು ಹತ್ತುತ್ತವೆಂಬುದು ನಿಮಗೆ ಈಗಾಗಲೇ ತಿಳಿದಿದೆ. ಕರ್ತೃವಿನ ಪುರುಷ – ಲಿಂಗ – ವಚನಗಳು ಬದಲಾದಂತೆ ಕ್ರಿಯಾಪದಗಳ ರೂಪಗಳೂ ಬದಲಾಗುತ್ತವೆಂಬುದನ್ನೂ ನೀವು ತಿಳಿದಿರುವಿರಿ. ಆದರೆ ಇಲ್ಲಿ ಬಂದ ಕ್ರಿಯಾಪದಗಳು ಕರ್ತೃವಿನ ಪುರುಷ ಲಿಂಗ ವಚನಗಳ ಕೂಡ ತಾವೂ ಬದಲಾಗುವದಿಲ್ಲ. ಆದ್ದರಿಂದ ಈ ಕ್ರಿಯಾಪದಗಳನ್ನು **ಅವ್ಯಯ ಕ್ರಿಯಾಪದ**ಗಳೆಂದು ಕರೆಯುತ್ತಾರೆ.

ಉಂಟು; ಇಲ್ಲ; ಬೇಕು; ಬೇಡ; ಸಾಕು; ಇವೆಲ್ಲ ಅವ್ಯಯ ಕ್ರಿಯಾಪದಗಳು.

(ಬ) ಕೆಳಗಿನ ವಾಕ್ಯಗಳಲ್ಲಿ ತೆರವಿದ್ದ ಸ್ಥಳದಲ್ಲಿ ಯೋಗ್ಯವಾದ ಅವ್ಯಯ ಕ್ರಿಯಾಪದಗಳನ್ನು ತುಂಬಿರಿ.

೧) ಅರಬಸ್ತಾನದಲ್ಲಿ ಒಂಟೆಗಳು........
೨) ನನಗೆ ಈಗ ಬಹಳ ದಣಿವಾಗಿದೆ. ಆದ್ದರಿಂದ ನನಗೆ ವಿಶ್ರಾಂತಿ... ....
೩) ನಮ್ಮ ಮನೆಯಲ್ಲಿ ಬಾನುಲಿ ಪೆಟ್ಟಿಗೆಯು . ....
೪) ನನಗೆ ಇಷ್ಟು ಹಣವು........
೫) ಆ ಪುಸ್ತಕವು ನನಗೆ........



# ೨೫. ಶಾಂತಿಯ ಆರಾಧಕ

• • •

೧೯೫೨ನೆಯ ವರ್ಷದ ನೋಬೆಲ್ ಶಾಂತಿ ಪಾರಿತೋಷಕವು ಡಾ. ಅಲ್ಬರ್ಟ ಸ್ವಾಯಿಟ್ಝರ್ ಎಂಬವರಿಗೆ ದೊರೆಯಿತು. ಅವರಂಥ ಯೋಗ್ಯ ವ್ಯಕ್ತಿಗೆ ಈ ಪಾರಿತೋಷಕ ಹಿಂದೆಂದೂ ಲಭಿಸಿರಲಿಲ್ಲ. ಸ್ವಾಯಿಟ್ಝರ್ ಅಂದರೆ ಯಾರು ಎಂದು ಜಗತ್ತು ಆಗ ಕುತೂಹಲದಿಂದ ಕೇಳಿತು.



ಶಾಂತಿಯ ಹಿರಿಯ ಆರಾಧಕನೆನಿಸಿದ ಸ್ವಾಯಿಟ್ಝರರು ಜರ್ಮನಿಯ ಅಲ್ಸೇನ್‌ಲೋರೆ ಎಂಬಲ್ಲಿ ಒಂದು ಧರ್ಮೋಪದೇಶಕ ಕುಟುಂಬದಲ್ಲಿ ಜನ್ಮ ತಳೆದರು. ಬಾಲ್ಯದಿಂದಲೂ ಸ್ವಾಯಿಟ್ಝರರು ಮೃದುಹೃದಯಕ್ಕೆ ತುಂಬಾ ಹೆಸರಾಗಿದ್ದರು. ದೇವನಿರ್ಮಿತ ಸೃಷ್ಟಿಯ ಎಲ್ಲ ಪ್ರಾಣಿಗಳನ್ನು ಅವರು ಒಂದೇ ಬಗೆಯ ಭಾವನೆಯಿಂದ ಪ್ರೀತಿಸಿದರು. ತಮ್ಮ ಹಳ್ಳಿಯ ಹುಡುಗರಿಗೆ ಕಾಲ್ಮರೆ ತೊಡುವ ಯೋಗ್ಯತೆ ಇರಲಿಲ್ಲವೆಂದು ಅವರೂ ಕೂಡ ಕಾಲ್ಮರೆ ಮೆಟ್ಟುವುದನ್ನು ಬಿಟ್ಟು ಬಿಟ್ಟಿದ್ದರು. " ದೇವರೇ, ಉಸಿರಾಡಿಸುವ ಎಲ್ಲ ಪ್ರಾಣಿಗಳನ್ನು ಹರಸು " ಎಂದು ಅವರು ಪ್ರತಿನಿತ್ಯ ನಿದ್ದೆಹೋಗುವ ಮೊದಲು ಪ್ರಾರ್ಥಿಸುತ್ತಿದ್ದರು.

ಎಂಟನೆಯ ವರ್ಷದೊಳಗಾಗಿಯೇ ಸ್ವಾಯಿಟ್ಝರರಿಗೆ ಬಾಯಬಲ್ಲಿನ ಸಂಪೂರ್ಣಜ್ಞಾನ ಪ್ರಾಪ್ತವಾಯಿತು. ಈ ಧರ್ಮಶಾಸ್ತ್ರದಲ್ಲಿಯೇ ಮುಂದೆ ಅವರು ಡಾಕ್ಟರ ಪದವಿಯನ್ನು ಪಡೆದರು. ಧರ್ಮಶಾಸ್ತ್ರ ಹಾಗೂ ತತ್ವಶಾಸ್ತ್ರ ಗಳನ್ನು ಗೆದುಕೊಂಡು ಸ್ಟ್ರಾಸಬೋ ವಿಶ್ವವಿದ್ಯಾನಿಲಯದಲ್ಲಿ ಅವರು ಅಭ್ಯಾಸ ಮಾಡಿದರು. ಅಭ್ಯಾಸ ನಡೆಸುತ್ತಿದ್ದಂತೆಯೇ ಅವರು ಪಿಯಾನು ವಾದನದಲ್ಲಿ ಪರಿಣತಿಯನ್ನು ಪಡೆದರು. ಯುರೋಪಿನಲ್ಲಿಯೇ ಅವರು ಶ್ರೇಷ್ಠ ವಾದನ ನಿಪುಣರೆನ್ನುವ ಪ್ರಖ್ಯಾತಿ ಹಬ್ಬಿಕೊಂಡಿತು.

ಬಾಯಬಲ್ ಸಂದೇಶವನ್ನು ಕುರಿತು ಸ್ವಾಯಿಟ್ಝರರು ತಮ್ಮ ಯೌವನದ ಲ್ಲೆಲ್ಲ ಆಲೋಚಿಸಿದರು. ಎಲ್ಲಿ ಸೇವೆ ಮಾಡಬೇಕೆನ್ನುವುದು ತೋಚದಿದ್ದರೂ ಒಟ್ಟಿನಲ್ಲಿ ಮಾನವ ಸೇವೆಗೆ ತಮ್ಮ ಜೀವನವನ್ನು ಮೀಸಲಿಡಬೇಕೆಂದು ಅವರು ನಿರ್ಧಾರಮಾಡಿದರು. ಜೀಸಸ್ ಕ್ರೈಸ್ತ ಬೋಧೆ ಮಾಡಿದುದನ್ನು ತಾವು ಆಚರಿಸಿ

ತೋರಿಸುವುದಾಗಿ ಅವರು ಪ್ರತಿಜ್ಞೆ ಕೈಕೊಂಡರು. ಅಭ್ಯಾಸಕ್ಕಾಗಿ ತಮ್ಮ ಜೀವನದ ಮೂವತ್ತು ವರುಷ ಸಾಕೆಂದು ಅವರು ತೀರ್ಮಾನ ಮಾಡಿದರು.

ಮೂವತ್ತು ವರುಷ ಮುಟ್ಟಿದಾಗಲೇ ಸ್ವಾಯಿಟ್ಝರರು ಒಳ್ಳೆಯ ಪ್ರತಿಭಾವಂತರೆನ್ನುವ ಪ್ರಖ್ಯಾತಿ ಜಗತ್ತಿನಲ್ಲಿ ಹಬ್ಬಿಹೋಗಿತ್ತು. ಸಂಗೀತ, ಧರ್ಮ ಹಾಗೂ ತತ್ವಶಾಸ್ತ್ರ, ಡಾಕ್ಟರಿಕೆ ಈ ಮೂರೂ ವಿಷಯಗಳಲ್ಲಿ ಅವರು ಪದವಿಯನ್ನು ಪಡೆದಿದ್ದರು. ಧರ್ಮ ಹಾಗೂ ತತ್ವಶಾಸ್ತ್ರಗಳನ್ನು ಕುರಿತು ಅವರು ಬರೆದ ಗ್ರಂಥಗಳು ಜನತೆಯ ಮನಸ್ಸಿನ ಮೇಲೆ ಅಪೂರ್ವ ಪರಿಣಾಮ ಮಾಡಿದ್ದವು. ಪಿಯಾನುವಾದನವನ್ನು ಕುರಿತು ಅವರು ಬರೆದ ಗ್ರಂಥವು ಇಂದಿಗೂ ಆಧಾರ ಗ್ರಂಥವೆನಿಸಿದೆ.

ಪ್ಯಾರಿಸಿನೊಳಗಿನ ಒಂದು ಶಿಲಾಪ್ರತಿಮೆ ಸ್ವಾಯಿಟ್ಝರರ ಸೇವಾಕ್ಷೇತ್ರವನ್ನು ತೋರಿಸಿಕೊಟ್ಟಿತು. ಬಿಳಿಯ ಸವಾರನೊಬ್ಬನು ನಿಗ್ರೋ ಮನುಷ್ಯನನ್ನು ಹತ್ತಿ ತುಳಿದು ನಿಂತ ಚಿತ್ರವು ಅವರ ಮನಸ್ಸನ್ನು ಕಲುಕಿತು. ನಿಗ್ರೋಗಳಿಗೆ ಸರಿಸಮಾನತೆಯನ್ನು ತಂದುಕೊಡುವುದೇ ತಮ್ಮ ಜೀವಮಾನದ ಹೋರಾಟವಾಗಬೇಕೆಂದು ಅವರು ಬಗೆದರು. ನಿಗ್ರೋಗಳಿಗೆ ಆರೋಗ್ಯ ದೊರಕಿಸಿ ಕೊಡುವುದಕ್ಕಿಂತ ಪವಿತ್ರ ಕಾರ್ಯ ಯಾವುದೂ ಇಲ್ಲ; ಅವರ ಸೇವೆ ಮಾಡಲು ತಾವು ವೈದ್ಯಕೀಯ ಅಭ್ಯಾಸ ಮಾಡಬೇಕೆಂದು ನಿಶ್ಚಯಿಸಿದರು.

ಮೂವತ್ತನೆಯ ವಯಸ್ಸನ್ನು ದಾಟಿದ ಸ್ವಾಯಿಟ್ಝರರು ವೈದ್ಯಕೀಯ ಅಭ್ಯಾಸಕ್ಕೆ ತೊಡಗಿದರು. ಈ ಅಭ್ಯಾಸದಲ್ಲಿ ಅವರ ಎಂಟು ವರುಷ ಕಳೆದು ಹೋದವು. ೧೯೧೨ರಲ್ಲಿ ಅವರು ತಮ್ಮ ನಾಲ್ಕನೆಯ ಡಾಕ್ಟರೇಟ್ ಪದವಿಯನ್ನು ಪಡೆದರು. ಆಫ್ರಿಕೆಗೆ ಹೋಗಿ ಮಾನವಸೇವೆ ಮಾಡಬೇಕೆನ್ನುವ ಎಂಟು ವರ್ಷಗಳ ಹಿಂದಿನ ಅವರ ನಿರ್ಧಾರ ಮದುವೆಯಾದ ಮೇಲೂ ಬದಲಾಗಲಿಲ್ಲ. ೧೯೧೩ರಲ್ಲಿ ಗುಡ್ ಫ್ರಾಯಡೇ ದಿವಸ ತಮ್ಮ ಹೆಂಡತಿ ಹೆಲನ್‌ಳೊಂದಿಗೆ ಫ್ರೆಂಚ್ ಸ್ವಾಷ್ಟ್ಯವಾದ ಮಧ್ಯ ಆಫ್ರಿಕೆಯ ಲ್ಯಾಂಬರೀನ ಎಂಬಲ್ಲಿಗೆ ಪ್ರಯಾಣ ಬೆಳೆಸಿದರು.

ಲ್ಯಾಂಬರೀನಿನಲ್ಲಿ ಅವರು ಪ್ರತಿಕೂಲ ಪ್ರಕೃತಿಯೊಂದಿಗೆ ಹಾಗೂ ಪ್ರತಿಕೂಲ ಮಾನವ ಸ್ವಭಾವದೊಂದಿಗೆ ಹೋರಾಡಬೇಕಾಯಿತು. ಭಾಷೆ ತಿಳಿಯದ ಜನರ ಮಧ್ಯದಲ್ಲಿ ನಿಂತು ತಮ್ಮನ್ನು ತಿಳಿಸಿಕೊಡುವ ಪ್ರಯತ್ನ ಮಾಡುತ್ತ ಸ್ವಾಯಿಟ್ಝರರು ಒಂದು ಚಿಕ್ಕ ಆಸ್ಪತ್ರೆಯನ್ನು ತಾವೇ ತಮ್ಮ ಕೈಗಳಿಂದ ಕಟ್ಟಿ

೪) ಪ್ರತಿದಿನ ನೀವು ಹಾಲನ್ನು ಕುಡಿಯ**ಬಹುದು**
೫) ನೀವೆಂದೂ ಆಲಸಿಗರಾಗಿ ಕೂಡ**ಲಾಗದು**

ಇಲ್ಲಿ ಬಂದ ಕ್ರಿಯಾಪದಗಳು ಸಂಪೂರ್ಣವಾಗಿ ಸ್ವತಂತ್ರವಾಗಿರುವ ಕ್ರಿಯಾಪದಗಳಲ್ಲ. ಇರು, ಮಾಡು, ಹೇಳು, ಬರು, ಕುಡಿ, ಕೂಡು ಈ ಮುಖ್ಯ ಕ್ರಿಯಾಪದಗಳಿಗೆ ಬೇಕು, ಬಾರದು, ಕೂಡದು, ತಕ್ಕದ್ದು, ಬಹುದು, ಆಗದು ಎಂಬ ಕ್ರಿಯಾಪದಗಳು ಸಹಾಯಕವಾಗಿ ಬಂದಿವೆ. ಹೀಗೆ ಮುಖ್ಯ ಕ್ರಿಯಾಪದಗಳಿಗೆ ಸಹಾಯಕವಾಗಿ ಬರುವ ಕ್ರಿಯಾಪದಗಳನ್ನು **ಸಹಾಯಕ ಕ್ರಿಯಾಪದ**ಗಳೆಂದು ಕರೆಯುತ್ತಾರೆ.

(ಬ) ಕೆಳಗಿನ ವಾಕ್ಯಗಳಲ್ಲಿ ತೆರವಿದ್ದ ಸ್ಥಳದಲ್ಲಿ ಯೋಗ್ಯ ಸಹಾಯಕ ಕ್ರಿಯಾಪದಗಳನ್ನು ತುಂಬಿರಿ.

೧) ನೀವೆಲ್ಲರೂ ಪ್ರತಿದಿನ ವ್ಯಾಯಾಮವನ್ನು ಮಾಡ........
೨) ಹೆರವರನ್ನು ನಿಂದಿಸ........
೩) ಕೆಟ್ಟ ವಿಚಾರಗಳನ್ನು ಮನಸ್ಸಿನಲ್ಲಿ ತರ........
೪) ದಿನಾಲು ದೇವರನ್ನು ಭಜಿನ........
೫) ಧರ್ಮವನ್ನು ಮೀರಿ ನಡೆಯ........

**ಟಿಪ್ಪಣಿ:**

**ನೋಬೆಲ್ ಬಹುಮಾನ—** ವಿಜ್ಞಾನ, ಸಾಹಿತ್ಯ, ಶಾಂತಿ ಮುಂತಾದ ಕಾರ್ಯಗಳಲ್ಲಿ ಜಗತ್ಪ್ರಸಿದ್ಧರಾಗಿರುವವರಿಗೆ ದೊರೆಯುವ ಅಮೂಲ್ಯ ಬಹುಮಾನ. ಭಾರತದಲ್ಲಿ ರವೀಂದ್ರನಾಥ ಠಾಕೂರ, ಸಿ. ವಿ. ರಾಮನ್ ಮೊದಲಾದವರಿಗೆ ಈ ಬಹುಮಾನ ದೊರೆತಿದೆ.

**ಡಾಕ್ಟರೇಟ—** ಒಂದು ವಿಷಯದಲ್ಲಿ ಪರಿಣತಿ ಪಡೆದವರಿಗೆ ವಿಶ್ವವಿದ್ಯಾಲಯದವರು ಈ ಪದವಿಯನ್ನು ಕೊಡುವರು. **ಗುಡ್ ಫ್ರಾಯಡೇ—** ಇಂಗ್ಲೀಷರ ಒಂದು ಹಬ್ಬ.

# ೨೬. ಪಾತರಗಿತ್ತಿ

[ ಹಾರಾಡುವ ಬಣ್ಣ ಬಣ್ಣದ ಚಿಟ್ಟೆಗಳನ್ನು ನೋಡಿ ನಲಿಯುದವರು ಉಂಟೇ? ಈ ಚಿಟ್ಟೆಗಳು ಹೇಗೆ ಹುಟ್ಟಿ ಬೆಳೆಯುತ್ತವೆಂಬುದನ್ನು ಇಲ್ಲಿ ನೀವು ತಿಳಿದುಕೊಳ್ಳುವಿರಿ. ]

■ ■ ■

ಸೃಷ್ಟಿಯ ಸೊಬಗನ್ನು ಹೆಚ್ಚಿಸಿರುವ ಅನೇಕಾನೇಕ ಜೀವಿಗಳಲ್ಲಿ ಬಣ್ಣ ಬಣ್ಣದ ರೆಕ್ಕೆಗಳನ್ನು ಪಸರಿಸಿ ಹಾರಾಡುವ ಪಾತರಗಿತ್ತಿಗಳ ಪಾತ್ರವು ಗಮನಾರ್ಹವಾಗಿದೆ. ಹಸಿರು ಹುಲ್ಲಮೇಲೆ, ಬೆಳೆದ ಬೆಳೆಯ ನಿಲುವಿನಲ್ಲಿ, ಕಂಟಿ, ಪೊದೆಗಳ ಸುತ್ತಲೂ ಹೂವಿನಿಂದ ಹೂವಿಗೆ ಹಾರಿ ನಡೆಯುತ್ತಿರುವ ಈ ಚಿತ್ತಾಕರ್ಷಕ ನಯನಮನೋಹರ ವರ್ಣರಂಜಿತ ಚಿಟ್ಟೆಗಳನ್ನು ಕಂಡಾಗ ಮುದುಡಿದ ಮನಸ್ಸು ಆಲ್ಹಾದಗೊಳ್ಳುವದು ತೀರ ಸಹಜ! ಮಕ್ಕಳಂತೂ ಇವುಗಳಿಗೆ ಮರುಳಾಗಿ ತಾವೂ ಚಿಟ್ಟೆಗಳಾಗಿ ಹಾರುತ್ತ ನೆಗೆಯುತ್ತ ಬೆಂಬಳಿಸಿ ನಡೆಯುವ ನೋಟ ಎಲ್ಲೆಲ್ಲಿಯೂ ತೋರಿ ಬರುತ್ತದೆ. ನೋದವಸೂಸಿ ಚಿನ್ನಾಟಗೈಯುವ ಚಿಟ್ಟೆಗಳು ಪ್ರಕೃತಿಯ ಬೆಡಗಿನ ಬಿಂಕದ ಒಡವೆಗಳು.



ಉರಿಬಿಸಿಲಿನ ಬೇಸಿಗೆಯ ದಿನಗಳು ಕಳೆದು ಮಳೆಬಿದ್ದು ಭೂಮಿಯೆಲ್ಲ ತಂಪಾಗುತ್ತದೆ. ಹುಲ್ಲು–ಗದ್ದೆಗಳೆಲ್ಲ ಹಸಿರಾಗುತ್ತವೆ. ಒಕ್ಕಲಿಗರಿಗೆಲ್ಲ ಗಿಡ–ಬಳ್ಳಿಗಳಿಗೆ ಪಾತಿ ಮಾಡಿ ಗೊಬ್ಬರ ಸೊಪ್ಪು ಹಾಕುತ್ತಾರೆ. ನೋಡಿದಲ್ಲೆಲ್ಲ ನವ ಜೀವನ ಮೂಡಿ ನಿಂತಿರುತ್ತದೆ. ಎಲ್ಲೆಲ್ಲಿಯೂ ಬಣ್ಣ ಬಣ್ಣದ ಪಕಳೆಗಳನ್ನು ಎತ್ತಿ ಮೆರೆಯುತ್ತ ನಿಂತ ಹೂ-ಮೊಗ್ಗೆಗಳೇ ಮೊಗ್ಗೆಗಳು. ಆ ರಮ್ಯ, ಮಧುರ ಋತುವಿನ ಸುಪ್ರಭಾತದಲ್ಲಿ ಲೋಕವು ಪತ್ರ–ಪುಷ್ಪಗಳ ಮಾದಕ ಸುಗಂಧದಲ್ಲಿ ಮಿಂದು ತಲ್ಲೀನತೆ ಪಡೆದಿರುತ್ತದೆ. ನಾಲ್ಕು ಸೆಳಕು ಮಳೆಬಿದ್ದು ತೀಕ್ಷ್ಣತೆಯಳಿದ ರವಿರಶ್ಮಿಗಳು ಕೋಲುಕೋಲಾಗಿ ಸುತ್ತಲೂ ಹರಡಿ, ಗಿಡ–ಮರಗಳ ಮೇಲಿನ ಮಳೆಹನಿಗಳು ಸ್ವಚ್ಛ ಸ್ಫಟಿಕದಂತೆ ಥಳಥಳಿಸಿ ಹೊಳೆಯುವ ಕಾಲದಲ್ಲಿ ಬಿನ್ನಾಣದ ಪಾತರಗಿತ್ತಿಗಳು ಕುಣಿಕುಣಿದು ಮಣಿಮಣಿದು ತಾವೇತಾವಾಗಿ ವಿಹರಿಸುತ್ತವೆ. ಬೆಡಗೇ ಬಣ್ಣದುಂಬಿ ಚಿಟ್ಟೆಯಾಗಿ ಮೂಡಿಬಂದ ಈ ಜೀವಿಗಳನ್ನು ಕಂಡಾಗ

ರಸಿಕನು ತನಗೂ ಬಣ್ಣಬಣ್ಣಗಳ ಪಕ್ಕಗಳೇಕಿರಬಾರದಾಗಿತ್ತೆಂದು ಬಾಯಿ ಬಾಯಿ ಬಿಡುತ್ತಾನೆ.

ಪಾತರಗಿತ್ತಿಗಳಲ್ಲಿ ಅನೇಕ ಪ್ರಕಾರಗಳುಂಟು. ಆದರೂ ಎಲ್ಲವುಗಳ ಜೀವನ ಚರಿತ್ರೆಯಲ್ಲಿ ಒಂದೇ ತೆರನಾದ ಅವಸ್ಥೆಗಳು ಕಂಡು ಬರುತ್ತವೆ. ಈ ಅವಸ್ಥೆಗಳು ಒಂದರಿಂದಿನ್ನೊಂದು ತೀರ ಭಿನ್ನವಾಗಿವೆ. ಪ್ರತಿ ಅವಸ್ಥೆಗಳಲ್ಲಿ ಈ ಚಿಟ್ಟೆಗಳು ಬೇರೆ ಬೇರೆ ಕೀಟಕಗಳೋ ಎನ್ನುವಷ್ಟರ ಮಟ್ಟಿಗೆ ಭಿನ್ನತೆ ಒಡೆದು ತೋರುತ್ತದೆ. ಈ ಅವಸ್ಥೆಗಳು ನಾಲ್ಕು ಇರುತ್ತವೆ.

೧. ತತ್ತಿ, ೨. ಕೀಡೆ, ೩. ಕೋಶ, ೪. ಪತಂಗ.

ನಮ್ಮ ಕಣ್ಣಿಗೆ ಹಬ್ಬವಾಗಿ ಬಣ್ಣಗೊಂಡು ಹಾರಾಡುವ ಚಿಟ್ಟೆಗಳು ಪ್ರಬುದ್ಧಾವಸ್ಥೆ ಮುಟ್ಟಿರುತ್ತವೆ.

ಪಾತರಗಿತ್ತಿಗಳಲ್ಲಿ ಹೆಣ್ಣು-ಗಂಡುಗಳು ಬೇರೆ ಬೇರೆಯಾಗಿರುತ್ತವೆ. ಹೆಣ್ಣು ಪಾತರಗಿತ್ತಿಯು ಎಲೆಗಳ ಮೇಲೆ ಒಂಟಿಯಾಗಿ ಅನೇಕ ತತ್ತಿಗಳನ್ನಿಡುತ್ತದೆ. ಈ ತತ್ತಿಗಳು ತೀರ ಸಣ್ಣವಿರುತ್ತವೆ; ಶುಭ್ರವಾಗಿರುತ್ತವೆ; ಕಾಳಿನಾಕಾರದವುಗಳಾಗಿರುತ್ತವೆ. ಈ ತತ್ತಿಗಳು ಸಾವಕಾಶವಾಗಿ ಮಾರ್ಪಾಟು ಹೊಂದಿ, ಹುಳದಂತೆ ಆಕಾರ ತಾಳಿ ಕೀಡೆಗಳಾಗುತ್ತವೆ. ಈ ಕೀಡೆಗಳಿಗೆ ಕಾಲುಗಳೂ ಹೀರು ಪಾದಗಳೂ ಇರುತ್ತವೆ. ಇವು ವನಸ್ಪತಿಗಳ ಎಲೆ, ಕುಡಿಗಳನ್ನು ತಿಂದು ದೊಡ್ಡವಾಗುತ್ತವೆ. ಬಗೆಬಗೆಯ ಬಣ್ಣಗಳ ಕೀಡೆಗಳಿರುತ್ತವೆ. ಕೆಲವು ಅನೇಕ ವರ್ಗದವುಗಳಿರುತ್ತವೆ. ಹೆಚ್ಚಾಗಿ ಎಲೆಯನ್ನು ತಿನ್ನುವದರಿಂದ ಹಸಿರು ವರ್ಣದವುಗಳೇ ಇರುತ್ತವೆ. ದೇಹವು ದುಂಡಾಗಿ ಉದ್ದವಾಗಿದ್ದು ಮೇಲ್ಗಡೆಯಲ್ಲಿಯ ತುದಿಗಳಲ್ಲಿ ಕೊಂಬಿನಾಕಾರದ ಅವಯವಗಳಿರುತ್ತವೆ. ಕೆಲವು ಕೀಡೆಗಳಿಗೆ ಕೂದಲುಗಳೂ ಇರುತ್ತವೆ. ಈ ಕೀಡೆಗಳು ಬೆಳೆದಂತೆ ಮೈಬಣ್ಣದಲ್ಲಿಯೂ ಮಾರ್ಪಾಟಾಗಿ ಹತ್ತು–ಹನ್ನೆರಡು ದಿನಗಳಲ್ಲಿ ಕೀಡೆಯು ಪೂರ್ತಿ ಬೆಳೆಗೆ ಹೊಂದುವದು.

ಆಗ ಅದಕ್ಕೆ ಆಹಾರ ರುಚಿಸುವದಿಲ್ಲ. ತಿನ್ನುವದನ್ನೇ ನಿಲ್ಲಿಸಿ ಬಿಡುವದು. ಆಗ ಕೀಡೆಯು ಗಿಡದ ಯಾವದಾದರೊಂದು ಭಾಗಕ್ಕೆ ರೇಶ್ಮೆಯ ಎಳೆಯಂಥ ತಂತುವಿನ ಸಹಾಯದಿಂದ ಗಟ್ಟಿಯಾಗಿ ಅಂಟಿಕೊಳ್ಳುವದು. ಹಿಂಭಾಗದ ಹೀರುವ ಪಾದಗಳನ್ನು ಈ ತೂತುಗಳಲ್ಲಿ ಸಿಕ್ಕಿಸಿಕೊಂಡು ಆ ರೇಶ್ಮೆಯ ಜಾಳಿಗೆಯಲ್ಲಿ ತಲೆಕೆಳಗಾಗಿ ಜೋಲು ಬೀಳುವದು. ನಂತರ ಕೀಡೆ ಪೂರ್ತಿಯಾಗಿ ಮಾರ್ಪಟ್ಟು ದುಂಡಗೆ ಉದ್ದವಾದ ಹಳದೀ ಚುಕ್ಕೆಗಳಿಂದೊಡಗೂಡಿದ ಹಸಿರು

ಬಣ್ಣದ ವಸ್ತು ಸಿದ್ಧವಾಗುವದು. ಅದಕ್ಕೆ ಅವಯವಗಳಿರುವದಿಲ್ಲ. ಬಾಯಿ-ಕಣ್ಣುಗಳಿರುವದಿಲ್ಲ. ಮೀಸೆಯಂಥ ಎಳೆಗಳು ಮಾತ್ರ ಅಸ್ಪಷ್ಟವಾಗಿ ಗೋಚರವಾಗುತ್ತವೆ. ಇದು ಚಲಿಸದೆ ಜೋತು ಬಿದ್ದಲ್ಲಿಯೇ ಉಳಿದುಬಿಡುವದು. ಇದೇ ಕೋಶವು.

ಈ ಅವಸ್ಥೆಯಲ್ಲಿಯೇ ಆರೇಳು ದಿವಸಗಳ ವರೆಗೆ ಅನ್ನ-ನೀರುಗಳಿಲ್ಲದೆ ನಿದ್ರೆ ಹೋದಂತಿರುತ್ತದೆ. ಕೊನೆಯಲ್ಲಿ ಹೊರಗಿನ ಆವರಣವು ಬಿರಿದು ಒಡೆಯುತ್ತದೆ. ಒಳಗಿನಿಂದ ಚಿಟ್ಟೆಯು ಹೊರಬರುತ್ತದೆ. ಅದಕ್ಕೆ ಪಕ್ಕಗಳಿರುತ್ತವೆ. ಹೊರಗೆ ಬಂದ ಮೇಲೆ ಪಕ್ಕಗಳು ವಿಕಾಸಹೊಂದಿ ವಿಶಾಲವಾಗುತ್ತವೆ. ಇದೇ ಪ್ರಬುದ್ಧ ಪಾತರಗಿತ್ತಿಯು. ನರ್ತನ ಮಾಡುತ್ತ ಈ ಚಿಟ್ಟೆಯು ಹಾರಾಡಹತ್ತುವದು. ಇದೆಲ್ಲ ಹೊರಗಿನ ಮಾರ್ಪಾಟಾಯಿತು. ಇದರಂತೆ ಒಳವಲಯದಲ್ಲಿಯೂ ಮಾರ್ಪಾಟುಗಳಾಗುತ್ತವೆ. ತತ್ತಿಗಳು ಬೀಜಾಣುಗಳಿಂದ ಉದ್ಭವವಾಗುತ್ತವೆ. ತತ್ತಿಗಳಿಂದ ಕೀಡೆಗಳು ಹುಟ್ಟುತ್ತವೆ. ಕೀಡಿಯು ಬೆಳೆದು ದೊಡ್ಡದಾಗುತ್ತದೆ. ಈ ಅವಸ್ಥೆಯಲ್ಲಿಯೇ ಕೆಲವೊಂದು ಪ್ರಮಾಣದಲ್ಲಿ ನೆಣದ ಸಂಗ್ರಹವಾಗುವದು. ಮುಂದೆ ಕೋಶಾವಸ್ಥೆಯಲ್ಲಿ ಅದು ಇದ್ದಾಗ ಈ ನೆಣದ ಉಪಯೋಗವಾಗುವದು.

ವೈರಿಗಳ ಕಣ್ಣಿಗೆ ಕಾಣದಂತೆ ಮರೆಯಲ್ಲಿ ಜೋತುಬಿದ್ದ ಈ ಕೋಶಾವಸ್ಥೆಯಲ್ಲಿ ಹೆಚ್ಚಿನ ಬದಲಾವಣೆಗಳಾಗುತ್ತವೆ. ಆಗ ಕೀಡೆಯು ಚಿಟ್ಟೆಯಾಗುವ ಮಾರ್ಪಾಟು ಭರದಿಂದ ನಡೆದಿರುತ್ತದೆ. ಇಂಥ ಮಾರ್ಪಾಟು ಪ್ರಾಣಿಜೀವನದಲ್ಲಿ ಕಂಡುಬರಲಾರದು. ಕೀಡೆಯ ಪ್ರತಿ ಅವಯವವೂ ಬದಲಾಗುವದು. ಪಕ್ಕಗಳು ಹುಟ್ಟುತ್ತವೆ. ಸಣ್ಣ ಕಾಲುಗಳ ಬದಲು ಉದ್ದ ಕಾಲುಗಳು ಮೂಡಿ ನಿಲ್ಲುತ್ತವೆ. ಕಡಿಯಲಿಕ್ಕೆಂದಿದ್ದ ಮುಖದ ಅವಯವಗಳಿಗೆ ಬದಲಾಗಿ ಹೀರಲು ಅನುವಾಗುವ ಅವಯವಗಳು ತೋರಿ ಬರುತ್ತವೆ. ನವೀನ ಸಂಕೀರ್ಣ ನಯನಗಳು ಉದ್ಭವಿಸುವವು. ಹೊಸ ವಾಸನಾಂಗಗಳು ಹುಟ್ಟುತ್ತವೆ.

ಕೀಡಾವಸ್ಥೆಯಲ್ಲಿ ಆದೇ ಹುಟ್ಟುತ್ತಿರುವ ಲೈಂಗಿಕಾವಯವಗಳು ಕೋಶಾವಸ್ಥೆಯಲ್ಲಿ ಸಂಪೂರ್ಣ ಬೆಳೆಗೆ ಹೊಂದಿ, ಪತಂಗಾವಸ್ಥೆಯಲ್ಲಿ ಹೆಣ್ಣು-ಗಂಡುಗಳು ಬೇರೆ ಬೇರೆಯೇ ಆಗುವವು. ಮೊದಮೊದಲು ಪಾತರಗಿತ್ತಿಯ ದೇಹವು ತೀರ ಮೆತ್ತಗಿದ್ದು, ಪಕ್ಕಗಳು ಕ್ರಮವಾಗಿ ಮುಚ್ಚಿರುತ್ತವೆ. ಬೆಳೆಯುತ್ತ ನಡೆದಂತೆ ಬಿರುಸಾಗಿ ಬಲಗೊಳ್ಳುತ್ತವೆ. ಹಾರಲು ಸಿದ್ಧವಾದ ಚಿಟ್ಟೆಯಲ್ಲಿ ಇಷ್ಟೆಲ್ಲ ಒಳ-ಹೊರಗಿನ ಮಾರ್ಪಾಟುಗಳಾಗಿ, ಹೊಸ ವಾಸನೆ, ನವಪ್ರವೃತ್ತಿಗಳು ಮೂಡು

ತ್ತವೆ. ಅದು ನಂತರ ಹೂವಿನಿಂದ ಹೂವಿಗೆ ಹಾರಿ ಬಂಡುಂಡು ಮಧುವನೀಂಟ್ಟಿ, ಒಲುವಿನವರೊಡನೆ ಒಡನಾಟ ಬಯಸಲು ವೈಯಾರದ ಬೆಡಗಿನಿಂದ ಆಕರ್ಷಕ ವಾಗಿ ಅರಸುವಿಕೆಯಲ್ಲಿ ತೊಡಗುವದು. ಸರಿದಾಡುವ ಕೀಡೆಯೆತ್ತ ? ಈ ಲೋಕ ದವರಿಗೇ ಮರೆಯಾಗಿ, ಬಂದಿಯಾಗಿ ಜೋತುಬಿದ್ದ ಕೋಶವೆತ್ತ ? ಬಣ್ಣಗೊಂಡು ಚಿನ್ನಾಟಗೈದು ಹಾರಾಡುವ ಚಿಟ್ಟೆಯೆತ್ತ ? ಎಲ್ಲವೂ ಸೃಷ್ಟಿಯ ಚಮತ್ಕಾರವು!

ಪಾತರಗಿತ್ತಿಗಳಿಗೆ ಬಣ್ಣ ಬಣ್ಣಗಳ ರೆಕ್ಕೆಗಳಿರುವವು. ಅವು ನಮಗೆ ಮನ ಮೋಹಕತೆ ಸೃಷ್ಟಿಯ ಬೆಡಗಿಗೆ ಕಾಣಿಕೆ. ಆದರೂ ಅವುಗಳ ಔಚಿತ್ಯ ಬೇರೆಯೇ. ಚಿಟ್ಟೆಗಳೇನೂ ಅಜಾತಶತ್ರುಗಳಲ್ಲ. ಅನೇಕಾನೇಕ ಹಕ್ಕಿ-ಪಕ್ಕಿಗಳು ಇವುಗಳ ಕಡುವೈರಿಗಳಾಗಿವೆ. ವೈರಿಗಳಿಂದ ಪಾರಾಗಿ ಜೀವನ ಸಾಗಿಸಲಿಕ್ಕೆ ಚಿಟ್ಟೆಗಳು ತಮಗಿರುವ ಮೋಹಕ ಬಣ್ಣಗಳ ರಕ್ಷಣೆ ಪಡೆಯುತ್ತವೆ. ಅಂತೆಯೇ ಹೆಚ್ಚಾಗಿ ಅವುಗಳು ಹಾರಾಡುವ ಸ್ಥಳದ ವನಸ್ಪತಿಗಳ ಹೂವಿನಂತಹ ಬಣ್ಣಗಳನ್ನೇ ಧಾರಣ ಮಾಡಿರುತ್ತವೆ. ಹೀಗಾಗಿ ತಟ್ಟನೆ ಅವು ವೈರಿಗಳ ಕಣ್ಣಿಗೆ ಬೀಳುವದಿಲ್ಲ. ಕೆಲವು ಪಾತರಗಿತ್ತಿಗಳಿಗೆ ಅತಿ ದಟ್ಟವಾದ ಬಣ್ಣಗಳಿರುತ್ತವೆ. ಅವು ಭೀಕರ ವಾಗಿ ತೋರಿ ವೈರಿಗಳನ್ನು ಅಂಜಿಸಿಕೊಳ್ಳುತ್ತವೆ. ಹಲವು ಚಿಟ್ಟೆಗಳಿಗೆ ಮುಂಭಾಗದ ಇಲ್ಲವೆ ಹಿಂಭಾಗದ ರೆಕ್ಕೆಗಳ ಮೇಲೆ ತಟ್ಟನೆ ಗಮನ ಸೆಳೆಯುವ ಗುರುತುಗಳಿರುತ್ತವೆ. ವೈರಿಗಳು ಏರಿ ಬಂದು ಕುಕ್ಕಿದಾಗ ಈ ಭಾಗಗಳಷ್ಟೇ ಕಳೆದು ಹೋಗಿ ಈ ಕೀಟಕಗಳು ಕುತ್ತಿನಿಂದ ಪಾರಾಗುತ್ತವೆ. ಸಂಗಾತಿಗಳಿಗೆ ಮೋಹಕವಾಗಿ ಕಾಣಬೇಕೆಂದೂ ಈ ಬೆಡಗಿನ ಬಣ್ಣದ ರಚನೆಯಿರುತ್ತದೆ.

ಪಾತರಗಿತ್ತಿಗಳು ತಮ್ಮ ಅಂಗಸೌಂದರ್ಯದಿಂದ ನಮ್ಮ ಮನಸ್ಸನ್ನು ಆಲ್ಹಾದಗೊಳಿಸುವದರ ಜೊತೆಗೆ ಹೂವಿನಿಂದ ಹೂವಿಗೆ ಹಾರಾಡುತ್ತ ನಡೆದಾಗ ಅನಾಯಾಸವಾಗಿ ಪರಾಗ ಪ್ರಸರಣೆಯೂ ನಡೆದು, ವನಸ್ಪತಿಗಳ ಫಲಧಾರಣೆಗೆ ಅನುಕೂಲವಾಗುವದು. ಈ ಚಿಟ್ಟೆಗಳು ಅನೇಕ ರೀತಿಗಳಲ್ಲಿ ತೊಂದರೆ ಕೊಡುವ ಕೀಟಕಗಳೂ ಆಗಿವೆ. ಇವುಗಳ ಇರುವೇ ತಾಪದಾಯಕವೆನ್ನಿಸುವಷ್ಟರ ಮಟ್ಟಿಗೆ ಹಲವು ಉಪದ್ರವಿಗಳಾಗಿವೆ. ಕೀಡಾವಸ್ಥೆಯಲ್ಲಿಯೇ ಹಾವಳಿ ಅತಿಯಾಗಿರು ತ್ತದೆ. ಕೀಡಿಗಳು ಬಹುಸಂಖ್ಯೆಯಲ್ಲಿ ಸೇರಿ ಒಂದೆಲೆ, ಕುಡಿಗಳೂ ಉಳಿಯ ದಂತೆ ತಿಂದು ಮುಗಿಸಿಬಿಡುತ್ತವೆ. ಪತಂಗಾವಸ್ಥೆಯಲ್ಲಿ ಮಾಗಿದ ಫಲಗಳನ್ನು ಚುಚ್ಚಿ ಮುಕ್ಕು ಮಾಡುತ್ತವೆ. ಹೀಗಾಗಿ ಒಕ್ಕಲಿಗರ ಬೆಳೆ, ತೋಟಿಗರ ಫಲ ಗಳು ಅನೇಕ ಸಲ ಈ ಬೆಡಗಿನ ಪಾತರಗಿತ್ತಿಗಳ ಹಾವಳಿಗೆ ಈಡಾಗಿ ಗಂಡಾಂತರ ಪರಿಸ್ಥಿತಿಯು ತಲೆದೋರುವದು.

ಅಂತೇ ಇವುಗಳ ನಿಯಂತ್ರಣಗಳ ಬಗೆಗೂ ಚಿಂತಿಸಬೇಕಾಗುತ್ತದೆ. ಹೆಚ್ಚಿನ ತಾಪದಾಯಕ ಅವಸ್ಥೆಗಳಲ್ಲಿ ಇವುಗಳನ್ನು ಸಂಹಾರ ಮಾಡುವದು ಉಚಿತವು. ಮುಂಜಾಗ್ರತೆಯ ಉಪಾಯಗಳೆಂದು ಚಿಟ್ಟೆಯ ತತ್ತಿಗಳನ್ನೇ ನಾಶ ಮಾಡುವದೂ ಉಂಟು. ಬಗೆಬಗೆಯ ಹುಡಿ, ಮಿಶ್ರಣಗಳಿಂದ ಇವುಗಳ ಯಶಸ್ವಿ ನಿಯಂತ್ರಣ ಸಾಧ್ಯವಿದೆ.

**ಶಬ್ದಾರ್ಥ:**

ಚಿತ್ತಾಕರ್ಷಕ – ಮನಸ್ಸನ್ನು ಎಳಕೊಳ್ಳುವ; ಆಲ್ಹಾದಗೊಳ್ಳು – ಆನಂದವನ್ನು ಹೊಂದು; ಪಾತಿ – ಗಿಡದ ಸುತ್ತಲೂ ನೀರು ನಿಲ್ಲುವಂತೆ ಕಟ್ಟಿದ ಕಟ್ಟ; ಮಾದಕ- ಮದವನ್ನು ಹುಟ್ಟಿಸುವ; ರಶ್ಮಿ – ಕಿರಣ; ಪ್ರಬುದ್ಧ – ಬೆಳೆದ, ದೊಡ್ಡದಾದ.

**ಪ್ರಶ್ನೆ:**

೧. ಪಾತರಗಿತ್ತಿಗಳು ಪ್ರಕೃತಿಯ ಬೆಡಗಿನ ಬಿಂಕದ ಒಡವೆಗಳು ಹೇಗಾಗಿವೆ ?
೨. ಪಾತರಗಿತ್ತಿಗಳು ಯಾವಾಗ ವಿಹರಿಸಲು ಪ್ರಾರಂಭಿಸುತ್ತವೆ ?
೩. ತತ್ತಿಯ ಸ್ಥಿತಿಯಲ್ಲಿದ್ದ ಪಾತರಗಿತ್ತಿಗಳು ಪ್ರಬುದ್ಧಾವಸ್ಥೆಯನ್ನು ಹೇಗೆ ಹೊಂದುವು ಸಂಕ್ಷಿಪ್ತವಾಗಿ ವಿವರಿಸಿರಿ.
೪. ಪಾತರಗಿತ್ತಿಗಳಿಗಿರುವ ಬಣ್ಣಬಣ್ಣದ ರೆಕ್ಕೆಗಳ ಉಪಯೋಗವೇನು ?
೫. ಪಾತರಗಿತ್ತಿಗಳಿಂದಾಗುವ ಕೇಡು ಯಾವದು ? ಅದನ್ನು ತಡೆಯಲು ಉಪಾಯವೇನು ?

**ವ್ಯಾಕರಣ:**

## ಪುನರವಲೋಕನ

(ಅ) ಕ್ರಿಯಾಪದಗಳಲ್ಲಿರುವ ಬೇರೆ ಬೇರೆ ಪ್ರಕಾರಗಳನ್ನು ಹೇಳಿರಿ.

(ಬ) ಕೆಳಗಿನ ಕ್ರಿಯಾಪದಗಳನ್ನು ಎಲ್ಲ ಅರ್ಥಗಳಲ್ಲಿಯೂ ನಡೆಯಿಸಿ ತೋರಿಸಿರಿ.

ಬರು, ಕಾಣು, ಸೋಲು, ತರು, ಕೊಳ್ಳು, ಹೊರು, ಈ, ಸಾ, ಮೀ, ಉಳು.

(ಕ) ಕೆಳಗಿನ ಸಹಾಯಕ ಮತ್ತು ಅವ್ಯಯ ಕ್ರಿಯಾಪದಗಳನ್ನು ಉಪಯೋಗಿಸಿ ಒಂದೊಂದು ವಾಕ್ಯ ರಚಿಸಿರಿ.

ಉಂಟು, ಇಲ್ಲ, ಸಾಕು, ಬೇಕು, ಬೇಡ, ಬಾರದು, ಬಹುದು, ತಕ್ಕದ್ದು, ಆಗದು, ಕೂಡದು.

## ಪ್ರಬಂಧ ಪಾಠ ೩:

## ಸಂವಾದ ಹಾಗೂ ಸಂಭಾಷಣೆ ಬರೆಯುವದು.

(ಅ) ಈಗಾಗಲೆ ನೀವು ' ಪಂಪಾಪತಿಯ ಕರುಣೆ ' ಎಂಬ ಪಾಠವನ್ನೂ ' ಮರುಳುಗಳು ' ಎಂಬ ಪಾಠವನ್ನೂ ಓದಿರುವಿರಿ. ಅಲ್ಲಿ ಇಬ್ಬರು ಮೂವರು ವ್ಯಕ್ತಿಗಳ

ನ ಏವೆ ಮಾತು ನಡೆದದ್ದನ್ನು ನೀವು ತಿಳಿದುಕೊಂಡಿರುವಿರಿ. ಹೀಗೆ ವ್ಯಕ್ತಿಗಳ ನಡುವೆ ಮಾತು ನಡೆದರೆ ಅದನ್ನು ಸಂಭಾಷಣೆ ಎಂದು ಕರೆಯುತ್ತಾರೆ. ಸಂಭಾಷಣೆಗೆ ಕನಿಷ್ಟ ಇಬ್ಬರಾದರೂ ವ್ಯಕ್ತಿಗಳು ಬೇಕು. ಒಬ್ಬನೇ ವ್ಯಕ್ತಿಯು ಮಾತನಾಡಿದರೆ ಅದು ಸಂಭಾಷಣೆ ಎನಿಸುವದಿಲ್ಲ.

ಸಂಭಾಷಣೆ ಬರೆಯಬೇಕಾದರೆ ನಾವು ಒಂದು ಕ್ರಮವನ್ನು ಅನುಸರಿಸಬೇಕಾಗುತ್ತದೆ.

೧. ಸಂಭಾಷಣೆಗಳಿಗೆ ಒಂದು ಪೀಠಿಕೆ ಬೇಕು. ಪೀಠಿಕೆಯು ವಿಷಯವನ್ನು ಒದಗಿಸುತ್ತದೆ.
೨. ಸಂಭಾಷಣೆಯು ಒಂದಕ್ಕಿಂತ ಹೆಚ್ಚು ವ್ಯಕ್ತಿಗಳಲ್ಲಿ ನಡೆಯಬೇಕು. ವಸ್ತು-ಗಳನ್ನು ನಾವು ಸಂಭಾಷಣೆಯಲ್ಲಿ ಉಪಯೋಗಿಸಬಹುದು.
೩. ಸಂಭಾಷಣೆಯು ಮುಗಿದಾಗ ಸಂಭಾಷಣೆಯ ವಿಷಯ ಸರಿಯಾಗಿ ಮುಗಿದಿರಬೇಕು.
೪. ಸಂಭಾಷಣೆಗೆ ಒಂದು ತಲೆಬರೆಹ ಕೊಡಬೇಕು.

ಈ ಕ್ರಮವನ್ನು ಅನುಸರಿಸಿದರೆ ಒಂದು ಒಳ್ಳೆಯ ಸಂಭಾಷಣೆ ಪೂರ್ಣವಾಗುವದು.

ಸಂಭಾಷಣೆಗೂ ಸಂವಾದಕ್ಕೂ ಸ್ವಲ್ಪ ಅಂತರವಿದೆ. ಸಂಭಾಷಣೆಯಲ್ಲಿ ವಿವಾದಾಸ್ಪದವಾದ ವಿಷಯ ಬರುವದಿಲ್ಲ. ಹಾಗೆ ಇಬ್ಬರು ಮೂವರಲ್ಲಿ ಮಾತು-ಕತೆಗಳು ನಡೆಯುತ್ತವೆ. ಆದರೆ ಸಂವಾದದಲ್ಲಿ ವಿವಾದಾಸ್ಪದವಾದ ವಿಷಯಗಳ ಚರ್ಚೆಯಾಗುತ್ತದೆ. ಸಂವಾದಕ್ಕೆ ಒಂದು ವಿಷಯದ ಬಗ್ಗೆ ಎರಡು ಬೇರೆ ಬೇರೆ ಅಭಿಪ್ರಾಯಗಳನ್ನು ತಳೆದ ಇಬ್ಬರು ವ್ಯಕ್ತಿಗಳು ಬೇಕಾಗುತ್ತಾರೆ. ಸಂವಾದವನ್ನು ಬರೆಯುವ ಕ್ರಮವು ಸಂಭಾಷಣೆಯನ್ನು ಬರೆಯುವ ಕ್ರಮದಂತೆಯೇ ಇರುತ್ತದೆ. ಆದರೆ ಸಂವಾದವನ್ನು ಬರೆಯುವಾಗ ಬರುವ ಹೆಚ್ಚಿನ ಅಂಶವೆಂದರೆ ಒಂದು ವಿಷಯದ ಸಾಧಕ– ಬಾಧಕ ಪ್ರಮಾಣಗಳನ್ನೂ ಅಂಶಗಳನ್ನೂ ಚರ್ಚಿಸಬೇಕಾಗುತ್ತದೆ. ಆದ್ದರಿಂದ ಸಂಭಾಷಣೆ ಬರೆಯುವದಕ್ಕಿಂತಲೂ ಸಂವಾದ ಬರೆಯುವದಕ್ಕೆ ಸ್ವಲ್ಪ ಹೆಚ್ಚಿನ ಜಾಣತನಬೇಕಾಗುತ್ತದೆ. ಮಾದರಿಗಾಗಿ ಕೆಳಗಿನ ಸಂಭಾಷಣೆ ಹಾಗೂ ಸಂವಾದಗಳನ್ನು ನೋಡಿರಿ.

## ಸಂಭಾಷಣೆ

## ಮನಿಆರ್ಡರ ಮುಟ್ಟಲಿಲ್ಲವೇಕೆ ?

[ ವಿಷಯ— ಶಂಕರನ ತಂದೆ ೨೫ ರೂಪಾಯಿ ಮನಿಆರ್ಡರ ಮಾಡಿ ೮ ದಿವಸಗಳಾದವು. ಈತನಿಗೆ ಇನ್ನು ಮುಟ್ಟಿಲ್ಲ; ಪೋಸ್ಟಮಾಸ್ತರರಲ್ಲಿ ಕೇಳುತ್ತಿದ್ದಾನೆ. ]

ಶಂಕರ— ನಮಸ್ಕಾರ ಮಾಸ್ತರರೇ ?

ಪೋ. ಮಾ.— ಯಾಕಪ್ಪಾ, ಮತ್ತೇನು ಕೆಲಸ ?

ಶಂಕರ — ಶಂಕರ ರಾಮಚಂದ್ರ ಕುಲಕರ್ಣಿ ಎಂಬ ಹೆಸರಿನ ಮನಿಆರ್ಡರ ಬಂದಿದೆಯೇ

ಪೋ. ಮಾ.— ಇಲ್ಲವಲ್ಲ. ಬಂದಿದ್ದರೆ ಮರುದಿನವೇ ಕಳಿಸುತ್ತಿದ್ದೆ.

ಶಂಕರ— ನನ್ನ ತಂದೆ ರೂಪಾಯಿಗಳನ್ನು ಕಳಿಸಿ ೧೦ ದಿವಸಗಳಾದುವು. ರೀಸಿಟ ನಂಬರ ಸಹ ತಿಳಿಸಿದ್ದಾರೆ. ಪತ್ರವನ್ನು ನೋಡಿಕೊಳ್ಳಿರಿ.

ಪೋ. ಮಾ.— ನಿಜ. ಆದರೆ ನಮ್ಮಲ್ಲಿನ್ನೂ ಬಂದಿಲ್ಲ.

ಶಂಕರ — ಎರಡು ದಿವಸ ಸಾಕು, ನಮ್ಮಲ್ಲಿಂದ ಇಲ್ಲಿಗೆ ಹಣ ಬರಲಿಕ್ಕೆ. ಹತ್ತುದಿವಸ ತಡವೇಕಾಯಿತು ?

ಪೋ. ಮಾ.— ಪೋಷ್ಟಮಾಸ್ತರರಿಗೆ ಬರೆದು ಕೇಳುವೆ. ನೀವೂ ಒಂದು ಅರ್ಜಿಯನ್ನು ಕೊಡಿರಿ, ಈ ಸಂಗತಿಗಳನ್ನೆಲ್ಲ ಕಾಣಿಸಿ.

ಶಂಕರ— ನಾಳೆ ಬೆಳಗಿಗೆ ತಂದುಕೊಟ್ಟರೆ ಆಗಬಹುದಷ್ಟೇ ?

ಪೋ. ಮಾ.— ಬೇಕಾದಾಗ ತಂದು ಕೊಡಿರಿ. ನಾನು ಇಂದೇ ಬರೆದು ಕೇಳುವೆ. ಆ ರಿಸೀಟ ನಂಬರ ಮತ್ತು ದಿನಾಂಕಗಳನ್ನು ಹೇಳಿರಿ.

ಶಂಕರ— ರಿ. ನಂಬರ ೮೬೭೫; ದಿನಾಂಕ ೬ ೫-೧೯೫೨.

ಪೋ. ಮಾ.— ಒಳ್ಳೆಯದು. ಇಂದೇ ಬರೆಯುವೆ.

ಶಂಕರ— ತಮ್ಮ ಉಪಕಾರ ಬಹಳವಾಯಿತು. ತೊಂದರೆ ಕೊಟ್ಟದ್ದಕ್ಕೆ ಕ್ಷಮೆ-ಯಿರಲಿ. ಬರುವೆ........

## ಸಂವಾದ

## ಪಂಜರದ ಗಿಳಿ

[ ಒಬ್ಬ ಸಿರಿವಂತನ ಮನೆಯಲ್ಲಿ ಒಂದು ಗಿಳಿಯು ಪಂಜರದಲ್ಲಿರುತ್ತದೆ. ಒಂದು ದಿನ ಹೊರಗೆ ಹಾರಾಡುವ ಒಂದು ಗಿಳಿ ಪಂಜರದ ಗಿಳಿಯನ್ನು ಅಕಸ್ಮಾತ್ತಾಗಿ ನೋಡಿ ಅಲ್ಲಿಗೆ ಬರುತ್ತವೆ. ಆಗ ಎರಡೂ ಗಿಳಿಗಳಲ್ಲಿ ಈ ರೀತಿ ಸಂವಾದ ನಡೆಯುವದು. ]

ಪಂಜರದ ಗಿಳಿ— ಏನು ಗೆಳೆಯಾ, ಬಹಳ ದಿವಸಕ್ಕೆ ನನ್ನ ಭೆಟ್ಟಿಗೆ ಬಂದೆ ?

ಹಾರಾಡುವ ಗಿಳಿ — ನೀನು ಹೇಗಿರುವೆಯೋ ನೋಡಿಕೊಂಡು ಹೋಗಲು ಬಂದೆನು.

ಪಂ. ಗಿ.— ನಾನು ಇಲ್ಲಿ ಬಹಳ ಸುಖದಲ್ಲಿದ್ದೇನೆ. ನನ್ನ ಒಡೆಯನು ನನಗೆ ಚಿನ್ನದ ಪಂಜರ ಮಾಡಿಸಿದ್ದಾನೆ. ತಿನ್ನಲು ದಿನಾಲೂ ತರತರದ ಹಣ್ಣು-ಹಂಪಲು ಕೊಡುತ್ತಾನೆ. ನಿನಗೆ ಈ ಸುಖವಿರುವದೇ ?

ಹಾ. ಗಿ.— ನನಗೆ ಈ ಸುಖವಿಲ್ಲ. ನನ್ನ ಆಹಾರ ದೊರಕಿಸಲು ನಾನು ಪ್ರತಿ ದಿನ ಬಹಳ ತಿರುಗಾಡಬೇಕಾಗುತ್ತದೆ. ಒಮ್ಮೊಮ್ಮೆ ಒಳ್ಳೆಯ ಹಣ್ಣು-ಹಂಪಲು ದೊರೆಯದೇ ಉಪವಾಸ ಮಾಡಬೇಕಾಗುತ್ತದೆ. ಆದರೂ ನಾನು ನಿನಗಿಂತ ಸುಖದಿಂದ ಇರುವೆನು.

ಪಂ. ಗಿ.— ( ನಕ್ಕು ) ಅದು ಹೇಗೆ ? ನನಗೆ ಕುಳಿತಲ್ಲಿಯೇ ತರತರದ ಹಣ್ಣು-ಹಂಪಲುಗಳು ತಿನ್ನಲು ದೊರೆಯುತ್ತವೆ. ನಾನು ವಾಸಿಸಲು ಬಂಗಾರದ ಮನೆಯಿದೆ. ನನ್ನ ಒಡೆಯನು ನನ್ನನ್ನು ಪ್ರೀತಿಸುತ್ತಾನೆ. ಅಂದ ಮೇಲೆ ನಿನ್ನ ಕಿಂತಲೂ ನನ್ನ ಸುಖವೇ ಹೆಚ್ಚಲ್ಲವೇ ?

ಹಾ. ಗಿ.— ನಿನ್ನ ಸುಖವು ನನ್ನ ಸುಖಕ್ಕಿಂತ ಮೇಲಲ್ಲ. ಯಾಕಂದರೆ ನೀನು ಪರತಂತ್ರನಾಗಿರುವಿ. ಪಂಜರದಲ್ಲಿ ಸೆರೆಯಾಳಾಗಿರುವಿ. ನಿನಗೆ ಊಟ-ಉಡುಗೆ ಗಳು ದೊರೆತರೂ ನೀನು ಹೊರಗೆ ಹಾರಾಡಲು ಸ್ವಾತಂತ್ರ್ಯವಿದೆಯೇ ? ನನ್ನನ್ನು ನೋಡು ನಾನು ಈಗ ಎಲ್ಲಿ ಬೇಕಾದಲ್ಲಿ ಹೋಗಬಹುದು. ನೀನು ಮಾತ್ರ ಪಂಜರ ದಲ್ಲಿಯೇ ಚಿಲಿಪಿಲಿ ಮಾಡುತ್ತ ಕುಳಿತುಕೊಳ್ಳಬೇಕಾಗುವದು. ನಿನ್ನ ಒಡೆಯನು ನಿನ್ನನ್ನು ತನ್ನ ಮೋಜಿಗಾಗಿ ಪ್ರೀತಿಸುತ್ತಾನಲ್ಲದೇ ನಿನ್ನನ್ನು ಅವನು ನಿಜವಾಗಿ ಪ್ರೀತಿಸು ವದಿಲ್ಲ.

ಪಂ. ಗಿ — ನೀನು ಸುಳ್ಳೆ ನನ್ನ ಒಡೆಯನನ್ನು ತೆಗಳಬೇಡ. ಅವನು ಎಷ್ಟು ದಯಾಳುವಿರುವನೆಂಬುದು ನಿನಗೆ ಗೊತ್ತಿಲ್ಲ. ನನಗೆ ಸ್ವಲ್ಪ ನೋವಾದರೂ ಸಾಕು ಅವನು ಊಟ ಮಾಡುವದಿಲ್ಲ. ನನ್ನ ಸುಖದ ಕಲ್ಪನೆ ನಿನಗಿಲ್ಲ. ನನ್ನ ಸುಖವನ್ನು ನೋಡಿ ನಿನಗೆ ಅಸೂಯೆಯಾಗಿದೆ. ಅದಕ್ಕೆ ಹೀಗೆ ಮಾತನಾಡುತ್ತೀ.

ಹಾ. ಗಿ.— ಹಾಗೇನೂ ತಿಳಿಯಬೇಡ ಗೆಳೆಯಾ, ನಾನು ನಿನ್ನ ಸುಖವನ್ನು ನೋಡಿ ಅಸೂಯೆ ಪಟ್ಟಿಲ್ಲ. ನಿನಗಾಗಿ ಕರುಣೆಯನ್ನು ತಾಳುತ್ತಿದ್ದೇನೆ. ನಿನ್ನ ಒಡೆ ಯನು ನಿನ್ನನ್ನು ಪ್ರೀತಿಸುತ್ತಿದ್ದರೆ ಅವನು ನಿನ್ನನ್ನು ಪಂಜರದಿಂದ ಕಳುಹಿಸುವನೇನು ಕೇಳು. ಆಗ ತಿಳಿಯುವದು ನನ್ನ ಮಾತಿನ ಅರ್ಥ.

ಪಂ. ಗಿ.— ನನಗೇನೂ ಈಗ ಹೊರಗೆ ಬರುವ ಇಚ್ಛೆ. ಹೊರಗೆ ಬಂದು ಗೋಳಾಡುವದರಲ್ಲೇನಿದೆ ಪಂಜರದ ಸುಖವು ಹೊರಗಿಲ್ಲ. ನೀನು ಒಮ್ಮೆ ಪಂಜರ ದಲ್ಲಿ ಬಂದು ನೋಡು.

ಹಾ. ಗಿ.— ಸ್ವಾತಂತ್ರ್ಯದ ಸುಖದ ಮುಂದೆ ಪಂಜರದ ಸುಖ ಏನೂ ಅಲ್ಲ. ಕಷ್ಟವಿದ್ದರೂ ಚಿಂತೆಯಿಲ್ಲ ನಾನು ಪಂಜರದಲ್ಲಿ ಬರುವದಿಲ್ಲ. ಹೊರಗೇ ಉಳಿಯು- ತ್ತೇನೆ. ಪಂಜರದ ಸುಖಕ್ಕಿಂತ ಸ್ವಾತಂತ್ರ್ಯದ ಸುಖವೇ ಹೆಚ್ಚು. ಈಗ ನಾನು ಹೋಗಬೇಕು. ಇನ್ನೂ ನಿನಗೆ ತಿಳುವಳಿಕೆ ಬಂದಿಲ್ಲ. ಕೆಲವು ದಿನ ಬಿಟ್ಟು ಮತ್ತೆ ಬರುತ್ತೇನೆ. ಆಗ ಮತ್ತೆ ಮಾತನಾಡೋಣ.

ಪಂ. ಗಿ.— ಹೋಗು, ಹೋಗು. ನನ್ನ ಸುಖ ನನಗೇ ಇರಲಿ. ಇದೇ ನನಗೆ ಹೆಚ್ಚು. ( ಹಾರಾಡುವ ಗಿಳಿ ಹಾರಿ ಹೋಗುವದು. ಪಂಜರದ ಗಿಳಿ ತಿರ ಸ್ಕಾರದಿಂದ ನಗುವದು. )

(ಬ) ಕೆಳಗಿನ ವಿಷಯಗಳಲ್ಲಿ ಒಂದನ್ನು ಕುರಿತು ಸಂಭಾಷಣೆ ಬರೆಯಿರಿ.

೧. ಒಬ್ಬ ಬಾಲಕಿ ಒಂದು ಪಾತರಗಿತ್ತಿಯನ್ನು ಹಿಡಿಯುವಳು. ಅದು ಅವಳಿಂದ ಪಾರಾಗಲು ಬಯಸುವದು. ಇಬ್ಬರಲ್ಲಿಯೂ ಸಂಭಾಷಣೆ ನಡೆಯುವದು.

೨. ಒಬ್ಬ ಹಳ್ಳಿಯವನು ಒಂದು ಪಟ್ಟಣಕ್ಕೆ ಬಂದಿದ್ದಾನೆ. ಅವನು ದಾರಿತಪ್ಪಿಸಿ-ಕೊಂಡಿದ್ದಾನೆ. ಒಬ್ಬ ವಿದ್ಯಾರ್ಥಿಯು ಅವನಿಗೆ ಭೆಟ್ಟಿಯಾಗುವನು. ಇಬ್ಬರಲ್ಲಿಯೂ ನಡೆಯುವ ಸಂಭಾಷಣೆ.

೩. ನೀವು ನಿಮ್ಮ ಶಾಲೆಯ ಉತ್ಸವಕ್ಕಾಗಿ ಒಬ್ಬ ಅತಿಥಿಗಳಿಗೆ ಆಮಂತ್ರಣ ಕೊಡಲು ಹೋಗಿರುವಿರಿ. ಆಗ ನಿಮ್ಮಿಬ್ಬರಲ್ಲಿ ನಡೆಯುವ ಸಂಭಾಷಣೆ.

ಕೆಳಗಿನ ವಿಷಯಗಳಲ್ಲಿ ಒಂದನ್ನು ಕುರಿತು ಒಂದು ಸಂವಾದವನ್ನು ಬರೆಯಿರಿ.

೧. ಹಳ್ಳಿಯವಾಸ ಮತ್ತು ಪಟ್ಟಣವಾಸ ಇವುಗಳಲ್ಲಿ ಯಾವದು ಒಳ್ಳೆಯದು ಎಂದು ಇಬ್ಬರು ವಿದ್ಯಾರ್ಥಿಗಳಲ್ಲಿ ನಡೆಯುವ ಸಂವಾದ.

೨. ದೇಹಬಲ ಹೆಚ್ಚೋ ಬುದ್ಧಿಬಲ ಹೆಚ್ಚೋ ಎಂದು ಇಬ್ಬರು ಗೆಳೆಯರಲ್ಲಿ ನಡೆದ ಸಂವಾದ.

೩. ಮಾವಿನಹಣ್ಣು ಮತ್ತು ಬಾಳೆಯಹಣ್ಣು ಇವುಗಳಲ್ಲಿ ತಮ್ಮ ತಮ್ಮ ಗುಣ ಹೆಚ್ಚೆಂಬ ಬಗ್ಗೆ ಸಂವಾದ.

## ೨೭. ಬೆನಗಲ್ ನರಸಿಂಗರಾವ

[ ಕರ್ನಾಟಕದಲ್ಲಿ ಪ್ರಭಾವಶಾಲಿಯಾದ ವ್ಯಕ್ತಿಗಳು ಅನೇಕರಿರುವರು. ನಮ್ಮವರೇ ಆದ ಅಂಥ ಶ್ರೇಷ್ಠ ಮಹನೀಯರ ಪರಿಚಯ ನಮಗೆ ಎಷ್ಟೋ ಸಲ ಇರುವದೇ ಇಲ್ಲ. ಅಂತೆಯೇ ಜಗತ್ಪ್ರಸಿದ್ಧರಾದ, ಕನ್ನಡಿಗರಾದ ಬೆನಗಲ್ ನರಸಿಂಗರಾಯರ ವ್ಯಕ್ತಿ ಚಿತ್ರವನ್ನು ಇಲ್ಲಿ ಕೊಟ್ಟಿದೆ. ]

■ ■ ■

"ಈ ವರೆಗೆ ನೀನು ಪ್ರತಿಯೊಂದು ಪರೀಕ್ಷೆಯಲ್ಲಿ ಇಡೀ ವಿಶ್ವವಿದ್ಯಾಲಯಕ್ಕೆ ಮೊದಲನೆಯ ಸ್ಥಾನ ಪಡೆಯುತ್ತ ಬಂದಿರುವಿ. ಕಳೆದ ವರುಷ ಇದೇ ಬಿ. ಎ. ಪರೀಕ್ಷೆಯಲ್ಲಿ ಮೂರು ವಿಷಯಗಳಲ್ಲೂ ಸರ್ವಪ್ರಥಮ ಗುಣಾಂಕ ದೊರಕಿಸಿ ಮದ್ರಾಸ ಇಲಾಖೆಯಲ್ಲಿಯೇ ಹಿಂದಿನ ವಿಕ್ರಮಗಳನ್ನೆಲ್ಲ ದಾಟಿರುವಿ. ಈ ವರುಷ ಸ್ವೇಚ್ಛೆಯಿಂದ ವಿಷಯ ಬದಲಾಯಿಸಿ ಮತ್ತೊಮ್ಮೆ ಅದೇ ಪರೀಕ್ಷೆಗೆ ಕೂತ ನೀನು ಎರಡನೆಯ ಸ್ಥಾನ ಪಡೆದುದಕ್ಕೆ ಅಳುತ್ತಿರುವದೇಕೆ?" ಎಂದು ಕಾಲೇಜ ಪ್ರಿನ್ಸಿಪಾಲರಿಂದ ನೂರಾರು ಅರ್ಧಶತಮಾನದ ಹಿಂದೆ ಸಂತೈಸಿಕೊಂಡ ಅದ್ವಿತೀಯ ವಿದ್ಯಾರ್ಥಿಯೇ ಬೆನಗಲ್ ನರಸಿಂಗರಾಯರು.



ಬಿ. ಎನ್. ರಾಯರು ಅಚ್ಚ ಕನ್ನಡಿಗರು. ೧೮೮೭ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳದಲ್ಲಿ ಸಾರಸ್ವತ ಸಮಾಜದಲ್ಲಿ ಇವರು ಹುಟ್ಟಿದರು. ಇವರ ತಂದೆಯವರಾದ ರಾಘವೇಂದ್ರ ರಾಯರು ಮದ್ರಾಸ ಸರಕಾರದ ವೈದ್ಯಕೀ ಖಾತೆಯಲ್ಲಿ ಸಹಾಯಕ ಸರ್ಜನರಾಗಿದ್ದರು. ಬೆನಗಲ್ ಮನೆತನವು ಬುದ್ಧಿವಂತರ ಕುಟುಂಬವೆಂದು ದಕ್ಷಿಣ ಕನ್ನಡದಲ್ಲಿ ಹೆಸರಾಗಿದ್ದಿತು. ಮಂಗಳೂರಿನಲ್ಲಿ ಹಾಯಸ್ಕೂಲ ಶಿಕ್ಷಣ ಪಡೆದು, ೧೬ನೆಯ ವಯಸ್ಸಿನಲ್ಲಿಯೇ ನರಸಿಂಗರಾಯರು ಮದ್ರಾಸದ ಮೆಟ್ರಿಕ್ ಪರೀಕ್ಷೆಯಲ್ಲಿ ಇಲಾಖೆಗೆ ಸರ್ವಪ್ರಥಮರಾದರು. ಮುಂದೆ ಯಾವ ಪರೀಕ್ಷೆಯಲ್ಲಿಯೂ ಈ ಸ್ಥಾನವನ್ನವರು ಬಿಟ್ಟಿರಲಿಲ್ಲ. ೧೯೦೬ರಲ್ಲಿ ಅವರು ಮುಂದಿನ ಶಿಕ್ಷಣಕ್ಕಾಗಿ ಇಂಗ್ಲಂಡಕ್ಕೆ ತೆರಳಿದರು. ವಿವಿಧ ವಿದ್ಯಾಲಯದಲ್ಲಿ ಅವರ ಸಮಕಾಲೀನರಲ್ಲಿ ಪಂಡಿತ ಜವಾಹರಲಾಲ ನೆಹರುರವರು ಒಬ್ಬರಾಗಿದ್ದರು. ಕೊನೆಗೆ ಆಯ್. ಸಿ. ಎಸ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಹಿಂದುಸ್ತಾನಕ್ಕೆ ಮರಳಿದೊಡನೆ ರಾಯರು ಅಸಿಸ್ಟಂಟ ಕಲೆಕ್ಟರರಾಗಿ ೨೩ನೆಯ ವಯಸ್ಸಿಗೆ ಆಸಾಮಕ್ಕೆ ಕಳುಹಿಸಲ್ಪಟ್ಟರು.

ನರಸಿಂಗರಾಯರ ೬೬ ವರುಷಗಳ ಜೀವನವು ಎರಡೇ ಕಾಲ ಖಂಡಗಳನ್ನನುಭವಿಸಿತು. ಮೊದಲನೆಯದು ೨೨ ವರುಷಗಳ ವಿದ್ಯಾರ್ಜನೆಯ ಕಾಲ. ಉಳಿದ ೪೪ ವರುಷಗಳು ಸೇವಾಪರಾಯಣತೆಯ ಜೀವನ; ವಿಶ್ರಾಂತಿಯೆಂಬುದು ಅವರಿಗೆ ಗೊತ್ತೇ ಇರಲಿಲ್ಲ. ೧೯೪೪ರಲ್ಲಿ ಕಲಕತ್ತೆಯ ವರಿಷ್ಠ ನ್ಯಾಯಾಧೀಶ ಪದದಿಂದ ನಿವೃತ್ತರಾಗುವವರೆಗೆ ಸರಕಾರದ ಅನೇಕ ಮಹತ್ವದ ಮತ್ತು ಅತ್ಯಂತ ಹೊಣೆಗಾರಿಕೆಯ ಸ್ಥಾನದಲ್ಲಿದ್ದು, ತಮ್ಮ ಕಾರ್ಯ-ತತ್ಪರತೆ, ಅಗಾಧ ಬುದ್ಧಿಸಾಮರ್ಥ್ಯ ಮುಂತಾದವುಗಳಿಂದ ಸರಕಾರದ ಪ್ರೀತಿಪಾತ್ರರಾದರು. ನಿಸ್ಪೃಹತೆ,

ನ್ಯಾಯ–ನಿಷ್ಠುರತೆ, ಬಡವರ ಬಗ್ಗೆ ಕನಿಕರ ಮುಂತಾದವುಗಳಿಂದ ಸರಕಾರದ ಪ್ರೀತಿಯಷ್ಟೇ ಜನಪ್ರಿಯತೆಯನ್ನು ಹೊಂದಿದರು. ಕೌಟುಂಬಿಕ ಸುಖವು ಪ್ರಾರಂಭದಿಂದಲೇ ಅವರಿಗಷ್ಟೊಂದು ಲಭಿಸಿಲ್ಲವಾದ್ದರಿಂದ ಅವರು ತಮ್ಮ ಆಯುಷ್ಯವನ್ನೆಲ್ಲ ಪರಸೇವೆಯಲ್ಲಿ ಕಳೆದರು. ಹಣ ಶೇಖರಿಸುವತ್ತ ಅವರೆಂದೂ ಗಮನ ಕೊಡಲಿಲ್ಲ. ಸರಕಾರಿ ಅಧಿಕಾರಸ್ಥರು ಸಾರ್ವಜನಿಕ ಸೇವೆಯಲ್ಲಿ ಮನಸ್ಸು ಹಾಕಿದ ಉದಾಹರಣೆಗಳು ಆ ಕಾಲದಲ್ಲಂತೂ ಅತಿ ವಿರಳ. ರಾಯರು ಮಾತ್ರ ಪ್ರಾರಂಭದಿಂದಲೇ ಜನತಾ–ಜನಾರ್ದನನ ಒಂದಿಲ್ಲೊಂದು ಸೇವೆಯಲ್ಲಿ ಕಚೇರಿಯ ಹೊರಗಿನ ತಮ್ಮ ಸಮಯವನ್ನು ಕಳೆಯುತ್ತಿದ್ದರು. ಆದರೆ ಅವರು ಕೀರ್ತಿವಿಮುಖರಾಗಿದ್ದರು. ಆದ್ದರಿಂದ ಅವರ ಬಗ್ಗೆ ಮೊನ್ನೆ ಮೊನ್ನೆಯವರೆಗೆ ಜನತೆಗೆ ಯಾವ ಪರಿಚಯವೂ ಇದ್ದಿರಲಿಲ್ಲ.

ಆಸಾಮವು ಚಳಿಜ್ವರದ ತೌರುಮನೆ. "ಕಾಲಾ ಬುಖಾರ" ಎಂಬ ವಿಶಿಷ್ಟ ಸ್ವರೂಪದ ಭಯಾನಕ ಬೇನೆಯೊಂದು ವರ್ಷಂಪ್ರತಿ ಸಹಸ್ರಾರು ಜನರನ್ನು ನುಂಗುತ್ತಲಿದ್ದಿತು. ಅದಕ್ಕೆ ಸ್ವಾಭಾವಿಕವಾಗಿ ಬಡವರೇ ಹೆಚ್ಚು ತುತ್ತಾಗುತ್ತಿದ್ದರು. ಅವರನ್ನು ಮೃತ್ಯುಮುಖದಿಂದ ಪಾರುಗಾಣಿಸಲು ರಾಯರು ತಮ್ಮ ಮಾಸಿಕ ಗಳಿಕೆಯ ಅಂಶವನ್ನೆಷ್ಟೋ ವೆಚ್ಚ ಮಾಡುತ್ತಿದ್ದರು. ಬಂಗಾಲದಲ್ಲಿ ಕುಷ್ಟರೋಗವು ಮನೆಮಾಡಿಕೊಂಡಿದ್ದಿತು. ಅದರ ನಿವಾರಣೆಗಾಗಿ ರಾಯರು ಆ ಪ್ರಾಂತದಲ್ಲಿರುವಾಗ ಎಷ್ಟೋ ವರ್ಷಗಳ ವರೆಗೆ ತನು–ಮನ–ಧನಗಳಿಂದ ಶ್ರಮಿಸಿದ್ದುಂಟು. ಆದರೆ ಬಲಗೈಯಿಂದ ಮಾಡಿದ ಸೇವೆಯಾಗಲಿ, ಕೊಟ್ಟ ಕೊಡುಗೆಯಾಗಲಿ ಎಡಗೈಗೆ ತಿಳಿಯದ ರೀತಿಯಲ್ಲಿ ಅವರು ವರ್ತಿಸುತ್ತಿದ್ದರು. ನ್ಯಾಯವೆಂದು ಕಂಡು ಬಂದ ಯಾವದೇ ವಿಷಯದಲ್ಲಿ ಸರಕಾರದ ವಿರುದ್ಧ ಸಹ ತೀರ್ಪು ಕೊಡಲು ನರಸಿಂಗರಾಯರು ಹಿಂಜರಿಯುತ್ತಿದ್ದಿಲ್ಲ. ಅಖಿಲ ಭಾರತ ಸ್ವರೂಪದ ಎಷ್ಟೋ ಪಂಚಾಯತಿಗಳ ಹಿರಿತನವು ಮೇಲಿಂದ ಮೇಲೆ ಅವರ ಪಾಲಿಗೆ ಬರುತ್ತಿದ್ದಿತು. ಹಿಂದಿನ ಜಿ. ಆಯ್. ಪಿ. ರೇಲ್ವೆ ಅಧಿಕಾರಿ ಮಂಡಳ ಮತ್ತು ಕಾರ್ಮಿಕ ಸಂಘಗಳಲ್ಲಿ ಉಂಟಾದ ತಂಟೆ ನಿವಾರಣೆಗೆ ನಿಯಮಿಸಲ್ಪಟ್ಟಾಗ ರಾಯರ ಯೋಗ್ಯತೆಯು ಕಂಡುಬಂದಿತು. ಸ್ವಾತಂತ್ರ್ಯ ಪೂರ್ವದಲ್ಲಿ ಹಿಂದು ಸ್ಥಾನದ ರಿಝರ್ವ ಬ್ಯಾಂಕಿಗೂ ಮಧ್ಯಪ್ರಾಂತದ ಸರಕಾರಕ್ಕೂ ಒಮ್ಮೆ ಮತ ಭೇದ ಉಂಟಾದಾಗ ತಿಳುವಳಿಕೆಯನ್ನುಂಟು ಮಾಡುವ ಕಾರ್ಯವನ್ನು ಕೇಂದ್ರ ಸರಕಾರದವರು ರಾಯರಿಗೊಪ್ಪಿಸಿದ್ದರು. ಅದನ್ನವರು ಅತ್ಯಂತ ಸಮಾಧಾನ ಕರವಾಗಿ ಬಗೆಹರಿಸಿ ಸರ್ವರ ಪ್ರಶಂಸೆ ಪಡೆದರು. ಕಾಯಿದೆ ಪಂಡಿತರಾದಾಗ್ಯೂ

ಅವರು ಕಾನೂನಿಗಿಂತ ಸತ್ಯನೀತಿಗಳಿಗೆ ಪ್ರಾಧಾನ್ಯ ಕೊಡುತ್ತಿದ್ದರೆಂಬ ಬಗ್ಗೆ ಒಂದು ಉದಾಹರಣೆಯನ್ನು ನೋಡಬಹುದು. ಕಲಕತ್ತೆಯ ಹಾಯಕೋರ್ಟಿನಲ್ಲಿ ಇವರೆದುರು ಬಂದ ಮೊಕದ್ದಮೆಯಲ್ಲಿ ಆರೋಪಿಯು ಸತ್ಯ–ನ್ಯಾಯ–ನೀತಿಗಳ ದೃಷ್ಟಿಯಿಂದ ನಿರ್ದೋಷಿಯಾಗಿದ್ದಾನೆಂದು ರಾಯರ ಮನವರಿಕೆಯಾಯಿತು. ಆದರೆ ಕಟ್ಟಳೆಗೆ ಅನುಸರಿಸಿ ಆರೋಪಿಗೆ ದಂಡ ವಿಧಿಸದೆ ಗತ್ಯಂತರವಿರಲಿಲ್ಲ. ಆಗ ತಾವೇ ವಿಧಿಸಿದ ದಂಡದ ಹಣವನ್ನು ರಾಯರು ತಮ್ಮ ಜೇಬಿನಿಂದಲೇ ಕೊಟ್ಟು ಆರೋಪಿಗೆ ಹಾನಿ ತಟ್ಟದಂತೆ ಮಾಡಿದರು.

ನರಸಿಂಗರಾಯರು ಸಮಸ್ತ ಭಾರತಕ್ಕೆ ಪರಿಚಿತರಾದದ್ದು ೧೯೪೭ರಲ್ಲಿ ಘಟನಾ ಸಮಿತಿಯ ಸಲಹೆಗಾರರೆಂದು ನೇಮಕವಾದಾಗ. ಈ ನೇಮಕವನ್ನು ಸ್ವೀಕರಿಸುವಾಗ, ಅದಕ್ಕೆ ಸಲ್ಲತಕ್ಕ ಪ್ರತಿಫಲದ ಹಣವನ್ನು ತಾವು ತೆಗೆದುಕೊಳ್ಳದೆ ದೇಶಸೇವೆ ಮಾಡುವೆನೆಂದು ನಿರ್ಧರಿಸಿ ಅದರಂತೆ ನಡೆದರು. ಅಧ್ಯಕ್ಷ ರಾಜೇಂದ್ರಪ್ರಸಾದರು ಮತ್ತು ಪ್ರಧಾನ ಮಂತ್ರಿ ನೆಹರುರವರು ಮಾತ್ರವಲ್ಲದೆ ಲಾರ್ಡ ವಾವೆಲ್ಲರು ಮತ್ತು ಮೌಂಟಬ್ಯಾಟನ್ನರು ವ್ಹಾಯಿಸರಾಯರಿದ್ದಾಗ ಅವರೂ ಕೂಡ ನರಸಿಂಗರಾಯರ ಘಟನಾ ಪಾಂಡಿತ್ಯವನ್ನು ಮನಗಂಡಿದ್ದರು. ಅಲ್ಪಾವಧಿಯಲ್ಲಿ ಜಗತ್ತಿನ ಬೇರೆ ಬೇರೆ ಸುಮಾರು ೧೩೦ ಘಟನೆಗಳನ್ನು ಅಭ್ಯಸಿಸಿ ಹಿಂದುಸ್ತಾನಕ್ಕೆ ಸರಿಹೋಗಬಹುದಾದ ಘಟನೆಯ ಕರಡೊಂದನ್ನು ರಾಯರು ತ್ವರಿತ ಸಿದ್ಧಪಡಿಸಿದರು. ಸ್ವಲ್ಪೇ ಶಬ್ದಗಳಲ್ಲಿ ಅರ್ಥಪೂರ್ಣ ಅನೇಕ ವಿಷಯಗಳನ್ನು ಸೂತ್ರೀಕರಿಸುವದರಲ್ಲಿ ಅವರಷ್ಟು ಜಾಣರಿನ್ನೊಬ್ಬರಿರಲಿಲ್ಲ. ಒಮ್ಮೆ ಮೂವತ್ತೈದು ಪುಟಗಳನ್ನು ವ್ಯಾಪಿಸಿರುವ ಹಲವು ಕಾನೂನಿನ ವಿವರಗಳನ್ನು ಇವರು ಹತ್ತೇ ವಾಕ್ಯಗಳಲ್ಲಿ ಅದರ ತಾತ್ಪರ್ಯವನ್ನು ಚಾಚೂ ಬಿಡದೆ ಸೂತ್ರೀಕರಿಸಿದ್ದನ್ನು ನೋಡಿ ಅನೇಕ ಕಾಯ್ದೆ ಪಂಡಿತರು ಅಚ್ಚರಿಗೊಂಡರು.

ಭಾರತವು ಸ್ವತಂತ್ರವಾದ ಕೇವಲ ಎರಡೂವರೆ ವರ್ಷಗಳಲ್ಲಿ ಭಾರತೀಯರು ಹೊಸ ಘಟನೆ ಸಿದ್ಧಪಡಿಸಿ ಅದನ್ನು ಕಾರ್ಯಾಚರಣೆಯಲ್ಲಿ ತರಲು ಸಮರ್ಥರಾದುದರ ಬಹು ಶ್ರೇಯಸ್ಸು ನರಸಿಂಗರಾಯರಿಗೆ ಸಲ್ಲುವದೆಂದು ಅವರ ನಿಧನದ ನಂತರ ಸಂಸತ್ತಿನಲ್ಲಿ ಅನೇಕರು ಒಪ್ಪಿಕೊಂಡರು. ಸಂಸತ್ತಿನ ಸದಸ್ಯರಲ್ಲದವರ ಬಗ್ಗೆ ಸಾಮಾನ್ಯವಾಗಿ ಸಂಸತ್ತಿನ ದುಃಖಸೂಚಕ ಗೊತ್ತುವಳಿ ಬರುತ್ತಿರುವದಿಲ್ಲ. ಈ ನಿಯಮವನ್ನು ಮಹಾತ್ಮಾ ಗಾಂಧಿಯವರ ನಿಧನಾನಂತರ ಒಮ್ಮೆ ಮತ್ತು ಸ್ಟಾಲಿನ್ನರ ಮರಣೋತ್ತರ ಇನ್ನೊಮ್ಮೆ ಹೀಗೆರಡು ಸಲ ಮಾತ್ರ ಸಡಲಿಸಲಾಗಿತ್ತು. ತರುವಾಯ ಮೂರನೆಯ ಸಲ ಸಡಲಿಸಿದ್ದು ನರಸಿಂಗರಾಯರ ಮರಣ

ಸಂಬಂಧದಲ್ಲಿ. ರಾಯರು ೧೯೫೩ ನವ್ಹೆಂಬರ ೩೦ನೇ ದಿನಾಂಕ ಸ್ವಿಝರ್ಲಂಡದ ಜೂರಿಚ್ ನಗರದ ಚಿಕಿತ್ಸಾಲಯದಲ್ಲಿ ನಿಧನಹೊಂದಿದರು. ಮರುದಿನವೇ ಅವರ ಬಗ್ಗೆ ಪಂ. ನೆಹರುರವರನ್ನು ಒಳಗೊಂಡು ಪಾರ್ಲಿಮೆಂಟಿನ ಅನೇಕ ಪ್ರಮುಖರು ರಾಯರ ನಿಧನದ ಬಗ್ಗೆ ಕಂಬನಿ ಸುರಿಸಿದರು, ಮುಕ್ತಕಂಠದಿಂದ ಅವರನ್ನು ಹೊಗಳಿದರು. ಯುಕ್ತರಾಷ್ಟ್ರಸಂಘದಲ್ಲಿ ಕೂಡ ಈ ಬಗ್ಗೆ ದುಃಖಪ್ರದರ್ಶನ ಲಾಯಿತು.

ನರಸಿಂಗರಾಯರು ಅಂತರ್‌ರಾಷ್ಟ್ರೀಯ ಖ್ಯಾತಿ ಪಡೆದದ್ದು ಯುಕ್ತರಾಷ್ಟ್ರ ಸಂಘಕ್ಕೆ ಅವರು ಸಲ್ಲಿಸಿದ ಸೇವೆಯ ಮೂಲಕ. ಭಾರತದ ಅಗ್ರಪ್ರತಿನಿಧಿಗಳಾಗಿ ನಾಲ್ಕು ವರ್ಷ ಮಾಡಿದ ಅವರ ಸೇವೆಯನ್ನು ಭಾರತವೆಂದೂ ಮರೆಯುವಂತಿಲ್ಲ. ಆದರೆ ಯುಕ್ತರಾಷ್ಟ್ರಸಂಘದಲ್ಲಿ ಅವರು ಸರ್ವಪ್ರಿಯರಾಗಲು ಅವರ ಅಲೌಕಿಕ ಬುದ್ಧಿ ಮತ್ತೆ, ಅತ್ಯಂತ ಶಾಂತವೃತ್ತಿ ಮತ್ತು ಎಲ್ಲರನ್ನೂ ಸಮಭಾವನೆಯಿಂದ ನೋಡುವ ದೃಷ್ಟಿಯೇ ಮುಖ್ಯ ಕಾರಣವು. ಯಾವ ತೊಡಕೇ ಉಂಟಾಗಲಿ ಅದನ್ನು ಬಿಡಿಸಲು ಪರರಾಷ್ಟ್ರ ಪ್ರತಿನಿಧಿಗಳು ಕೂಡ ರಾಯರಿಗೆ ಮೊರೆ ಹೋಗುತ್ತಿದ್ದರು. ಇದರಿಂದ ಅರವತ್ತು ರಾಷ್ಟ್ರಗಳ ಸಂಘದಲ್ಲಿ ಅವರ ಸ್ವಂತದ ಹೆಸರು ಮಾತ್ರವಲ್ಲದೆ ಭಾರತದ ಕೀರ್ತಿಯೂ ಸರ್ವತೋಮುಖವಾಯಿತು. ಅವರ ನಿಧನಾನಂತರ ರಶಿಯದ ವಿದೇಶ ಉಪಮಂತ್ರಿಯೂ ಯುಕ್ತರಾಷ್ಟ್ರ ಸಂಘದಲ್ಲಿ ವಿಶೇಷ ಪ್ರಭಾವಶಾಲಿಯೆನಿಸಿದವರೂ ಆದ ಎಮ್. ವಿಶಿನಸ್ಕಿಯವರು ಅವರನ್ನು ಕೊಂಡಾಡಿದರಲ್ಲದೆ ಅವರ ಮರಣದಿಂದ ರಾಷ್ಟ್ರಸಂಘಕ್ಕೆ ತುಂಬಿಬಾರದ ಹಾನಿಯಾಯಿತೆಂದು ನುಡಿದರು. ಅಂತರ್‌ರಾಷ್ಟ್ರೀಯ ಕ್ಷೇತ್ರದಲ್ಲಿ ಹಿಂದುಸ್ತಾನಕ್ಕೆ ಮಹತ್ವವುಂಟಾಗಲು ಕಾರಣರಾದ ನರಸಿಂಗರಾಯರ ಬಗ್ಗೆ ರಾಷ್ಟ್ರಪತಿಗಳಿಗೂ ಅಭಿಮಾನವೆನಿಸುತ್ತಿದ್ದುದರಲ್ಲಿ ಏನಾಶ್ಚರ್ಯ !

ಈ ಪರಿ ಕನ್ನಡಿಗರೊಬ್ಬರು ಕರ್ನಾಟಕಕ್ಕೆ ಅಷ್ಟೇ ಅಲ್ಲದೆ, ಸಮಸ್ತ ಭಾರತಕ್ಕೇ ಕೀರ್ತಿಯನ್ನುಂಟುಮಾಡಿದ್ದು ನಮ್ಮೆಲ್ಲರಿಗೆ ಹೆಮ್ಮೆಯ ವಿಷಯವಾಗಿದೆ.

**ಶಬ್ದಾರ್ಥ:**

ಅಪ್ರತೀಯ - ಸಾಟಿಯಿಲ್ಲದ, ಹೆಸರಾದ; ನಿವೃತ್ತ - ಬಿಡುಗಡೆಯಾದ; ಶೇಖರಿಸು - ಕೂಡಿಡುವುದು; ಸೂತ್ರ - ಬಹಳ ವಿಷಯವನ್ನು ಸ್ವಲ್ಪದರಲ್ಲಿಯೇ ಹೇಳುವದು; ಚಾಚೂಬಿಡದೆ - ಸ್ವಲ್ಪವೂ ಬಿಡದೆ; ಅಗ್ರ - ಶ್ರೇಷ್ಠ, ಹೆಚ್ಚಿನ.

**ಪ್ರಶ್ನೆ:**

೧. ವಿದ್ಯಾರ್ಥಿಯಿದ್ದಾಗ ಬೆನಗಲ್ ನರಸಿಂಗರಾಯರು ಅಳುತ್ತಿದ್ದ ಕಾರಣವೇನು? ಇದರಿಂದ ಅವರ ಸ್ವಭಾವ ಎಂತಹದು ಎಂದು ತಿಳಿದು ಬರುವದು ?
೨. ಬಿ. ಎನ್. ರಾಯರ ವಿದ್ಯಾಭ್ಯಾಸದ ಬಗ್ಗೆ ಕೆಲವು ವಾಕ್ಯ ಬರೆಯಿರಿ.
೩. ಬಿ. ಎನ್. ರಾಯರು ಸರಕಾರದ ದೊಡ್ಡ ಹುದ್ದೆಯಲ್ಲಿದ್ದರೂ ಜನತಾ ಜನಾರ್ದನನ ಸೇವೆ ಮರೆತಿರಲಿಲ್ಲ ಎಂಬುವದಕ್ಕೆ ಒಂದು ಉದಾಹರಣೆಯನ್ನು ಕೊಡಿರಿ.
೪ ರಾಯರು ಕಾನೂನಿಗಿಂತ ಸತ್ಯ – ನೀತಿಗಳಿಗೆ ಪ್ರಾಧಾನ್ಯ ಕೊಡುತ್ತಿದ್ದರೆಂದು ಹೇಗೆ ಹೇಳುವಿರಿ ?
೫. ರಾಯರು ಭಾರತದಲ್ಲಿ ಎಲ್ಲರಿಗೂ ಗೊತ್ತಾದದ್ದು ಯಾವಾಗ ? ಆಗ ಯಾವ ಮಹತ್ವದ ಕೆಲಸ ಮಾಡಿದರು ?
೬. ರಾಯರು ಅಂತರ್‌ರಾಷ್ಟ್ರೀಯ ವ್ಯಕ್ತಿ ಎಂದು ಹೇಗೆ ಅನಿಸಿಕೊಂಡರು ?
೭. ರಾಯರು ಯಾವ ಹಿರಿತನದ ಕೆಲಸಗಳನ್ನು ಮಾಡಿದರು ?
೮. ರಾಯರ ಸ್ವಭಾವದಲ್ಲಿ ಕಂಡು ಬಂದ ಹಲವು ವಿಶೇಷ ಗುಣಗಳನ್ನು ಬರೆಯಿರಿ.

**ವ್ಯಾಕರಣ:**

### ಪುರುಷ

(ಅ) ಕೆಳಗಿನ ವಾಕ್ಯಗಳನ್ನು ನಿರೀಕ್ಷಿಸಿರಿ.

೧) **ನಾನು** ಬೆನಗಲ್ ನರಸಿಂಗರಾಯರನ್ನು ನೋಡಿದ್ದೆನು.
೨) **ನೀನು** ನರಸಿಂಗರಾಯರನ್ನು ಕಂಡಿದ್ದೆಯಾ ?
೩) **ಅವರು** ಯುಕ್ತರಾಷ್ಟ್ರಸಂಘದಲ್ಲಿ ಒಳ್ಳೆಯ ಹೆಸರನ್ನು ಪಡೆದಿದ್ದರು.

ಇಲ್ಲಿ ದಪ್ಪಕ್ಷರದಲ್ಲಿ ಬಂದ ಶಬ್ದಗಳು ಯಾವ ಪುರುಷದಲ್ಲಿವೆ ? ಈಗಾಗಲೇ ನೀವು ಪುರುಷಾರ್ಥಕ ಸರ್ವನಾಮಗಳನ್ನು ಕಲಿತಿರುವಿರಿ. ಹಾಗಾದರೆ ಕನ್ನಡದಲ್ಲಿ ಪುರುಷಗಳು ಎಷ್ಟು ?

ಕನ್ನಡದಲ್ಲಿ **ಉತ್ತಮ, ಮಧ್ಯಮ** ಹಾಗೂ **ಪ್ರಥಮ** ಎಂದು **ಮೂರು ಪುರುಷ**ಗಳುಂಟು.

**ನಾನು** ಎನ್ನುವದು **ಉತ್ತಮ ಪುರುಷ.** ಯಾಕಂದರೆ ಯಾವಾಗಲೂ ಮನುಷ್ಯನಿಗೆ ತನ್ನದೆನ್ನುವದು ಹೆಚ್ಚಿನದೆನಿಸುತ್ತದೆ.

**ನೀನು** ಎನ್ನುವದು **ಮಧ್ಯಮ ಪುರುಷ.** ಯಾಕಂದರೆ ತನ್ನ ಬಳಗದವರಿಗೆ ಸಮೀಪದವರಿಗೆ ಮನುಷ್ಯನು ತನ್ನಕಿಂತಲೂ ಸ್ವಲ್ಪ ಕಡಿಮೆ ಗಮನವನ್ನು ಕೊಡುತ್ತಾನೆ.

**ಅವರು** ಎನ್ನುವದು **ಪ್ರಥಮ ಪುರುಷ.** ಇಲ್ಲಿ ಕನಿಷ್ಠ ಎಂಬ ಶಬ್ದವನ್ನು ಉಪಯೋಗಿಸುವದು ಮಾನದ ದೃಷ್ಟಿಯಿಂದ ಸರಿಯೆನಿಸುವದಿಲ್ಲವೆಂದು ಪ್ರಥಮ

ಎಂದು ಶಬ್ದವನ್ನು ಉಪಯೋಗಿಸಲಾಗಿದೆ. ಪ್ರಥಮ ಪುರುಷ ಎಂಬ ಪದದ ಬದಲಾಗಿ **ತೃತೀಯ ಪುರುಷ** ಎಂಬ ಪದವನ್ನೂ ಕೆಲವರು ಉಪಯೋಗಿಸುವರು. ಮನುಷ್ಯನು ತಾನು ಹಾಗೂ ತನ್ನ ಸಮೀಪದವರಕಿಂತಲೂ ಇತರರಿಗೆ ಕಡಿಮೆ ಲಕ್ಷ್ಯಗೊಡುತ್ತಾನೆ. ಆದ್ದರಿಂದ ಇತರರು ತೃತೀಯ ಪುರುಷದಲ್ಲಿ ಬರುತ್ತಾರೆ. ತೃತೀಯ ಪುರುಷಕ್ಕೇ ಪ್ರಥಮ ಪುರುಷವೆಂದು ಹೆಸರು.

ನಾನು, ನಾವು — ಉತ್ತಮ ಪುರುಷ
ನೀನು, ನೀವು — ಮಧ್ಯಮ ಪುರುಷ
ಅವನು, ಅವಳು, ಅದು
ಅವರು, ಅವರು, ಅವು } — ಪ್ರಥಮ ಪುರುಷ.

(ಬ) ಈ ಪಾಠದಲ್ಲಿ ಬಂದ ಶಬ್ದಗಳಲ್ಲಿ ಪ್ರತಿಯೊಂದು ಪುರುಷದ ೫ ಶಬ್ದಗಳನು ಹುಡುಕಿ ತೆಗೆಯಿರಿ.



# ೨೮. ಹೊಲವನೀವ ದೇವ

[ ವಿನೋಬಾ ಅವರು ಭೂದಾನಯಜ್ಞದ ಚಳವಳಿಯಿಂದ, ಜನರಿಗೆ ಹೊಸ ಬೆಳಕನ್ನು ತೋರಿದ್ದಾರೆ. ದರಿದ್ರನಾರಾಯಣರಾಗಿ, ಜನರ ಹೃದಯದಲ್ಲಿ ಕ್ರಾಂತಿ ಮಾಡಲು ನಡೆದಿದ್ದಾರೆ. ಇದರ ವಿಚಾರವನ್ನು ಸಿದ್ಧವ್ವನಹಳ್ಳಿ ಕೃಷ್ಣಶರ್ಮರು ಬಹು ಸರಸವಾಗಿ, ಮನನಾಟುವ ರೀತಿಯಲ್ಲಿ ಇಲ್ಲಿ ಬರೆದಿದ್ದಾರೆ. ]

■ ■ ■

ಭೂದಾನದ ಮಾತು ನಾಲ್ಕೂ ದಿಕ್ಕಿಗೂ ಹಬ್ಬಿತು. ಹೆಂಗಸರು ಗಂಡಸರು ಮಕ್ಕಳು ಎಲ್ಲರಿಗೂ ವಿನೋಬಾಜಿಯನ್ನು ನೋಡುವ ಆಸೆ. ಹಳ್ಳಿಯಿಂದ ಹಳ್ಳಿಗೆ ವಿನೋಬಾ ತಮ್ಮ ಯಾತ್ರೆ ಮಾಡುತ್ತಿರುವಾಗ ದಾರಿಯುದ್ದಕ್ಕೂ ಜನರು ಅವರ ದರ್ಶನಾರ್ಥಿಗಳಾಗಿ ನಿಂತಿದ್ದರು. ದಾರಿಯಲ್ಲಿ ಬಂದ ಹಳ್ಳಿಗಳಲ್ಲ ಮಾತ್ರವಲ್ಲ. ಹೊಲಗಳಲ್ಲಿ, ಕಾಡಿನಲ್ಲಿ, ನಡುನಡುವೆ ದೊರೆತ ತಾಳೆಯ ವನಗಳಲ್ಲಿ, ಅಲ್ಲಲ್ಲಿ ಉದ್ದಕ್ಕೂ ಐವತ್ತು–ನೂರು–ಇನ್ನೂರು ಜನ ರೈತರು ಕಣ್ಣಿನಲ್ಲಿ ಪ್ರಾಣವಿಟ್ಟುಕೊಂಡು ಇದಿರು ನೋಡುತ್ತಿದ್ದರು. ಹೆಗಲ ಮೇಲೆ ಕಂಬಳಿ, ಮೊಳಕಾಲಿನ ವರೆಗೆ ಪಂಚೆ, ಕೈಯಲ್ಲಿ ಕೋಲು. ವಿನೋಬಾಜಿಯನ್ನು ಕಣ್ಣುತುಂಬಾ ನೋಡಬೇಕು. ಯಾರೋ ಗಾಂಧಿಯ ಬಂಟ, ಹರಿಯ ಶರಣ ಬರುತ್ತಿದ್ದಾನೆ. ದುಃಖಿಗಳ ದುಃಖಶಮನ ಮಾಡುವ ಶ್ರೀರಾಮ ಬರುತಿದಾನೆ. ಹೊಲವಿಲ್ಲದವರಿಗೆ ಹೊಲವ ನೀಡುವ ಮಹಾನುಭಾವ ಬರುತ್ತಿದಾನೆ. ಧೈರ್ಯವಿಲ್ಲದವರಿಗೆ

ಧೈರ್ಯ ಕೊಡುವ ನಿರ್ಭಯ ಪುರುಷ ಬರುತ್ತಿದ್ದಾನೆ. ಈ ಕೊಡುಗೈ ಶರಣನ ದಾನ ಕೊಡುವ ವೈರಾಗಿಯ ದರ್ಶನ ಏಳೇಳು ಜನ್ಮದ ಪುಣ್ಯ! ಜನರ ಆನಂದಕ್ಕೆ ಮೇರೆಯಿಲ್ಲ. ಹಿಂದೆ ದಂಡಕಾರಣ್ಯದ ಋಷಿಗಳಿಗೆ ಅಭಯ ನೀಡಿ ರಾಕ್ಷಸ ಸಂಹಾರ ಮಾಡಿದಾಗ ಶ್ರೀರಾಮನನ್ನು ಕಂಡು ಆ ವನ, ಆ ಜನ, ಹೇಗೆ ಆನಂದಿಸಿತೋ ಅದೇ ಆನಂದ! ಅದೇ ಭಕ್ತಿಭಾವ! ಎಲ್ಲರ ಬಾಯಲ್ಲೂ ಈ ಹಾಡೇ.



ವಿನೋಬಾ ಎಲ್ಲೆಲ್ಲಿ ದಾರಿ ನಡೆ ದರೋ ಅಲ್ಲಲ್ಲಿ ಬಡವರ ಬಂಧು ಯಾರೋ ಹೋಗುತ್ತಿದ್ದಾರೆ ಎಂದು ಒಂದೊಂದು ಅಂಗೈಯಗಲದ ನೆಲವೂ ಎದ್ದು ಅವರನ್ನು ಸ್ವಾಗತಿಸುವಂತಿತ್ತು. ಮನುಷ್ಯರು ಮಾತ್ರವಲ್ಲ, ಚರಾ-ಚರಕ್ಕೂ ಯಾರೋ ಮಹಾತ್ಮರು ಬರುತ್ತಿದ್ದಾರೆ ಎಂದು ತಿಳಿದಂತಿತ್ತು.

ಜನರು ಹೀಗೆ ತಮ್ಮ ಪಾಲಿನ ಭಗವಂತನನ್ನು ಗುರುತಿಸಿದರೆ ವಿನೋಬಾ ಜನತೆಯಲ್ಲಿ ತಮ್ಮ ದೇವರನ್ನು ದರ್ಶನ ಮಾಡಿಕೊಳ್ಳುತ್ತಾರೆ. ಹಳ್ಳಿಗೆ ಬಂದೊಡನೆ ಮನೆಮನೆಗೂ ಹೋಗಿ ಬರುತ್ತಾರೆ. ಅಡಿಗೆ ಮನೆಯನ್ನು ನೋಡುತ್ತಾರೆ. ಮಕ್ಕಳುಮರಿ, ದನಕರು, ಇಡೀ ಬದುಕನ್ನೇ ನೋಡುತ್ತಾರೆ. ಪ್ರಯೋಗ ಶಾಲೆ ಯಲ್ಲಿ ಯಾವುದೋ ಒಂದು ಪರಿಣಾಮವನ್ನು ಅರಸಿ, ವಿಜ್ಞಾನಿ ಪ್ರಯೋಗ ಮಗ್ನನಾಗಿರುವಂತೆ ವಿನೋಬಾ ಏಕಾಗ್ರತೆಯಿಂದ ಈ ಲೋಕಾಂತದಲ್ಲೂ ಏಕಾಂತ ವನು ಅನುಭವಿಸುತ್ತಾರೆ. ಅವರ ಪಾಲಿಗೆ ಜನರು ನಾರಾಯಣ ಸ್ವರೂಪ. ನರನರನಲ್ಲೂ ನಾರಾಯಣನೇ. ಈ ದೀನದಲಿತರ ಗುಂಪು ವಿರಾಟ್-ಮಾನವ. ಇದೇ ವಿಶ್ವಮಾನವರೂಪ ದರ್ಶನ!

ತೆಲಂಗಾಣದಲ್ಲಿ ಹುಟ್ಟಿದ ಈ ಚಳುವಳಿ ಇಡೀ ಭಾರತವನ್ನೇ ವ್ಯಾಪಿಸಿತು. ವಿನೋಬಾ ಹೋದಲ್ಲೆಲ್ಲ ಭೂಮಿ ಅವರ ಕಡೆಗೆ ಹರಿದು ಬರುತ್ತಿದೆ. ದೊಡ್ಡ ದೊಡ್ಡ ಜಮೀನದಾರರು ಸಾವಿರ ಸಾವಿರ ಎಕರೆ ಹೊಲ ನೀಡಿದರು. ಚಿಕ್ಕ ಪುಟ್ಟ ರೈತರು ಗುಂಟೆ ಎರಡು ಗುಂಟೆಗಳನ್ನೂ ಕೊಟ್ಟರು. ಅವರ ತ್ಯಾಗಕ್ಕೆ ಔದಾರ್ಯಕ್ಕೆ

ಮೇರೆಯೇ ಇಲ್ಲ. ಹಿಂದೆ ಶ್ರೀರಾಮನಿಗಾಗಿ ಕಾದಿದ್ದು ಶಬರಿ ತನ್ನಲ್ಲಿದ್ದ ಬೋರೆಯ ಹಣ್ಣನ್ನು ರಾಮನಿಗೆ ಅರ್ಪಿಸಿ ಪುನೀತಳಾದಳು. ಕೃಷ್ಣನ ಬಳಿಗೆ ಹಿಡಿ ಅವಲಕ್ಕಿಯನ್ನು ಒಯ್ದು ಕೊಟ್ಟು ಸುದಾಮ ಧನ್ಯನಾಗಿ ಹೋದ. ಅಂಥವೇ ನಿಮಿರೆಬ್ಬಿಸುವ ಪ್ರಸಂಗ ಈಗಲೂ ನಡೆದವು.

'ಭೂದಾನದಲ್ಲಿ ಬರೀ ದಾನದ ಮಹತ್ವ ಮಾತ್ರವಿಲ್ಲ. ದಾನದ ಅರ್ಥವೇ ಸಮ ವಿಭಾಗ. ಶಂಕರಾಚಾರ್ಯರೇ ಹೀಗೆ ಅರ್ಥ ಹೇಳಿದಾರೆ. ನಮಗೆ ಭೂಮಿಯೇ ಆಧಾರ. ಪ್ರತಿಯೊಬ್ಬರಿಗೂ ಈ ಆಧಾರ ಸಿಗಬೇಕು. ಹೊಲದಿಂದ ಹಣವಂತರಾಗುವ ಬಯಕೆ ಇರಬಾರದು. ಗಾಳಿ, ಬೆಳಕು, ನೀರು, ದೇವರು ಕೊಟ್ಟ ದಾನ. ಅದರಲ್ಲಿ ಭೇದಭಾವವಿಲ್ಲ. ಪ್ರತಿಯೊಬ್ಬರಿಗೂ ಗಾಳಿ, ಬೆಳಕು, ನೀರು ಬೇಕು. ಹಾಗೆಯೇ ಅನ್ನವೂ ಬೇಕು. ಗಾಳಿ, ನೀರು ಇದ್ದ ಹಾಗೆಯೇ ನೆಲ. ನೆಲವೂ ದೇವರು ಕೊಟ್ಟ ದಾನ. ನಾನು ಸಾರಿ ಹೇಳುತ್ತೇನೆ. ದೇವರು ಕೊಟ್ಟ ನೆಲವನ್ನು ಮನುಷ್ಯ ತನ್ನದು ಎಂದುಕೊಂಡ. ಕೆಲವರು ಮಾತ್ರ ಅದನ್ನು ಪಡೆದು, ಅನೇಕರಿಗೆ ಹೊಲವಿಲ್ಲದಿದ್ದರೆ ಲೋಕದಲ್ಲಿ ಸುಖವಿರದು. ಆ ಏರ್ಪಾಡು ಲೋಕಕಂಟಕ, ಹೊಲ ಎಲ್ಲರಿಗೂ ಸೇರಬೇಕು.' ಹೀಗೆ ವಿನೋಬಾ ಅತ್ಯಂತ ಉತ್ಕಟತೆಯಿಂದ ತಿಳಿಸುತ್ತಾರೆ. ಅವರ ಪ್ರಸನ್ನವಾಣಿ ಗಾಳಿಯಲ್ಲಿ ದನಿದನಿಸುತ್ತ ಹರಡುತ್ತದೆ. ಜನರ ಮನಸ್ಸನ್ನು ಸಂಪಾದನೆಯಿಂದ ದಾನದ ಕಡೆ ತಿರುಗಿಸುತ್ತದೆ. ಆ ವಿಚಾರದ ಪ್ರಭಾವ ಅತಿಶಯ, ಅತ್ಯಂತ.

ಬಡವರಿಗೆ ದಾನ ಕೊಡಿ ಎಂದು ಅವರು ಭಿಕ್ಷೆ ಬೇಡರು. ಹೊಲದ ಹಕ್ಕು ಎಲ್ಲರಿಗೂ ಇದೆ. ದುಡಿಯಬಲ್ಲವನಿಗೆಲ್ಲಾ ಇದೆ. ಆ ಹಕ್ಕನ್ನು ಕಳೆದುಕೊಂಡಿರುವವರಿಗೆ ಅದನ್ನು ಕೊಡಿಸಲು ತಿರುಗುತ್ತಿದಾರೆ. 'ನಾನು ಭಿಕ್ಷೆ ಬೇಡಲು ಬಂದಿಲ್ಲ. ನಿಮಗೆ ಬಡವರ ಸೇವೆಯ ದೀಕ್ಷೆ ಕೊಡಲು ಬಂದಿದೇನೆ' ಎನ್ನುತ್ತಾರೆ. 'ಯಾವ ಮಠ, ಗುಡಿಗೂ ಹೊಲ ಬೇಡುತ್ತಿಲ್ಲ. ದರಿದ್ರ ನಾರಾಯಣನಿಗಾಗಿ ಹೊಲ ಕೇಳುತ್ತಿದ್ದೇನೆ. ನಾನು ಒಂದು ವಿಚಾರ ಹರಡುತ್ತಿದೇನೆ. ಹೊಸ ಕ್ರಾಂತಿಗೆ ದಾರಿ ಮಾಡುತ್ತಿದೇನೆ.' ಎನ್ನುತ್ತಾರೆ. 'ಹೊಸದೊಂದು ಗಾಳಿಯನ್ನು ಹರಡಬೇಕು. ಜನರ ಸದ್ಭಾವನೆಯನ್ನು ಎಚ್ಚರಗೊಳಿಸಬೇಕು. ಒಳಗಿನ ಪ್ರೇಮಭಾವ—ಭಗವಂತ ಎಚ್ಚರವಾಗಲಿ. ಪರಸ್ಪರ ಚಿಂತೆಯೇ ಆ ಪ್ರೇಮಭಾವ, ಅದೇ ಭಗವಂತನ ಗುರುತು.'

'ದಾಸಿಯೆ ದೇವತೆ, ಲೋಭಿಯೆ ರಾಕ್ಷಸ' ಎನ್ನುತ್ತಿದ್ದರು, ನಮ್ಮ ತಾಯಿ. ಇದನ್ನೇ ಎಲ್ಲಾ ಶರಣರೂ ಹೇಳಿದಾರೆ. ಮೋಡ ಮಳೆಗರೆಯುತ್ತದೆ. ಮೋಡ

ಸಮುದ್ರಕ್ಕೆ ನೀರು ಕೊಡುತ್ತದೆ. ಸಮುದ್ರ ಮೋಡಕ್ಕೆ ನೀರು ಕೊಡುತ್ತದೆ. ಹೀಗೆ ಒಂದಕ್ಕೊಂದು ಕೊಡುತ್ತಿದ್ದರೆ ಸೃಷ್ಟಿ ಚನ್ನಾಗಿ ನಡೆಯುತ್ತದೆ. ಒಬ್ಬನಿಗೆ ಸಾವಿರ ಎಕರೆ ಹೊಲವಿದೆ. ಇಷ್ಟು ಹೊಲವನ್ನು ಅವನು ಏನು ಮಾಡಬಲ್ಲ? ಎಷ್ಟೇ ದೊಡ್ಡ ಹೊಟ್ಟೆಯಾದರೂ ೨ ಸಾವಿರ ಎಕರೆ ಹೊಲದ ಬೆಳೆ ಹಿಡಿಸೀತೆ? ಅರಗೀತೆ? ತಿನ್ನಬಲ್ಲಷ್ಟು ತಿನ್ನಿ. ತೆಗೆದಿಡುವ ಬಯಕೆ ಬೇಡ. ನೀವು ತೆಗೆದಿಟ್ಟದ್ದು ನನ್ನದು. ಅದರ ಮೇಲೆ ನನ್ನ ಹಕ್ಕು. ಅಲ್ಲ ಎಂದರೆ, ಕಮ್ಯುನಿಸ್ಟರದು, ಕಳ್ಳಕಾಕರದು. ಹಣಕ್ಕೆ ಮೂರೇ ಗತಿ. 'ದಾನಂ ಭೋಗೋ ನಾಶಃ' ನೆನಪಿರಲಿ. ನಾಲ್ಕನೆಯ ದಾರಿಯೇ ಇಲ್ಲ.' ಹೀಗೆ ಸ್ಫೂರ್ತಿ ಕೊಟ್ಟರು. 'ಇದು ಸಾಮಾನ್ಯ ದಾನವಲ್ಲ, ಒಪ್ಪತ್ತು ಊಟ ನೀಡಿದರೆಯೆ ಎಷ್ಟೋ ಪುಣ್ಯ, ಅಂಥದರಲ್ಲಿ ಬದುಕಿರುವಷ್ಟು ದಿನವೂ ಒಬ್ಬನ ಜೀವನ ನಡೆಯುವ ಒಂದು ಎಕರೆ ಹೊಲ ಕೊಟ್ಟರೆ ಎಷ್ಟು ಹೆಚ್ಚು ಪುಣ್ಯವೋ! ಇದರ ಹೆಸರೇ ಯಜ್ಞ. ಏನಾದರೂ ಕೊಡಿ ಎಂದು ಎಲ್ಲರನ್ನೂ ಕೇಳುತ್ತೇನೆ. ಇದರಿಂದ ಶೋಷಣರಹಿತ ಸಮಾಜ, ಸರ್ವೋದಯ ಸಮಾಜ ಬರುತ್ತದೆ.'

'ದೇವರ ಏರ್ಪಾಟು ನೋಡಿ. ನಮಗೆ ಜನ್ಮ ಕೊಟ್ಟ. ಸ್ವೇಚ್ಛೆಯಾಗಿ ಉಸಿರಾಡಲು ಮೂಗು ಕೊಟ್ಟ. ಮಗುವಿಗೆ ಹಾಲು ಬೇಕು, ಎಂದು ಅದಕ್ಕೆ ಏರ್ಪಾಡು ಮಾಡಿದ. ಇಂಥವನು ಹೊಲವನ್ನು ಮಾತ್ರ ಹತ್ತೇ ಜನರ ಕೈಯಲ್ಲಿಟ್ಟಾನೆಯೇ ?'

ಉತ್ತರ ಭಾರತದಲ್ಲಿ ಜೋನಪುರ ಜಿಲ್ಲೆಯಲ್ಲಿ ಟಿಕಾರಡೀ ಎಂಬ ಹಳ್ಳಿ. ಅಲ್ಲಿಗೆ ವಿನೋಬಾ ಹೋಗಿರಲಿಲ್ಲ. ಅವರ ಸಂದೇಶ ಮುಟ್ಟಿತ್ತು. ಆ ಹಳ್ಳಿಯಲ್ಲಿ ಮೂವತ್ತೆರಡೇ ಮನೆ. ೨೦ ಜನ ಹೊಲವಿದ್ದವರು, ೧೨ ಜನ ಹೊಲವಿಲ್ಲದವರು. ಹೊಲವಿಲ್ಲದ ತಮ್ಮಂದಿರಿಗೆ ಹೊಲ ಕೊಡುವ ಮಾತನ್ನು ಕೇಳಿ ಹೊಲವಿದ್ದವರೆಲ್ಲ ಸೇರಿ ೩೭ ಎಕರೆ ಕೂಡಿ ಹಾಕಿದರು. ಈಗ ಆ ಹಳ್ಳಿಯಲ್ಲಿ ಯಾರೂ ಹೊಲವಿಲ್ಲದವರಿಲ್ಲ.

ಇನ್ನೊಂದು ಕಡೆ ರಾತ್ರಿ ಮಲಗುವ ಹೊತ್ತು ಆಗಿತ್ತು. ಅಷ್ಟರಲ್ಲಿ ಒಬ್ಬ ರೈತ ತೇಕುತ್ತ ವಿನೋಬಾ ಬಳಿಗೆ ಬಂದು ನಮಸ್ಕಾರ ಮಾಡಿದ. ಕೈಜೋಡಿಸಿ, ನನಗೆ ಸಭೆಗೆ ಬರಲು ಆಗಲಿಲ್ಲ ಎಂದ. ಮುಂದೆ ಏನು ಹೇಳಲೂ ಸಂಕೋಚ. 'ಬಡವರಿಗಾಗಿ ಏನಾದರೂ ತಂದಿದೀಯಾ?' ಎಂದು ಕೇಳಿದರು ವಿನೋಬಾ. 'ಹೌದು, ದೇವರೇ. ನನಗೆ ಬಿಘ ಹೊಲ ಇದೆ. ಎರಡನ್ನು ಕೊಡೋಣ ಎಂದು ಬಂದೆ' ಎಂದ.

ನೈನಿತಾಲ್ ಜಿಲ್ಲೆಯಲ್ಲಿ ಒಂದು ದಿನ ವಿನೋಬಾ ತಂಗಿದ್ದರು. ಬಡವರಿಗಾಗಿ ಹೊಲ ಬೇಡುತ್ತಾರೆ ಮಹಾತ್ಮರು ಎಂಬುದನ್ನು ಒಬ್ಬ ಮುದುಕಿ ಕೇಳಿದಳು. ಅವಳಿಗೆ ಸ್ವಲ್ಪ ಹೊಲವಿತ್ತು. ವಿನೋಬಾಜಿಯ ಬಳಿಗೆ ಬಂದಳು. ಬರುವಾಗ್ಗೆ ರಾತ್ರಿ ೧೧ ಗಂಟೆಯಾಗಿತ್ತು. ಎಲ್ಲರೂ ಮಲಗಿದ್ದುದನ್ನು ನೋಡಿ ಬಾಗಿಲಲ್ಲಿಯೇ ಕಾದು ಕುಳಿತಳು. ಒಳ್ಳೇ ಚಳಿಗಾಲ. ರಾತ್ರಿಯೆಲ್ಲ ಹಾಗೆಯೇ ಕುಳಿತಿದ್ದಳು. ಬೆಳಿಗ್ಗೆ ಬಾಗಿಲು ತೆಗೆದಾಗ ವಿಷಯ ತಿಳಿಯಿತು. ಈ ಯಜ್ಞದಲ್ಲಿ ಸ್ವಲ್ಪ ಹೊಲ, ಒಂದು ಮನೆ ಅರ್ಪಿಸಲು ಬಂದಿದ್ದಳು ಆಕೆ.

ಇನ್ನೊಂದು ಹಳ್ಳಿಯಲ್ಲಿ ಒಬ್ಬ ಮುದುಕಿ 'ನಮಗೆ ೧೨ ಎಕರೆ ಹೊಲ ಇದೆ. ಮನೆಯಲ್ಲಿ ೫ ಜನ ಇದ್ದಾರೆ. ನೀವು ಆರನೆಯವರು. ನಿಮ್ಮ ಪಾಲಿನ ಎರಡು ಎಕರೆ ತೆಗೆದುಕೊಳ್ಳಿ' ಎಂದಳು.

'ನಿಮ್ಮ ಮನೆಯಲ್ಲಿ ನೀವು ಐದು ಜನ ಎನ್ನಿ. ಅದು ಹಿಂದುಸ್ತಾನದ ಸರಾಸರಿ. ದರಿದ್ರನಾರಾಯಣ ನಿಮ್ಮ ಮನೆಯ ಆರನೆಯ ಮನುಷ್ಯ. ಅವನಿಗೆ ಅವನ ಪಾಲನ್ನು ಕೊಡಿ' ಎನ್ನುತ್ತಿದ್ದಾರೆ ವಿನೋಬಾ. ಹಿಂದುಸ್ತಾನದಲ್ಲಿ ಒಟ್ಟು ೩೦ ಕೋಟಿ ಎಕರೆ ಹೊಲವಿದೆ. ಅದರಲ್ಲಿ ಆರನೆಯ ಪಾಲು, ಐದು ಕೋಟಿ ಎಕರೆ, ತಮಗೆ ದಾನವಾಗಿ ಬರಬೇಕು ಎನ್ನುತ್ತಿದ್ದಾರೆ. ೧೯೫೭ಕ್ಕೆ ಭಾರತದ ಸ್ವಾತಂತ್ರ್ಯಸಮರ ಮೊದಲಾಗಿ ಒಂದು ನೂರು ವರ್ಷವಾಗುತ್ತದೆ. ೧೮೫೭ರಲ್ಲಿ ಸಿಪಾಯಿ ದಂಗೆ ಎನಿಸಿಕೊಂಡು ಸ್ವರಾಜ್ಯಸಮರ ಮೊದಲಾಯಿತು. ಅದರ ನೂರು ವರ್ಷದ ಹಬ್ಬಕ್ಕೆ ಈ ಐದುಕೋಟಿ ಎಕರೆ ಸಿಗಬೇಕು, ಈ ದೇಶದಲ್ಲಿ ಭೂಮಿಯ ಸಮಸ್ಯೆ ಬಗೆಹರಿಯಬೇಕು ಎಂದು ಶಪಥ ಮಾಡಿದಾರೆ ವಿನೋಬಾ. ಅಲ್ಲಿಯ ವರೆಗೆ ಆಶ್ರಮಕ್ಕೆ ಹೋಗುವುದಿಲ್ಲ. ಎಂದು ಸಂಕಲ್ಪ ಮಾಡಿದಾರೆ. ಅಲ್ಲಿಯ ವರೆಗೆ ಹಳ್ಳಿಯಲ್ಲಿ ತಿರುಗಿ ಭೂದಾನಯಜ್ಞವನ್ನು ನಡೆಸುವ ನಿರ್ಧಾರ ಮಾಡಿದಾರೆ.

**ಶಬ್ದಾರ್ಥ:**

ಉತ್ಕಟತೆ- ಆತುರತೆ; ದರಿದ್ರನಾರಾಯಣ- ಬಡವರಿಗೆ ದೇವರು; ಶೋಷಣ- ಹೀರುವಿಕೆ; ವಿರಾಟ್- ವಿಶ್ವವ್ಯಾಪಿಯಾದ; ಸಿಮಿರೆಬ್ಬಿಸು- ಮೈಕೂದಲನ್ನು ನೆಟ್ಟಗೆ ನಿಲ್ಲುವಂತೆ ಮಾಡು; ಪ್ರಸನ್ನ- ಅನುಗ್ರಹ, ಒಲಿಯೋಣ.

**ಪ್ರಶ್ನೆ:**

೧. ವಿನೋಬಾ ಅವರ ವರ್ಣನೆ ಬರೆಯಿರಿ.

೨. ವಿನೋಬಾ ಜನತೆಯಲ್ಲಿ ದೇವರ ದರ್ಶನವನ್ನು ಹೇಗೆ ಮಾಡಿಕೊಳ್ಳುತ್ತಿದ್ದಾರೆ?

೩. ಭೂದಾನದಲ್ಲಿ ಚಿಕ್ಕ ಪುಟ್ಟ ರೈತರ ತ್ಯಾಗದ ವಿವರಣೆ ಬಗ್ಗೆ ಯಾವ ಎರಡು ಉದಾಹರಣೆಗಳನ್ನು ಕೊಟ್ಟಿದೆ?
೪. ಹೊಲ ಎಲ್ಲರಿಗೂ ಸೇರಲೇಬೇಕೆಂದು ವಿನೋಬಾ ಅವರು ಏಕೆ ಹೇಳುವರು?
೫. "ನಾನು ಭಿಕ್ಷೆ ಬೇಡಲು ಬಂದಿಲ್ಲ" ಎಂದು ವಿನೋಬಾ ಹೇಳುತ್ತಾರೆ. ಹಾಗಾದರೆ ಅವರು ಏತಕ್ಕಾಗಿ ಬಂದಿರುವರು?
೬. "ದಾನಿಯೇ ದೇವತೆ" ಎಂಬುದನ್ನು ಹೇಗೆ ಹೇಳುವಿರಿ?
೭. ನೈನಿತಾಲ ಜಿಲ್ಲೆಯಲ್ಲಿ ನಡೆದ ಆ ಮುದುಕಿಯ ಕತೆಯನ್ನು ಬರೆಯಿರಿ.
೮. ಕೆಳಗಿನ ಪದಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.
ಕಳ್ಳಕಾಕರು; ದೀನದಲಿತರು; ಕಣ್ಣಲ್ಲಿ ಪ್ರಾಣವಿಟ್ಟುಕೋ; ಕೊಡುಗೈ ದೊರೆ.

**ವ್ಯಾಕರಣ:**

## ಲಿಂಗ

(ಅ) ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಪದಗಳನ್ನು ನಿರೀಕ್ಷಿಸಿರಿ.

೧. **ವಿನೋಬಾ** ನಮ್ಮ ನಾಡಿನ ಒಬ್ಬ ಮಹಾಪುರುಷ.
೨. **ಸರೋಜಿನಿದೇವಿ** ನಮ್ಮ ದೇಶದ ಶ್ರೇಷ್ಠ ಕವಯಿತ್ರಿ.
೩. **ಆಕಳು** ಬಹಳ ಸಭ್ಯಪ್ರಾಣಿ.

ವಿನೋಬಾ ಎಂಬುದು ಒಬ್ಬ ಪುರುಷನ ಹೆಸರು. ಆದ್ದರಿಂದ ಅದು **ಪುಲ್ಲಿಂಗ. ಸರೋಜಿನಿದೇವಿ** ಎಂಬುದು ಒಬ್ಬ ಸ್ತ್ರೀಯ ಹೆಸರು. ಆದ್ದರಿಂದ ಅದು **ಸ್ತ್ರೀಲಿಂಗ** **ಆಕಳು** ಎಂಬುದು ಒಂದು ಪ್ರಾಣಿ. ಅದು **ನಪುಂಸಕಲಿಂಗ.**

ಕನ್ನಡದಲ್ಲಿ ಪುರುಷರು ಹಾಗೂ ಸ್ತ್ರೀಯರು ಇವರನ್ನು ಬಿಟ್ಟು ಉಳಿದ ಎಲ್ಲ ಪ್ರಾಣಿ ಹಾಗೂ ವಸ್ತುಗಳು ನಪುಂಸಕಲಿಂಗದಲ್ಲಿ ಬರುತ್ತವೆ.

ಲಿಂಗವೆಂದರೆ ಗಂಡಸು, ಹೆಂಗಸು ಹಾಗೂ ಉಳಿದ ವಸ್ತುಗಳನ್ನು ಸೂಚಿಸುವ ಒಂದು ಗುರುತು. ಗಂಡಸರ ಅಂದರೆ ಪುರುಷರ ಹೆಸರುಗಳೆಲ್ಲ ಪುಲ್ಲಿಂಗ; ಹೆಂಗಸರ ಅಂದರೆ ಸ್ತ್ರೀಯರ ಹೆಸರುಗಳೆಲ್ಲ ಸ್ತ್ರೀಲಿಂಗ. ಪುರುಷ ಮತ್ತು ಸ್ತ್ರೀಯರನ್ನು ಬಿಟ್ಟು ಉಳಿದೆಲ್ಲ ವಸ್ತುಗಳೂ ಪ್ರಾಣಿಗಳೂ ಭಾವಗಳೂ ನಪುಂಸಕಲಿಂಗ.

ಪಶು-ಪಕ್ಷಿಗಳಲ್ಲಿ ಗಂಡು-ಹೆಣ್ಣುಗಳಿಲ್ಲವೇ? ಎಂದಮೇಲೆ ಅವುಗಳನ್ನು ಪುಲ್ಲಿಂಗ, ಸ್ತ್ರೀಲಿಂಗಗಳೆಂದು ಏಕೆ ಹೇಳಬಾರದು? ಎಂಬ ಪ್ರಶ್ನೆ ಸಹಜವಾಗಿಯೇ ಹುಟ್ಟಬಹುದು.

ಸಂಸ್ಕೃತ ಭಾಷೆಯಲ್ಲಿ ಹೀಗೆ ಹೇಳುವ ವ್ಯವಸ್ಥೆಯಿದೆ. ಮರಾಠೀ, ಹಿಂದೀ ಹೀಗೆ ಇನ್ನೂ ಕೆಲವು ಭಾಷೆಗಳಲ್ಲಿಯೂ ಹೀಗೆ ಹೇಳುವ ವ್ಯವಸ್ಥೆಯಿದೆ. ಆದರೆ ಈ ಭಾಷೆಗಳಲ್ಲಿ ಗಂಡು-ಹೆಣ್ಣು ಚಿಹ್ನಗಳಿಗಷ್ಟೇ ಮಹತ್ವವು ಕಂಡುಬರುತ್ತದೆ.

ಆದರೆ ಕನ್ನಡದಲ್ಲಿ ಲಿಂಗ ಭೇದವನ್ನು ಮಾಡುವಾಗ ಬರೀ ಗಂಡು–ಹೆಣ್ಣು ಚಿನ್ಹೆಗಳಿಗಷ್ಟೇ ಮಹತ್ವ ಕೊಟ್ಟಿಲ್ಲ. **ಕನ್ನಡದಲ್ಲಿ ಜ್ಞಾನ–ಅಜ್ಞಾನಗಳ ತಳಗಟ್ಟಿನ ಮೇಲೆ ಲಿಂಗ ವ್ಯವಸ್ಥೆಯನ್ನು ಮಾಡಿದ್ದಾರೆ.** ಜ್ಞಾನವುಳ್ಳವರು ಮನುಷ್ಯರು. ಅವರಲ್ಲಿ ಮಾತ್ರ ಪುಲ್ಲಿಂಗ ಸ್ತ್ರೀಲಿಂಗವೆಂದು ಭೇದ ಮಾಡಬೇಕು. ಉಳಿದ ಪಶು–ಪಕ್ಷಿ ನಿರ್ಜೀವ ವಸ್ತುಗಳೆಲ್ಲ ಜ್ಞಾನವಿಲ್ಲದವು. ಆದುದರಿಂದ ಅವು ನಪುಂಸಕಲಿಂಗಗಳು.

(ಬ) ಈ ಪಾಠದಲ್ಲಿ ಬಂದ ಪುಲ್ಲಿಂಗ, ಸ್ತ್ರೀಲಿಂಗ ಹಾಗೂ ನಪುಂಸಕಲಿಂಗಗಳ ಶಬ್ದಗಳನ್ನು ಗುರುತಿಸಿರಿ.

# ೨೯. ಕೈಮಗ್ಗದ ಉದ್ಯಮ

[ ಕೈಮಗ್ಗದ ಉದ್ಯಮವು ನಮ್ಮ ಗ್ರಾಮೋದ್ಯೋಗಗಳಲ್ಲಿ ಬಹು ದೊಡ್ಡದು. ಈಗ ಪರದೇಶದ ಹಾಗೂ ಸ್ವದೇಶದ ಗಿರಣಿಗಳ ಜೊತೆ ಸ್ಪರ್ಧಿಸಲಾರದೆ ಅದು ನಿಕೃಷ್ಟ ಸ್ಥಿತಿಗೆ ಬಂದಿದೆ. ಆದ್ದರಿಂದ ಕೈಮಗ್ಗದ ಉದ್ಯಮವನ್ನು ಹೇಗೆ ಸುಧಾರಿಸಬೇಕು. ಅದು ಬದುಕುವಂತೆ ಯಾವ ಉಪಾಯ ಕೈಕೊಳ್ಳಬೇಕು ಎಂಬ ಬಗ್ಗೆ ಕೇಂದ್ರ ಸರಕಾರದ ಕೈಗಾರಿಕೆ ಮಂತ್ರಿಗಳಾದ ಶ್ರೀ. ಟಿ. ಟಿ. ಕೃಷ್ಣಮಾಚಾರಿಯವರು ಇಲ್ಲಿ ಕೆಲವು ಮಾತುಗಳನ್ನು ಹೇಳಿದ್ದಾರೆ. ]

■ ■ ■

ನಮ್ಮ ಭಾರತದಲ್ಲಿಯ ಪುರಾತನ ಉದ್ಯಮಗಳಲ್ಲಿ ಕೈಮಗ್ಗದ ಜವಳಿಯ ಉದ್ಯಮವು ಒಂದಾಗಿದೆ. ಇದು ಆ ಕಾಲಕ್ಕೆ ಸಾಕಷ್ಟು ಪ್ರಖ್ಯಾತಿಯನ್ನು ಹೊಂದಿದ್ದಿತು. ಮ್ಯಾಂಚೆಸ್ಟರ, ಲ್ಯಾಂಕಾಶಾಯರ, ಜಪಾನಗಳ ಬಟ್ಟೆಗಳ ಸ್ಪರ್ಧೆಯನ್ನು ಲೆಕ್ಕಿಸದೆ, ಬರ್ಮಾ – ಇಂಡೋನೇಶಿಯಾ, ಮಲಾಯಾಗಳನ್ನೊಳಗೊಂಡ ಆಗ್ನೇಯ ಏಶಿಯಾ, ಆಫ್ರಿಕಾಗಳ ಅನೇಕ ಭಾಗಗಳಲ್ಲಿ ತನ್ನ ಬಟ್ಟೆಯನ್ನು ಮಾರುತ್ತಿದ್ದಿತು. ಡಾಕಾದ ಮಲಮಲು ಜಗತ್ಪ್ರಸಿದ್ಧವಾಗಿತ್ತು ! ಔರಂಗಜೇಬನು ತನ್ನ ಮಗಳಿಗಾಗಿ ತಯಾರಿಸಲು ಹೇಳಿದ್ದ ಡಾಕಾ ಮಲಮಲಿನ ವಿಷಯವೊಂದರಿಂದಲೇ ಆಗಿನ ಕಾಲದ ಬಟ್ಟೆಯ ಮಹತ್ವವನ್ನರಿಯಬಹುದು. ಈ ಪ್ರಕಾರ ಪ್ರಖ್ಯಾತವಾಗಿದ್ದ ಹಾಗೂ ಭಾರತೀಯರ ಬೆನ್ನೆಲುಬಾಗಿದ್ದ ಈ ಉದ್ಯಮವು, ಇಂದು ತೊಂದರೆಗೊಳಗಾಗಿ ಕುಂದಿ ಹೋಗಿದೆ. ಅತಿ ಹೀನಾವಸ್ಥೆಗೆ ಇಳಿದಿದೆ. ಇದರ ಕಾರಣವನ್ನು ಪರಿಶೋಧಿಸಿ ಪರಿಹಾರೋಪಾಯಗಳನ್ನು ಕೈಕೊಳ್ಳುವುದವಶ

ಸದ್ಯಕ್ಕೆ ಭಾರತದಲ್ಲಿ ಕೈಮಗ್ಗಗಳ ಸಂಖ್ಯೆ ೨-೩ ದಶಲಕ್ಷಗಳಷ್ಟು ಅದೆ. ಭಾರತಕ್ಕೆ ಬೇಕಾಗುವ ಬಟ್ಟೆಯಲ್ಲಿ ಒಂದು ಕಾಲು ಭಾಗವು ಕೈಮಗ್ಗದ ಉದ್ಯಮ ದಿಂದಲೇ ಸಿಗುತ್ತದೆ. ಕೈಮಗ್ಗಗಳಿಂದ ವಿಧವಿಧದ ಬಟ್ಟೆಗಳು ಸಿದ್ಧವಾಗುತ್ತವೆ. ನಿತ್ಯದ ಉಡುಪಿಗಾಗಿ ಸೀರೆ, ಧೋತರಗಳು, ಕುಪ್ಪಸದ ಖಣ, ತಲೆಗೆ ಸುತ್ತುವ ಮುಂಡಾಸಗಳೆಲ್ಲ ಕೈಮಗ್ಗಗಳಿಂದಲೇ ತಯಾರಾಗುತ್ತವೆ. ಉತ್ತಮ ಕಲಾತ್ಮಕ ಮತ್ತು ಸುಂದರವಾದ ಸೀರೆ, ಖಣಗಳು ಇಂದಿಗೂ ಪ್ರಸಿದ್ಧವಾಗಿವೆ. ಪಶ್ಚಿಮ ಭಾರತದ ಚಂದೇರಿ, ಹೈದರಾಬಾದದ ಹಿಮುದ್ರೂ, ದಕ್ಷಿಣದ ಕೊರನಾಡ, ಸಂಬಳಾಪುರದ ನಚಿತ್ರಾಲಂಕೃತ ಬಟ್ಟೆಗಳು, ವಿಜಾಪುರ ಜಿಲ್ಲೆಯ ಗುಳೇದಗುಡ್ಡ, ಮಾಲಿಂಗಪುರ, ಧಾರವಾಡ ಜಿಲ್ಲೆಯ ಹುಬ್ಬಳ್ಳಿ, ಗದಗ, ಮೈಸೂರ ಪ್ರಾಂತದ ಬೆಂಗಳೂರು, ಯಮ್ಮಿಗನೂರು ಮೊದಲಾದವುಗಳಲ್ಲಿ ಈ ಕೈಮಗ್ಗದ ಉದ್ಯಮ ಗಳು ಭರದಿಂದ ಸಾಗುತ್ತಲೇ ಇವೆ.

ದ್ವಿತೀಯ ಜಾಗತಿಕ ಯುದ್ಧಸಮಯದಲ್ಲಿ ಮತ್ತು ಆನಂತರದ ಕೆಲವರ್ಷ ಗಳಲ್ಲಿ ಉಂಟಾದ ಬಟ್ಟೆಯ ಸಾಮಾನ್ಯ ಕೊರತೆಯ ಪರಿಸ್ಥಿತಿಯಿಂದ, ಆ ಕಾಲಕ್ಕೆ ಉತ್ಪಾದಿಸಿದ ಬಟ್ಟೆಯನ್ನು ಯಾವ ತೊಂದರೆಯಿಲ್ಲದೆ ಮಾರಲು ಕೈಮಗ್ಗ ಉದ್ಯ ಮಕ್ಕೆ ಸಾಧ್ಯವಾಯಿತು. ಆ ತರುವಾಯ ಭಾರತದಲ್ಲಿ ಜವಳಿಯ ಗಿರಣಿಗಳು ಹೆಚ್ಚಾದವು. ದೊಡ್ಡ ಪ್ರಮಾಣದಿಂದ ಗಿರಣಿಗಳ ಬಟ್ಟೆಗಳು ತಯಾರಾಗಹತ್ತಿ ದವು. ಪರದೇಶಗಳಿಂದಲೂ ಗಿರಣಿಯ ಬಟ್ಟೆಗಳು ಬರಹತ್ತಿದವು. ಕೈಮಗ್ಗದ ಬಟ್ಟೆಗಳ ಬೆಲೆಗಿಂತಲೂ ಸ್ವಲ್ಪ ಕಡಿಮೆ ಬೆಲೆಗೆ ಸಿಗಹತ್ತಿದವು. ಆ ಗಿರಣಿಯ ಬಟ್ಟೆಗಳು ತಾಳಿಕೆ-ಬಾಳಿಕೆಗಳಲ್ಲಿ ಕೈಮಗ್ಗದ ಬಟ್ಟೆಗಳಷ್ಟು ಹೆಸರಾಗಿರದಿದ್ದರೂ, ನಯ ಹಾಗೂ ಜಿನುಗುತನಗಳಲ್ಲಿ ಮೇಲ್ತರಗತಿಯವೆಂದು ಅವುಗಳ ಬೇಡಿಕೆಯೇ ಹೆಚ್ಚಾಯಿತು. ಹಲವು ರಾಷ್ಟ್ರಗಳಲ್ಲಿ ಆಯಾತ ಬಟ್ಟೆಗಳ ಮೇಲೆ ಹೆಚ್ಚಿನ ಕರಗಳನ್ನು ಹಾಕಲಾಯಿತು. ಅದರಿಂದ ಅಡಕತ್ತಿನೊಳಗೆ ಸಿಕ್ಕ ಅಡಿಕೆಯಂತಾದ ಈ ಕೈಮಗ್ಗದ ಉದ್ಯಮದ ಅಧೋಗತಿಯು ಪ್ರಾರಂಭವಾಯಿತು.

ಈ ಅವನತಿಗೆ ಕೈಮಗ್ಗದ ನೇಕಾರರ ಹೊಣೆಯೂ ಕೆಲಮಟ್ಟಿಗೆ ಕಾರಣ ವಾಗಿದೆಯೆನ್ನಬಹುದು. ಗ್ರಾಹಕನಲ್ಲಿ ಮೇಲಿಂದ ಮೇಲೆ ಬದಲಾಗುತ್ತಿರುವ ಅಭಿರುಚಿಗಳನ್ನು ನೇಕಾರನು ಅರಿತುಕೊಳ್ಳಲಿಲ್ಲ; ಅಭಿರುಚಿಗೆ ಒಗ್ಗದ ಬಟ್ಟೆಯು ಪೇಟೆಯಲ್ಲಿ ಮಾರಲಾರದೆಂಬ ಮರ್ಮವನ್ನು ತಿಳಿಯಲಿಲ್ಲ. ಗಿರಣಿಗಳ ಬಟ್ಟೆ ಗಳಿಗಿಂತಲೂ ಶ್ರೇಷ್ಠ ತರಗತಿಯಲ್ಲಿ ಅಥವಾ ಅವುಗಳಷ್ಟಾದರೂ ರಂಜನೆ ಕಾಣು ವಂತೆ ತಯಾರಿಸಲು ಪ್ರಯತ್ನ ಪಡಲಿಲ್ಲ. ಆಗಾಗ್ಗೆ ಅಲ್ಲಲ್ಲಿ ನಡೆಯುತ್ತಿದ್ದ

ಔದ್ಯೋಗಿಕ ಪ್ರದರ್ಶನಗಳ ಧ್ಯೇಯ – ಧೋರಣೆಗಳಂತೆ ನಡೆಯಲಿಲ್ಲ. ಸರಕಾರದಿಂದ ಸ್ಥಾಪಿತವಾಗಿರುವ ಸಹಕಾರಿ ಸಂಘಗಳ ಸದುಪಯೋಗ ಮಾಡಿಕೊಳ್ಳಲಿಲ್ಲ. ದಲಾಲರ ಬಲೆಯಲ್ಲಿ ಸಿಕ್ಕು ಹೊರಗೆ ಬಾರದಂತಾದರು.

ಇತ್ತೀಚೆಗೆ ಭಾರತದಲ್ಲಿ ಜವಳಿಯ ಗಿರಣಿಗಳು ಪ್ರಾರಂಭವಾಗಿ ಅವುಗಳ ಪ್ರಸಾರವು ಹೆಚ್ಚು ಹೆಚ್ಚಾದಂತೆ, ಕೈಮಗ್ಗದ ನೇಕಾರರಿಗೆ ನೂಲಿನ ಪೂರೈಕೆಯ ಕೊರತೆಯಾಯಿತು. ಸಿಗುವ ಅಲ್ಪ – ಸ್ವಲ್ಪ ನೂಲಿನ ಧಾರಣೆಯೂ ಎತ್ತರವಾಯಿತು. ಬಂಡವಲುಗಾರರ ಲಾಭ – ಬಡಕತನವೂ ಇದಕ್ಕೆ ಕೆಲಮಟ್ಟಿಗೆ ಕಾರಣವಾದ್ದರಿಂದ, ನೂಲಿನ ಪೂರೈಕೆಯನ್ನು ಸರಕಾರದವರೇ ಕೈಯಲ್ಲಿ ತಕ್ಕೊಂಡು, ಸೀದಾ ಕಾರ್ಡುಗಳ ಪದ್ಧತಿಯಿಂದ ನೂಲಿನ ಹಂಚಿಕೆಯನ್ನು ಮಾಡಿದರು. ೧೯೪೦ರಲ್ಲಿ ಕೈಮಗ್ಗ ಮಂಡಳವನ್ನು ಸ್ಥಾಪಿಸಿದರು. ಗ್ರ್ಯಾಂಟಿನ ರೂಪದಿಂದ ಕೈಮಗ್ಗದ ಉದ್ಯಮಕ್ಕೆ ಸಹಾಯ ಸಲ್ಲಿಸಿದರು. ಆದರೆ ಈ ನೂಲಿನ ಹಂಚಿಕೆಯೂ ಗ್ರ್ಯಾಂಟಿನ ಸಹಾಯವೂ ಸಾಕಷ್ಟು ಆಗದೆ, ನೇಕಾರರ ದುರ್ದೈವವು ದೂರಾಗಲಿಲ್ಲ.

ಸರಕಾರವು ಉದ್ಯಮದ ಏರು–ಪೇರುಗಳಿಗೆ ಕಾರಣಗಳನ್ನು ಹುಡುಕಿತು. ಸಾಕಷ್ಟು ಸಂರಕ್ಷಣೆಯನ್ನು ಕೊಡುವ ಗುರಿಯನ್ನಿಟ್ಟುಕೊಂಡಿತು. ನೇಕಾರನಿಗೆ ಸ್ಥಿರವಾದ ಸ್ಥಾನವನ್ನು ಕಲ್ಪಿಸಿ ಕೊಡಲು ಮನಸಾ ನಿರ್ಧರಿಸಿತು. ಇವೆಲ್ಲ ಧ್ಯೇಯಗಳಿಂದಲೇ ೧೯೫೨ ಡಿಶಂಬರದಲ್ಲಿ ಅಖಿಲ ಭಾರತ ಕೈಮಗ್ಗ ಮಂಡಳವನ್ನು ಸ್ಥಾಪಿಸಿತು. ಗಿರಣಿಯ ಬಟ್ಟೆಗಳ ಮೇಲೆ ಅಬಕಾರಿ ಕರವನ್ನು ಹಾಕಲಾಯಿತು. ಈ ಹಣವನ್ನು ಖಾದಿ ಮತ್ತು ಕೈಮಗ್ಗಗಳ ಉದ್ಯೋಗಗಳ ಸಹಾಯಕ್ಕಾಗಿ ವಿನಿಯೋಗಿಸುವ ಯೋಜನೆ ಮಾಡಿ, ಈಗಾಗಲೇ ಮೂರು ಕೋಟಿ ರೂಪಾಯಿಗಳಷ್ಟು ಗ್ರ್ಯಾಂಟಿನ ಸಹಾಯ ಹಂಚಲಾಗಿದೆ. ಮುಂದೆ ಇನ್ನೂ ಹೆಚ್ಚು ಹಣವನ್ನು ಮಂಜೂರ ಮಾಡುವ ಯೋಜನೆ ಮಾಡಿದೆ.

ಸರಕಾರವು ಭಾರತದ ಮಹತ್ವದ ನಗರಗಳಲ್ಲಿ ಶಾಖೆಗಳುಳ್ಳ ಆಂತರಿಕ ವ್ಯಾಪಾರಿ ಸಂಸ್ಥೆಯೊಂದನ್ನು ರಚಿಸಲಾಗಿದೆ. ಮಧ್ಯ, ಪೂರ್ವ, ಆಗ್ನೇಯ ಏಶಿಯಾಗಳಲ್ಲಿ ಕೈಮಗ್ಗ ಬಟ್ಟೆಗೆ ತಕ್ಕ ಪೇಟೆಯನ್ನು ದೊರಕಿಸುವ ಯತ್ನ ನಡೆಯಿಸಿದೆ. ನಿರ್ಯಾತ ವ್ಯಾಪಾರಿ ಸಂಸ್ಥೆಯನ್ನು ಏರ್ಪಡಿಸಲಾಗಿದೆ. ಕೈಮಗ್ಗ ಮಂಡಳದ ವತಿಯಿಂದ ಹೊಸ ಹೊಸ ಮಗ್ಗಗಳ ಸಂಶೋಧನೆ ನಡೆಯಿಸಹತ್ತಿದೆ. ಈಗ ಕೂಡಿಸಿದ ನಿಧಿಯಲ್ಲಿಯ ಬಹುಭಾಗವನ್ನು ಅಸ್ತಿತ್ವದಲ್ಲಿರುವ ಸಹಕಾರಿ ಸಂಸ್ಥೆಗಳನ್ನು ವಿಸ್ತರಿಸುವದಕ್ಕಾಗಿಯೂ ಹೊಸ ಹೊಸ ಸಂಸ್ಥೆಗಳನ್ನು ಸ್ಥಾಪಿಸು

ವದಕ್ಕಾಗಿಯೂ ಬಳಸುವ ಯೋಜನೆ ಮಾಡಿದೆ. ನೇಕಾರನಿಗೆ ಸತತವಾಗಿ ಬೇಕಾಗುವಂಥ ನೂಲಿನ ಪೂರೈಕೆಯನ್ನು ಆದಷ್ಟು ಅಗ್ಗ ಬೆಲೆಯಲ್ಲಿಯೇ ದೊರಿಯುವ ಯೋಜನೆ ಕೈಕೊಂಡಿದೆ.

ಸಹಕಾರಿ ಸಂಸ್ಥೆಗಳ ವತಿಯಿಂದಲೇ ಡೈಯಿಂಗ, ಕ್ಯಾಲೆಂಡರಿಂಗ, ಬ್ಲೀಚಿಂಗ ಕಾರಖಾನೆಗಳನ್ನು ಸ್ಥಾಪಿಸುವದು, ನೇಕಾರನು ನೆಯ್ದ ಮಾಲನ್ನು ಅತಿ ಅನುಕೂಲವಾದ ರೀತಿಯಲ್ಲಿ ಮಾರಲು ಅರ್ಥಾತ್ ಸಹಕಾರಿ ಸಂಸ್ಥೆಗಳಿಂದಲೇ ಕೊಳ್ಳುವದು, ಕೊಂಡ ಮಾಲನ್ನು ಮಾರಾಟಕ್ಕಾಗಿ ಸಂಚಾರಿ ಪೇಟೆ ಮತ್ತು ಮಾರಾಟ ಕೇಂದ್ರಗಳನ್ನು ಗೊತ್ತುಮಾಡುವದು ಮುಂತಾದ ಕೆಲಸಗಳನ್ನು ಸಹಕಾರಿ ಸಂಘಗಳ ಮೂಲಕ ಸಂಘಟಿಸುವ ಯೋಜನೆಯನ್ನು ಸರಕಾರವು ಕೈಕೊಂಡಿದೆ.

ಉತ್ಪಾದನೆಯ ಈ ಯೋಜನೆಯಲ್ಲಿ ಉಂಟಾದ ಇತ್ತೀಚಿನ ಸುಧಾರಣೆಗಳಂತೆ ಕೈಮಗ್ಗದ ನೇಕಾರನೂ, ಆದಷ್ಟು ಮಟ್ಟಿಗೆ ಇವನ್ನೆಲ್ಲ ಬಳಕೆಯಲ್ಲಿ ತರಲು ಯತ್ನಿಸಬೇಕು. ದಿನದಿನಕ್ಕೆ ಕೈಮಗ್ಗಗಳ ಬದಲು ಶಟಲ್ ಮಗ್ಗಗಳ ಬಳಕೆ ಹೆಚ್ಚಾಗಬೇಕು. ಸ್ವಯಂಚಾಲಿತ ಅಂದರೆ ಕಾಲುಮಗ್ಗ [ ಪೆಡಲ್ ] ಗಳೂ ಹೆಚ್ಚಾಗಬೇಕು; ಬಳಕೆಗಾರರ ಅಭಿರುಚಿಗೆ ತಕ್ಕ ಹೊಸ ಹೊಸ ಡಿಜಾಯನಗಳನ್ನು ತಯಾರಿಸಬೇಕು. ಬಡ ನೇಕಾರನು ಇವೆಲ್ಲವುಗಳನ್ನು ಸ್ವಂತ ಪ್ರಯತ್ನದಿಂದ ಮಾಡಲು ಶಕ್ಯವಿಲ್ಲ; ಕಾರಣ ಸಹಕಾರಿ ಸಂಸ್ಥೆಗಳ ಸಹಾಯ ಪಡೆದು, ಇವುಗಳೆಲ್ಲವನ್ನೂ ಮಾಡಲು ಅಂಥವುಗಳಲ್ಲಿ ಸೇರಿಕೊಳ್ಳಬೇಕು. ಈ ತಳಹದಿಯ ಮೇಲೆ ಕಾರ್ಯ ಕೈಕೊಂಡಾಗ ಉತ್ಪಾದನೆಯು ಹೆಚ್ಚುವದು; ಉದ್ಯೋಗದ ಏಳ್ಗೆಯಾಗುವದು.

ಕಚ್ಚಾಮಾಲಿನಿಂದ ದೊರೆಯುವ ಬೆಲೆಯು ಅತ್ಯಲ್ಪ; ಪಕ್ಕಾಮಾಲಿನಿಂದ ದೊರೆಯುವ ಬೆಲೆಯು ಅಧಿಕ. ಬಟ್ಟೆಯ ಕೈಗಾರಿಕೆಗೆ ಮೂಲ ಸಾಧನವಾದ ಹತ್ತಿಯು [ ಕಚ್ಚಾಮಾಲು ] ಈ ದೇಶದಲ್ಲಿ ಅಧಿಕವಾಗಿ ಬೆಳೆಯುತ್ತಿದ್ದರೂ ಈ ಕಚ್ಚಾಮಾಲಿನಿಂದ ತಯಾರಾದ ಬಟ್ಟೆಯ [ಪಕ್ಕಾಮಾಲಿನ] ಬೆಲೆಯಲ್ಲಿಯ ಬಹುಭಾಗವು, ಪರದೇಶಗಳಿಗೆ ಹರಿದು ಹೋಗುವದರಿಂದ, ಅದನ್ನು ತಡೆಹಿಡಿಯುವದಕ್ಕಾಗಿ ದೇಶೀಯ ಬಟ್ಟೆಗಳ ಉತ್ಪಾದನೆಗೆ ಉತ್ತೇಜನ ಕೊಡುವದೂ ಪ್ರತಿಯೊಬ್ಬ ಭಾರತೀಯನ ಕರ್ತವ್ಯ. ಈಗಿನ ಬಹುಸಂಖ್ಯಾಕ ನೇಕಾರರ ಮೈಮೇಲೆ ಪರದೇಶೀಯ ಬಟ್ಟೆಗಳೇ ಕಾಣಬರುತ್ತವೆ. ಇದಕ್ಕೇನನ್ನಬೇಕು ?

ಇದನ್ನರಿತೇ ಮಹಾತ್ಮಾಜಿಯವರು ವರ್ಧಾಯೋಜನೆಯನ್ನು ಕೈಕೊಂಡರು. ಸ್ವದೇಶೀಯ ಬಟ್ಟೆಗಳ ಅಭಿಮಾನಜ್ಯೋತಿಯನ್ನು ಹೊತ್ತಿಸಿದರು.

ಮನೆಮನೆಗಳಲ್ಲಿ ತಕಲಿ–ರಾಟಿಗಳು ತಿರುಗಹತ್ತಿದವು. ಉರುಟಾಗಿ ಹೊರಡು ತ್ತಿದ್ದ ನೂಲು ಜಿನುಗಾಗುವಂತೆ ಹೊರಡಿಸಲು, ರಾಟಿಗಳಲ್ಲಿಯೂ ಸುಧಾರಣೆ ಯಾಗಹತ್ತಿತು. ಪ್ರದರ್ಶನಗಳ ಮೂಲಕ ಕೈರಾಟಿಯ ನೂಲು ಸಾಕಷ್ಟು ಜಿನುಗು ಹೊರಡಿಸುವ ಕ್ರಮಗಳನ್ನು ತೋರಿಸಲಾಯಿತು. ಕೈನೂಲಿನ ತಯಾ ರಿಕೆಯ ವಿವಿಧ ಡಿಜಾಯಿನುಗಳ ಬಟ್ಟೆಗಳನ್ನೂ ಅಂಥ ಬಟ್ಟೆಗಳ ತಯಾರಿಕೆಗೆ ಬೇಕಾದ ಸಾಧನ–ಸಲಕರಣೆಗಳನ್ನೂ ತೋರಿಸಲಾಯಿತು; ಆದರೂ ಕೈನೂ ಲಿನ, ಕೈಮಗ್ಗದ ಬಟ್ಟೆಯ ಉದ್ಯೋಗವು ಇನ್ನೂ ಸಾಕಷ್ಟು ಮುಂದೋಡಿಲ್ಲ. ಜನಾಂಗವು ತನ್ನ ಉಡುಪಿನಲ್ಲಿಯ ಕೆಲವೊಂದು ಭಾಗವನ್ನಾದರೂ ಕೈಮಗ್ಗದ ಬಟ್ಟೆಯನ್ನು ಉಪಯೋಗಿಸಿ, ಉದ್ಯಮಕ್ಕೆ ಉತ್ತೇಜನ ಕೊಡುವದನ್ನು ನಿರ್ಧ ರಿಸಿದಾಗಲೇ ಅಂದರೆ ಸ್ವದೇಶ ಪ್ರೀತಿಯು ಹೆಚ್ಚಾದಾಗಲೇ ಕೈಮಗ್ಗದ ಬಟ್ಟೆ ಗಳಿಗೆ ಕಳೆ ಬರುತ್ತದೆ.

ಈಗ ನಮ್ಮ ಮುಂದಿರುವ ಪ್ರಥಮ ಸಮಸ್ಯೆಯೆಂದರೆ, ಬರಿ ಶಹರಗಳಲ್ಲಿ ನೆಲೆಸಿರುವ ಬಹುಸಂಖ್ಯಾಕ ಜನತೆಗೆ ಮಾತ್ರ ಕೈಮಗ್ಗದ ಉದ್ಯೋಗ ದೊರಕಿಸಿ ಕೊಟ್ಟರೆ ಮಾತ್ರ ನಿರುದ್ಯೋಗ ಸಮಸ್ಯೆ ನಿವಾರಣೆಯಾದಂತಾಗಲಿಲ್ಲ. ಸಣ್ಣ ಸಣ್ಣ ನಿವಾಸಿಕೆಗಳಲ್ಲಿಯೂ ಸಣ್ಣ ಸಣ್ಣ ಔದ್ಯೋಗಿಕ ವಸಾಹತುಗಳನ್ನು ಅಸ್ತಿತ್ವ ದಲ್ಲಿ ತಂದಾಗಲೇ, ಈ ಚಿಕ್ಕ ಪ್ರಮಾಣದ ಕೈಮಗ್ಗದ ಉದ್ಯೋಗಕ್ಕೆ ಉತ್ತೇಜನ ಕೊಟ್ಟಂತಾಗುವದು. ಭವಿತವ್ಯವು ಬೆಳಗುವದು. ಅಂತೆಯೇ ಈಗಿನ ಪ್ರಾಥ ಮಿಕ ಶಾಲೆಗಳಲ್ಲಿ, ಟ್ರೇನಿಂಗ ಸಂಸ್ಥೆಗಳಲ್ಲಿ ಪ್ರಥಮ ಪ್ರಯೋಗವು ಪ್ರಾರಂಭ ವಾಗಿದೆ. ಇದರ ಶಕ್ತಿಯೂ ಶಿಕ್ಷಣವೂ ಸುರುವಾಗಿದೆ. ಇದರ ಸುಲಾಭವನ್ನು ಬರಿ ನೇಕಾರನೇ, ನೇಕಾರರ ಮಕ್ಕಳೇ ತಕ್ಕೊಳ್ಳುವದಕ್ಕಿಂತ ಪ್ರತಿಯೊಂದು ಪಂಗಡದವರೂ ತಕ್ಕೊಳ್ಳುವದು ಒಳ್ಳೆಯದು.

ಇಷ್ಟೊಂದು ಕಾರ್ಯವು ಬೇಗ ಫಲಕಾರಿಯಾಗಬೇಕಾದರೆ ಮಾಡ ಬೇಕಾದ ಪ್ರಯತ್ನವು ಅಷ್ಟಿಷ್ಟಲ್ಲ. "ಸಂಘೇ ಶಕ್ತಿಃ ಕಲೌ ಯುಗೇ" ಎಂಬಂತೆ ಸಂಘಶಕ್ತಿಯು ಇದಕ್ಕೆ ಅವಶ್ಯಬೇಕು. ಕೈಮಗ್ಗದ ನೇಕಾರನೆಂದರೆ ದುರ್ಲಕ್ಷಿಸ ಲ್ಪಡತಕ್ಕ ವ್ಯಕ್ತಿಯಲ್ಲ; ಒಂದೊಂದು ಕಾಲದಲ್ಲಿ ಸಮಾಜದ ಆರ್ಥಿಕ ವ್ಯವಸ್ಥೆ ಯಲ ಹೆಚ್ಚಿನ ಸ್ಥಾನವನ್ನು ಹೊಂದಿದ ವ್ಯಕ್ತಿಯು. ಈಗ ಪರದೇಶೀಯ ಬಟ್ಟೆ ಗಳ ಪ್ರಭಾವದಿಂದ, ದೇಶೀಯ ಬಟ್ಟೆಗಳ ಸ್ಪರ್ಧೆಯಿಂದ ಹಿಂಡಿ ಹಿಪ್ಪಿಯಾಗಿ ದ್ದಾನೆ, ಕಾರಣ ದೇಶೀಯ ಬಟ್ಟೆಯ ಗಿರಣಿಗಳ ಮಾಲಕರೂ ಕೈಮಗ್ಗ ಬಟ್ಟೆಗಳ ಗಳ ಸಂಘ–ಸಂಸ್ಥೆಗಳೂ ಉತ್ಪಾದನೆಯ ವಿಷಯದಲ್ಲಿ ಕೆಲವೊಂದು ಕರಾರು

ಗಳೆನ್ನು ಮಾಡಿಕೊಂಡು, ಪರಸ್ಪರ ಸಹಕರಿಸಿ ನಡೆಯುವದು ಅತ್ಯವಶ್ಯ. ನೇಕಾರನೂ ಸಹಕಾರಿ ಸಂಘಗಳಲ್ಲಿ ಸೇರಿಕೊಂಡು, ಸರ್ವರೂ ಸರಕಾರದೊಡನೆ ಸಹಕರಿಸಬೇಕು; ಅಂದರೆ ಚಕ್ರದ ಗಾಲಿಯು ಕೆಳಗಿದ್ದ ಭಾಗವು ಚಕ್ರದ ಗತಿಯಿಂದ ಮೇಲಕ್ಕೆ ಬರುವಂತೆ, ಈಗ ಇಳಿತರಕ್ಕೆ ಬಂದಿರುವ ಕೈಮಗ್ಗದ ಕೈಗಾರಿಕೆಯು ಮೇಲ್ತರದ್ದಾಗುವದರಲ್ಲಿ ಸಂದೇಹವಿಲ್ಲ.

**ಶಬ್ದಾರ್ಥ:**

ಉದ್ಯಮ– ಉದ್ಯೋಗ; ಜಾಗತಿಕ– ಜಗತ್ತಿನ; ಆಯಾತ– ಎರಡನೆಯ ಕಡೆಯಿಂದ ಬರುವ; ನಿರ್ಯಾತ– ಎರಡನೆಯ ಕಡೆಗೆ ಹೋಗುವ; ಅಧೋಗತಿ– ಇಳಿತರ; ಧ್ಯೇಯ– ಗುರಿ; ಏರುಪೇರು– ಹೆಚ್ಚುಕಡಿಮೆ; ಬ್ಲೀಚಿಂಗ್– ಸ್ವಚ್ಛ ಮಾಡುವದು; ಡಾಯಿಂಗ– ಬಣ್ಣ ಕೊಡುವದು; ಕ್ಯಾಲೆಂಡರಿಂಗ– ಬಣ್ಣವನ್ನು ನುಣುಪು ಮಾಡುವದು, ಇಸ್ತ್ರೀ ಮಾಡುವದು.

**ಪ್ರಶ್ನೆ:**

೧. ಪೂರ್ವ ಕಾಲದಲ್ಲಿ ಈ ಭಾರತದ ಬಟ್ಟೆಗಳು ಯಾವ ಯಾವ ದೇಶಗಳಿಗೆ ಹೋಗುತ್ತಿದ್ದವು? ಯಾಕೆ?
೨. ಈಗಲೂ ನಮ್ಮ ದೇಶದಲ್ಲಿ ವಿವಿಧ ಬಟ್ಟೆಗಳ ಬಗ್ಗೆ ಹೆಸರಾಗಿರುವ ಸ್ಥಳಗಳು ಯಾವವು?
೩. ಕೈಮಗ್ಗದ ಉದ್ಯೋಗಕ್ಕೆ ಪೆಟ್ಟು ಬಡಿಯಲು ಕಾರಣಗಳು ಯಾವವು? ಆ ತಪ್ಪಿನ ಪಾಲುಗಾರರು ಯಾರು ಯಾರು?
೪. ಕೈಮಗ್ಗದ ಉದ್ಯೋಗವು ಊರ್ಜಿತಾವಸ್ಥೆಗೆ ಬರಬೇಕಾದರೆ ನೇಕಾರರು ಮಾಡತಕ್ಕ ಕರ್ತವ್ಯಗಳೇನು?
೫. ಕೈಮಗ್ಗದ ಉದ್ಯೋಗದ ಬೆಳವಣಿಗೆಗೆ ಸರಕಾರದವರು ಮಾಡಬೇಕಾದ ಕೆಲಸಗಳೇನು?
೬. ಈಗಾಗಲೇ ಅವುಗಳಲ್ಲಿ ಸರಕಾರದವರು ಏನೇನು ಪ್ರಗತಿ ಸಾಧಿಸಿರುತ್ತಾರೆ?

**ವ್ಯಾಕರಣ:**

### ವಚನ

(ಅ) ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಶಬ್ದಗಳನ್ನು ನಿರೀಕ್ಷಿಸಿರಿ.

೧. **ಔರಂಗಜೇಬನು** ತನ್ನ ಮಗಳಿಗಾಗಿ ಡಾಕಾದಿಂದ ಮಲಮಲನ್ನು ತರಿಸಿದ್ದನು.

೨. ಕೈಮಗ್ಗಗಳಿಂದ ವಿವಿಧ **ಬಟ್ಟೆಗಳು** ಸಿದ್ಧವಾಗುತ್ತವೆ.

ಇಲ್ಲಿ ಮೊದಲನೆಯ ವಾಕ್ಯದಲ್ಲಿ ಔರಂಗಜೇಬನು ಎಂಬ ಶಬ್ದವು ಒಬ್ಬನೇ ಒಬ್ಬ ವ್ಯಕ್ತಿಯನ್ನು ಸೂಚಿಸುತ್ತದೆ. ಎರಡನೆಯ ವಾಕ್ಯದಲ್ಲಿ ಬರುವ ಬಟ್ಟೆಗಳು ಎಂಬ ಶಬ್ದವು ಇಲ್ಲಿ ಒಂದಕ್ಕಿಂತ ಹೆಚ್ಚು ವಸ್ತುಗಳನ್ನು ಸೂಚಿಸುತ್ತದೆ.

ಒಂದೇ ಒಂದು ವ್ಯಕ್ತಿ ಅಥವಾ ವಸ್ತುವನ್ನು ಒಂದು ಶಬ್ದವು ಸೂಚಿಸಿದರೆ ಅದು **ಏಕವಚನ**ದಲ್ಲಿ ಇರುತ್ತದೆ. ಒಂದಕ್ಕಿಂತ ಹೆಚ್ಚು ವ್ಯಕ್ತಿ ಹಾಗೂ ವಸ್ತುಗಳನ್ನು ಒಂದು ಶಬ್ದವು ಸೂಚಿಸಿದರೆ ಅದು **ಬಹುವಚನ**ದಲ್ಲಿ ಇರುತ್ತದೆ.

ಮೇಲಿನ ವಾಕ್ಯಗಳಲ್ಲಿ ಔದಂಗಜೇಬನು ಎಂಬ ಶಬ್ದವು ಏಕವಚನದಲ್ಲಿದೆ; ಬಟ್ಟೆಗಳು ಎಂಬ ಶಬ್ದವು ಬಹುವಚನದಲ್ಲಿದೆ.

ಕನ್ನಡದಲ್ಲಿ ಏಕವಚನ ಹಾಗೂ ಬಹುವಚನ ಎಂದು ಎರಡೇ ವಚನಗಳು ಇರುತ್ತವೆ.

(ಬ) ಈ ಪಾಠದಲ್ಲಿ ಬಂದ ೧೦ ಏಕವಚನ ಹಾಗೂ ಬಹುವಚನದ ಶಬ್ದಗಳನ್ನು ಗುರುತಿಸಿ ಹೇಳಿರಿ.



# ೩೦. ಶ್ರೀಶೈಲದ ಶ್ರೀಮತಿ

[ ಈ ಭಾರತದಲ್ಲಿ ಶೂರನಾರೀರತ್ನಗಳೂ– ಸಾಧ್ವಿ ಮಣಿಯರೂ–ರಾಜಕಾರಣಿ ವಜ್ರಗಳೂ ಆಗಿ ಹೋಗಿದ್ದಾರೆ; ಅವರ ಕೀರ್ತಿ ಕಾಯವು ಇಂದಿಗೂ ಎಂದಿಗೂ ಸ್ಥಿರವಾಗಿ ಉಳಿದಿದೆ, ಉಳಿಯುವದು. ಅಂಥ ಸಾಧ್ವೀಮಣಿಯರಲ್ಲಿ 'ಹೇಮರಡ್ಡಿ ಮಲ್ಲಮ್ಮ' ಒಬ್ಬ ಶರಣೆಯು. "ಸಂಸಾರದಿಂದ ಸದ್ಗತಿ" ಎಂಬ ವಚನವನ್ನು ನುಡಿದು, ಅದರಂತೆ ನಡೆದು ಸರ್ವರಿಗೂ ಸದಾಚಾರವನ್ನು ಬೋಧಿಸುತ್ತ, ಸಂಸಾರದ ರೀತಿನೀತಿಗಳನ್ನು ತಿಳುಹಿಸುತ್ತ ತನ್ನ ಜೀವಿತದಲ್ಲಿ ಅನೇಕ ಪವಾಡ ಕೃತಿಗಳನ್ನು ಮಾಡಿ ತೋರಿಸಿ, ಅಂತ್ಯಕ್ಕೆ ಆ ಭಗವಂತನಲ್ಲಿ ಬೆರೆದವಳಿವಳು !

ಅತ್ತೆ, ನೆಗೆಣ್ಣೆಯರು ಅನೇಕವಿಧದಿಂದ ಕೊಟ್ಟ ಅಸಹನೀಯ ಕಷ್ಟಗಳಿಗೆ ನೋಯದೆ, ಬೇಯದೆ ಆಗಲೂ ಅವರ ಹಿತಚಿಂತನೆಯನ್ನೇ ಕೋರಿ, ಸಂಸಾರಿಕ ಸ್ತ್ರೀವರ್ಗಕ್ಕೇ ತನ್ನ ಸಾತ್ವಿಕ ಚರಿತೆಯಿಂದ ಮಾರ್ಗದರ್ಶಕಳಾದವಳಿವಳು ! ಅತ್ತೆಯ ಅಪ್ಪಣೆಯಂತೆ ಈ ಮಲ್ಲಮ್ಮನು ಅಡವಿಯಲ್ಲಿಯೇ ಹಗಲಿರುಳು ಗೋಪಾಲನೆಯಲ್ಲಿ ಕಾಲ ಕಳೆಯುತ್ತ, ಸಮೀಪದಲ್ಲಿದ್ದ ಶ್ರೀಶೈಲ ಮಲ್ಲಿಕಾರ್ಜುನ ಲಿಂಗವನ್ನು ಪ್ರತಿನಿತ್ಯ ಪೂಜಿಸುತ್ತಿರಲು ಆ ಮಲ್ಲಿಕಾರ್ಜುನನೇ 'ಮಲ್ಲಯ್ಯ'ನೆಂಬ ಜಂಗಮ ವೇಷದಿಂದ ಬಂದು ಮಲ್ಲಮ್ಮನ ಭಕ್ತಿಪರೀಕ್ಷೆ ಮಾಡುವ ಪ್ರಸಂಗವನ್ನು ಈ ಪಾಠದಲ್ಲಿ ಕಾಣಬಹುದು. ]



[ ಮಲ್ಲಮ್ಮನ ಅತ್ತೆ ಮತ್ತು ನೆಗೆಣ್ಣೆಯರಿಂದ ಹೊಡಿಸಿಕೊಂಡ ಮಲ್ಲಯ್ಯನು ದುಃಖ ನಟಿಸುತ್ತ ಅಡವಿಯಲ್ಲಿ ಮಲ್ಲಮ್ಮನಿರುವ ಗುಡಿಸಲಿಗೆ ಬಂದು ಮಲ್ಲಮ್ಮನೆದುರಿಗೆ---- ]

ಮಲ್ಲಯ್ಯ— ತಾಯಿ ಮಲ್ಲಮ್ಮ, ಹಸಿವೆಯಿಂದ ಕಂಗೆಟ್ಟ ನಾನು ಅನ್ನ ಭಿಕ್ಷೆಗಾಗಿ ನಿಮ್ಮ ಮನೆಗೆ ಹೋಗಿ ಬೇಡಿದ್ದಕ್ಕೆ ನಗದಂಡಾಟದ ಮೋಜಿನಲ್ಲಿದ್ದ ಆ

ನಿನ್ನ ನೀಚ ನೆಗೆಣ್ಣಿಯರು ನನ್ನನ್ನು ಅವಾಚ್ಯ ಶಬ್ದಗಳಿಂದ ಬೈದರು, ಬೆದರಿಸಿದರು; ಕಡೆಗೆ ಬಡಿಗೆಯಿಂದ ಬಡಿದರು. ಕುತ್ತಿಗೆಗೆ ಕೈಹಾಕಿ ನೂಕಿದರು. ಬೇಡ ತಾಯಿ, ಒಬ್ಬರನ್ನು ಬೇಡುವವನು ಜೀವನ್ಮೃತನು !

ಮಲ್ಲಮ್ಮ— ತಂದೆಯ ಸಮಾನರಾದ ಗುರುದೇವಾ, ತಾಳಿಕೊಳ್ಳಿ. ಅಜ್ಞಾನಿಯರಾದ ಆ ಅಬಲೆಯರ ಅಸಹನೀಯ ತಪ್ಪನ್ನು ನನ್ನ ಸಲುವಾಗಿಯಾದರೂ ಕ್ಷಮಿಸಿರಿ. ಅವರು ನೀಡದಿದ್ದರೆ ಅಷ್ಟೇ; ಹಸುವಿನ ಹಾಲನ್ನು ಕರೆದಿರುವೆನು, ಹಸಿದಿರುವಿರಿ ಬನ್ನಿ, ಮೊದಲು ಹಾಲು ಅಂಬಲಿ ಊಟ ಮಾಡಿರಿ.

ಮಲ್ಲಯ್ಯ— [ಊಟ ಮಾಡುತ್ತ] ಮಲ್ಲಮ್ಮಾ, ಹಸಿವೆಯು ಅತಿಯಾಗಿತ್ತು. ನೀನು ಪ್ರೀತಿಯಿಂದ ನೀಡಿದ ಈ ತಂಗಳು ಅಂಬಲಿಯೇ ಪಂಚಪಕ್ವಾನ್ನದಷ್ಟು ತೃಪ್ತಿಯನ್ನಿಸಿತು. ನಿನಗೂ— ಆ ನೀಚರಿಗೂ ಭೂಮ್ಯಾಕಾಶಗಳಷ್ಟು ಅಂತರವಮ್ಮಾ, ಇದ್ದರೆ ನಿನ್ನಂಥ ಭಕ್ತಳೇ ಇರಬೇಕು !

ಮಲ್ಲಮ್ಮ— ಮಹಾತ್ಮಾ, ಈ ನಿಮ್ಮ ಹೊಗಳಿಕೆಯು ನನ್ನ ಭಕ್ತಿಯನ್ನು ವ್ಯಕ್ತಮಾಡದೆ ನಿಮ್ಮ ಉದಾರತನವನ್ನೇ ತೋರಿಸುತ್ತದೆ. ಅಂಬೆವ್ವ—ನಂಬೆವ್ವ ಮೊದಲಾದ ಶಿವಶರಣೆಯರ ದಾಸಿಯಾಗಲು ಕೂಡ ನಾನು ಯೋಗ್ಯಳಿಲ್ಲ. ಈ ಬಡವಳು ಭಕ್ತಿಯಿಂದ ನೀಡಿದ ಅಂಬಲಿಯನ್ನೇ ನೀವು ಪ್ರೀತಿಯಿಂದ ಉಂಡದ್ದೇ ನನ್ನ ಪುರಾಕೃತ ಪುಣ್ಯ ವಿಶೇಷವೆಂದು ತಿಳಿಯುವೆನು.

ಮಲ್ಲಯ್ಯಾ— ಅಮ್ಮಾ, ಇಂತಹ ಪರಮಭಕ್ತಳಾದ ನಿನಗೆ ಮತ್ತು ಬಡಿಗೆಯಿಂದ ಬಡಿಸಿಕೊಂಡ ನನ್ನಂತಹ ಪರದೇಶಿ ಜಂಗಮನಿಗೆ ಹಗೆಗಳಾದ ಆ ನಿನ್ನ ಅತ್ತೆ, ಅಕ್ಕಂದಿರಿಗೆ ಬಗೆಬಗೆಯ ರೋಗಗಳು ಅಂಟಿಕೊಳ್ಳಲಿ; ಆ ನಿನ್ನ ಮನೆಯ ಐಶ್ವರ್ಯವು ಹಾಳಾಗಿ ಹೋಗಲಿ. ಇದೇ ನನ್ನ ಸಿಟ್ಟಿನ ಶಾಪವು !

ಮಲ್ಲಮ್ಮ— ಹಾ ! ತಡೆ, ಮೃಡರೂಪಿ ಮಲ್ಲಯ್ಯಸ್ವಾಮಿ, ಜಗತ್ತಿನಲ್ಲಿ ನನಗೆ ಹಗೆಗಳೇ ಇಲ್ಲ; ಇದ್ದರೂ ಅಂಥವರಿಗೆ ಸದ್ಬುದ್ಧಿಯನ್ನು ಕೊಟ್ಟು ಕಾಪಾಡು ಎಂದು ನಿನ್ನ ಪಾದಕಮಲಗಳಿಗೆ ಬಿದ್ದು ಬೇಡುವೆನು. ನನಗೆ ಸುಖವಾಗಲೆಂದು ನೀನು ಆಶೀರ್ವದಿಸುವಿ, ಆದರೆ ನನ್ನವರಿಗೆ ಕಷ್ಟವಾಗುವದನ್ನು ಕಣ್ಮುಟ್ಟಿ ನೋಡುವ ನನಗೆ ಸುಖವಾಗುವದೆಂತು? ಸರ್ವಜ್ಞನೂ, ದಯಾಮಯಿಯೂ ಆದ ನೀನೇ ಹೀಗೆ ಆ ಅಜ್ಞರ ಸಂಹಾರಕ್ಕೆ ಸಿದ್ಧನಾದ ಮೇಲೆ ಬೇಲಿಯೇ ಎದ್ದು ಹೊಲ ಮೇದಂತೆ ಆಗುವದಿಲ್ಲವೇ?

ಮಲ್ಲಯ್ಯ— ಏನೇ ಹುಚ್ಚೀ, ನನಗೆ ಹಗೆಗಳೇ ಇಲ್ಲವೆಂದು ಹೇಳುವೆಯಲ್ಲ? ಹಳಸಿದಂಬಲಿಯನ್ನು ನಿನಗಿತ್ತು, ಹಸನಾದ ಬಿಸಿಯುಡಿಗೆ ಉಣ್ಣುವ

ಆ ನಿನ್ನ ನೆಗೆಣ್ಣಿಯರು ನಿನಗೆ ಹಗೆಗಳಲ್ಲವೇ? ಉಳಿದ ಸೊಸೆಯರಿಗೆ ಯಾತರದೂ ಕೊರತೆಯಾಗದಂತಿಟ್ಟು, ನಿನಗೆ ಹರಕು ಸೀರೆಯನಿತ್ತು, ಅಡವಿಗಟ್ಟಿ, ಸೆಗಣಿ ಹಿಡಿಯಲು ಹಚ್ಚಿ, ನಿನ್ನ ಪತಿಯಿಂದಗಲಿಸಿದ ಪರಮಪಾತಕಿಯಾದ ಆ ನಿನ್ನ ಅತ್ತೆಯು ನಿನ್ನ ಹಗೆಯಲ್ಲವೇ? ಅಕ್ಕ, ಅತ್ತೆಯರೆಂಬ ಹುಚ್ಚಿನಿಂದ ಅವರ ತಪ್ಪುಗಳನ್ನೆಲ್ಲ ಮುಚ್ಚಹೋಗುವಿಯಲ್ಲಮ್ಮಾ ಎಂಥವಳೇ ನೀನು?

ಮಲ್ಲಮ್ಮ ಸ್ವಾಮಿ, ನಿಮ್ಮ ಈ ಕಲ್ಪನೆಗಳೇ ತಪ್ಪೋ? ಅಥವಾ ನನ್ನನ್ನು ಪರೀಕ್ಷಿಸಲು ಹೀಗನ್ನುವಿರೋ? ತಿಳಿಯದು. ಹೆತ್ತತಾಯಿಗಿಂತಲೂ ಹೆಚ್ಚಾದ ಆ ನನ್ನ ಅತ್ತೆಯು ಉಳಿದ ಸೊಸೆಯರನ್ನು ಬಿಟ್ಟು ಪವಿತ್ರವಾದ ಈ ಗೋಸೇವೆಗೆ ನನ್ನನ್ನೇ ಹಚ್ಚಿದ್ದು, ನನ್ನ ಮೇಲಿನ ಆಕೆಯ ಹೆಚ್ಚಿನ ಪ್ರೀತಿಯನ್ನು ವ್ಯಕ್ತ ಮಾಡುವದಿಲ್ಲವೇ? ಮೊದಲಿಗೆ ಸೋಮವಾರಕ್ಕೊಮ್ಮೆ ದರ್ಶನವಾಗುತ್ತಿದ್ದ ಗುಡ್ಡದ ಲಿಂಗಯ್ಯನ ದರ್ಶನವು ಈಗ ನಿತ್ಯವೂ ಆಗಲು ಆ ನಿನ್ನ ಪ್ರೀತಿಯ ನೆಗೆಣ್ಣಿಯರ ಹೇಳಿಕೆಗಳೇ ಕಾರಣವಲ್ಲವೆ? ಅಂದ ಬಳಿಕ ಆ ನನ್ನ ಹಿತಚಿಂತಕರು ನನಗೆ ಹಗೆಗಳೇ? ಕಾರಣ ಅವರ ಅಹಿತವನ್ನು ತಾವು ಬಯಸಬಾರದಾಗಿ ನನ್ನ ನಮ್ರ ಪ್ರಾರ್ಥನೆಯು.

ಮಲ್ಲಯ್ಯ— ತಾಯೀ, ಶತ್ರುಗಳನ್ನೇ ಮಿತ್ರರೆಂದು ಭಾವಿಸುವ ಈ ನಿನ್ನ ಕತೆಯನ್ನು ನೋಡಿ, ಸ್ವರ್ಗದಲ್ಲಿರುವ ಧರ್ಮರಾಜನೂ ದಂಗು ಬಡೆಯಬಹುದು! ನಿನ್ನ ಮನೆಯವರಿಗೆ ನಾನು ಶಾಪಕೊಡದಿದ್ದರೂ ಅವರು ಮಾಡಿದ ದುಷ್ಕರ್ಮದ ದುಷ್ಫಲವನ್ನು ಅವರು ಉಂಡೇ ತೀರಬೇಕು.

[ ಅಷ್ಟರಲ್ಲಿ ಮಲ್ಲಮ್ಮನ ಗಂಡ ಭರಮರಡ್ಡಿಯು, ಕೊಡ್ಲಿ, ಕಂಬಳಿಯ ಮುಸುಕಿನೊಡನೆ ಬರುತ್ತ ]

ಭರಮರಡ್ಡಿ— ನಮ್ಮ ಅವ್ವನ ಅಪ್ಪಣೆಯಂತೆ ನನ್ನ ಮಡದಿ ಹಾಗೂ ಮಲ್ಲಯ್ಯ ಇವರನ್ನು ಕಡಿದು ಹಾಕಲು ಹೊರಟಿರುವ ನಾನು ಈ ಕೊಡ್ಲಿಯ ಒಂದೇ ಹೊಡತಕ್ಕೆ ಇಬ್ಬರನ್ನೂ ಕೊಂದು ಹಾಕುವೆನು. [ಕೆಲಹೊತ್ತು ಆಲೋಚಿಸಿ] ಆದರೆ "ಪಟ್ಟಾದರೂ ಪರಾಮರಿಸಬೇಕೆ"ಂದು ಹಿರಿಯರು ಹೇಳುವರು. ನಮ್ಮ ಮನೆಯವರು ಈ ನನ್ನ ಹೆಂಡತಿಯ ಮೇಲೆ ಜಾರತನದ ಆರೋಪ ಹೊರಿಸಿರುವರು. ಇದನ್ನು ನಂಬಲೋ? ಅಥವಾ ಅದನ್ನು ನಂಬಲೋ? ಇಷ್ಟೇಕೆ ತಲೆ ಕೆಡಿಸಿಕೊಳ್ಳುವದು? ಪರೀಕ್ಷೆಗಾಗಿಯೇ ಪ್ರತ್ಯಕ್ಷ ಬಂದಿರುವೆನಲ್ಲ! ಇದ್ದ ಹೂರಣವು ಹೊರಬಿದ್ದೇ ಬೀಳುವದು. ಗುಡಿಸಲ ಮರೆಯಲ್ಲಿ ನಿಂತು ಇವರಿಬ್ಬರ ಮಾತು ಕೇಳುವೆನು.

ಮಲ್ಲಯ್ಯ— ಮಲ್ಲಮ್ಮಾ, ಜಗತ್ತಿನಲ್ಲಿ ಸುತ್ತುವರಿಯುವ ಚಕ್ರದ ಕಲ್ಲು ಗಳು ಒಂದರಹಿಂದೊಂದು ಮೇಲೆ ಕೆಳಗೆ ಆಗುವಂತೆ ಭಾಗ್ಯ–ಬಡತನ, ಸುಖ–ದುಃಖ, ಭೋಗ–ರೋಗ, ಜನನ–ಮರಣಗಳು ಮನುಷ್ಯನ ಬೆನ್ನು ಹತ್ತಿರುವವು. ಈ ನಿಜತತ್ವಗಳನ್ನು ಮರೆತು, ಸದ್ಯದ ಸೊಬಗಿನಿಂದಲೇ ಉಬ್ಬಿ, ಕೊಬ್ಬಿ ನಡೆ ಯುವವರ ಸುಖ–ಸಂಪತ್ತುಗಳು, ತ್ರಿಮೂರ್ತಿಗಳು ತಡೆದರೂ ಸಿಲ್ಲುವದಿಲ್ಲ. ನಿಸರ್ಗದ ನಿಯಮವೇ ಹಾಗಿದೆ.

ಭರಮರಡ್ಡಿ— ನನಗೆ ಮಲ್ಲಿಕಾರ್ಜುನನ ಮಂತ್ರ ಕಲಿಸಿದ ಮಡದಿಯ ಕೂಡ ಮಾತಾಡಕೂಡದೆಂದು ಮನೆಯವರು ನನಗೆ ಕಟ್ಟು ಮಾಡಿದ್ದಕ್ಕೆ ಈಕೆಯು ನನ್ನನ್ನು ನೋಡಿದಾಗಲೆಲ್ಲ ಸುಮ್ಮನೇ ನನಗೆ ಕೈಮುಗಿದು ಹೋಗುವಳು. ಪಾಪ! ಅದನ್ನು ಕಂಡು ನನಗೂ ಕಸಿವಿಸಿಯಾಗುತ್ತದೆ! ಇಂಥ ನನ್ನ ಪ್ರೀತಿಯ ಹೆಂಡ ತಿಯು ತಪ್ಪುಗಾರಳೆಂದು ನಾನು ಒಪ್ಪಲಾರೆನು.

ಮಲ್ಲಮ್ಮ— ಬೇಡ ನನ್ನಪ್ಪಾ, ನಿಸರ್ಗದ ನಿಯಮವೇ ಹಾಗೆ ಇದ್ದರೆ ಸತಿ ಸಾವಿತ್ರಿಯು ಸತ್ತ ಗಂಡನನ್ನು ಬದುಕಿಸಿಕೊಂಡಿಲ್ಲವೇ? ಅಲ್ಪಾಯುಷಿ ಯಾಗಿದ್ದ ಮಾರ್ಕಂಡೇಯನು ಕಲ್ಪಾಯುಷಿಯಾಗಿಲ್ಲವೇ? ಪರಮಾತ್ಮ ರೂಪಿ ಯಾದ ನಿನ್ನ ದಯೆಯುಂಟಾದರೆ ನಿಸರ್ಗದ ವಿರುದ್ಧ ವಿಷವು ಅಮೃತವಾಗುವದು.

ಮಲ್ಲಯ್ಯ— ಮಗಳೇ, ಅದು ನಿನ್ನಂಥ ಉದಾರಿ ದಯಾವಂತ ನೀತಿ ಯುಕ್ತ ಸತಿಯರಿಗೆ ಮಾತ್ರ ಸಾಧ್ಯವು, ಆ ನಿನ್ನ ಮನೆಯವರಿಗೆ ಸಾಧ್ಯವೇ? ಮಾಡಿದ ಕರ್ಮಕ್ಕೆ ಮಾನವನು ಹೊಣೆಗಾರನಾಗಲೇಬೇಕು.

ಭರಮರಡ್ಡಿ— ಈ ಇಬ್ಬರ ಮಾತಿನಲ್ಲಿಯೂ ಸ್ವಲ್ಪಾದರೂ ಸಂಶಯ ಬರಲೊಲ್ಲದು; ಬೇರೇ ರೂಪದಿಂದಲೇ ಮಾತುಗಳು ನಡೆದಿವೆಯಲ್ಲ? ಆಗಲಿ ಇನ್ನೂ ಸ್ವಲ್ಪ ಹೊತ್ತು ಸಾಗಲಿ.

ಮಲ್ಲಯ್ಯ— ತಾಯೇ, ಆ ನಿನ್ನ ಅತ್ತೆಯ ಮನೆಯಲ್ಲಿ ಅತಿಥಿಗಳಿಗೆ ಆದರ ವಿದೆಯೇ? ದೇವತಾ ಭಜನ–ಪೂಜನಗಳಿವೆಯೇ? ಭೂತದಯೆ–ಸುವಿಚಾರ ಗಳಿವೆಯೇ?

ಮಲ್ಲಮ್ಮ— ತಂದೆಯೇ, ಆ ಎಲ್ಲ ಕಾರ್ಯಗಳಿಗೂ ನನ್ನನ್ನೇ ಹೊಣೆ–ಗಾರಿಕೆಯವಳನ್ನಾಗಿ ಮಾಡಿರುವರು; ಕಾರಣ ನನ್ನ ಮನೆಯವರಿಗೂ ನನ್ನ ಪತಿ ದೇವನಿಗೂ ಸದಾ ಕ್ಷೇಮವನ್ನುಂಟು ಮಾಡು.

ಮಲ್ಲಯ್ಯ— ಮಗಳೇ ಮಲ್ಲಮ್ಮಾ, ನಿನ್ನ ಪತಿದೇವನು ಎಂಥವನೇ ? ಹೆಂಡತಿಯೆಂಬ ಕರುಣೆಯು ಅವನಿಗೆ ಸ್ವಲ್ಪವಾದರೂ ಇಲ್ಲವಲ್ಲ ?

ಭರಮ— ಮಲ್ಲಯ್ಯನು ಅನ್ನುವ ಮಾತು ನಿಜವೇ ಅದೆ. ಆದರೆ ಏನು ಮಾಡಲಿ ? " ಇತ್ತ ಬಿದ್ದರೆ ಬಾವಿ, ಅತ್ತ ಬಿದ್ದರೆ ಕೆರೆ " ಎಂಬಂತಾಗಿದೆ ನನ್ನ ಬಾಳುವೆಯು !

ಮಲ್ಲಮ್ಮ— ನನ್ನ ಪತಿದೇವನಂಥ ಶಾಂತ ಮೂರ್ತಿಯೆ ಇಲ್ಲ. ಆತನು ನನಗೆ ಮಲ್ಲಿಕಾರ್ಜುನಸ್ವಾಮಿಯ ಸಮಾನನು; ಆದರೆ ಅಗಸರವನ ಮಾತಿಗೆ ಹೆದರಿ ರಾಮಚಂದ್ರನು ಸೀತಾಮಾತೆಯನ್ನು ಬಿಟ್ಟ ಹಾಗೆ ನನ್ನ ಪತಿಯು ನನ್ನನ್ನು ಬಿಟ್ಟಿರುವರು.

ಭರಮ— ಭಲೆ ! ಭಲೆ ! ನನ್ನ ಸತಿಯು ಸತ್ಯವನ್ನೇ ಹೇಳಿರುವಳು. ಈಕೆಯು ನನ್ನ ಸತಿಯಲ್ಲ, ನನ್ನ ಭಾಗ್ಯದೇವತೆ ! ಮಲ್ಲಯ್ಯನೇ ಮಲ್ಲಿಕಾರ್ಜುನ ದೇವನು !

ಮಲ್ಲಮ್ಮ— ಪೂಜ್ಯನೇ, ನಾನು ನಿನ್ನನ್ನು ಸದಾ ಸತ್ಕರಿಸುವೆನು. ಪೂಜಿಸುವೆನು; ನನ್ನ ಸಲುವಾಗಿಯಾದರೂ ಆ ನನ್ನ ಮನೆಯವರಿಗೆ ರೋಗ–ರುಜಿಗಳು ಬಾರದಂತೆ ಮಾಡು; ನನ್ನ ಮಾವ ಹೇಮರಡ್ಡಿಯ ಮನೆಯು ಹೇಮಮಯ–ವಾಗಿಯೇ ಇರಲಿ. ಛೇ, ನಾನು ಎಂದರೆ ನರಕ, ಗುರುದೇವಾ ಈ ಅಹಂಕಾರವನ್ನು ನನಗೆ ಕೊಡಬೇಡ; ಈ ಮೂಢಳ ತಪ್ಪನ್ನು ಕ್ಷಮಿಸು, ನಿನಗೆ ಕೈಮುಗಿಯುತ್ತೇನೆ.

ಭರಮ— ನನ್ನ ಹೆಂಡತಿಯು ಕೈಮುಗಿದ ಮೇಲೆ ನಾನೂ ಇಲ್ಲಿಂದಲೇ ಕೈಮುಗಿಯುತ್ತೇನೆ. ದೇವಾ ಹಾಗೂ ನನ್ನ ದೇವಿ, ನಿಮ್ಮಿಬ್ಬರನ್ನು ಕೊಡ್ಲಿಯಿಂದ ಪೂಜೆ ಮಾಡಬೇಕೆಂದು ಬಂದಿದ್ದ ನನ್ನ ತಪ್ಪನ್ನು ಕ್ಷಮಿಸಿರಿ. [ಕೈಮುಗಿಯುವನು]

ಮಲ್ಲಯ್ಯ— [ಸ್ವಗತ] ಈ ನನ್ನ ಭಕ್ತೆಗಳಿಂದ ಇನ್ನೂ ಹಲವು ಪವಾಡಗಳನ್ನು ಮಾಡಿಸಬೇಕಾಗಿದೆ. ಈಕೆಯಿಂದಲೆ ಮಳಲನ್ನು ಬಿತ್ತಿಸಿ ಬೆಳೆಯಬೇಕಾಗಿದೆ. ಕಾಡಕವಡಿಯ ಕಾಯಿಗಳನ್ನು ಕಡವರ ಕಾಯಿಗಳನ್ನು ಮಾಡಿಸಬೇಕಾಗಿದೆ. ಕತ್ತಲೆಯ ಕಲ್ಪನೆಯಿದ್ದರಲ್ಲವೇ, ಬೆಳಕಿನ ಮಹತ್ವ ತಿಳಿಯುವದು ? ಈಕೆಯ ಮನೆಯವರ ದುರ್ಗುಣಗಳಿಂದಲೇ ಈಕೆಯ ಸದ್ಗುಣಗಳ ಸತ್ವಪ್ರಕಾಶವು ಬೆಳಗಲಿ. [ಪ್ರಕಾಶ] ತಾಯೇ, ನಿನ್ನ ಮನೆಯವರಿಗೆ ಕೃತಕರ್ಮದ ಬಗ್ಗೆ ಪಶ್ಚಾತ್ತಾಪವಾಗಿ ಇಲ್ಲಿಗೆ ಬಂದೇ ಬರುವರು; ಆಗ ದಯೆತೋರುವೆನು, ಆ ವರೆಗೆ ಶಾಂತಳಾಗಿರಮ್ಮಾ.

**ಶಬ್ದಾರ್ಥ:**

ಅವಾಚ್ಯ – ಕೆಟ್ಟ, ಅನ್ನಬಾರದ; ಪುರಾಕೃತ – ಮೊದಲು ಮಾಡಿದ; ಜೀವನ್ಮೃತ – ಬದುಕಿದ್ದರೂ ಸತ್ತವರ ಸಮಾನನಾದವ; ಅಸಹನೀಯ – ತಡಕೊಳ್ಳಲಿಕ್ಕೆ ಆಗದ; ಮೃಡ – ಶಿವ; ನಿಸರ್ಗ – ಸೃಷ್ಟಿ; ಆದರ – ಪ್ರೀತಿ; ಕಡವರ – ಬಂಗಾರ; ಪವಾಡ – ಮನುಷ್ಯರ ಕೈಯಿಂದ ಮಾಡಲಿಕ್ಕಾಗದ ಕೆಲಸ.

**ಪ್ರಶ್ನೆ:**

೧. ಒಬ್ಬರನ್ನು ಬೇಡುವವನು ಜೀವನ್ಮೃತನು ಹೇಗೆ ?
೨. ಮಲ್ಲಮ್ಮನು ನಿರಭಿಮಾನಿಯೂ ಉದಾರ ಬುದ್ಧಿಯವಳೂ ಇದ್ದಳೆಂಬುದನ್ನೂ ಹೇಳಿರಿ.
೩. ಮಲ್ಲಮ್ಮನ ಪತಿಭಕ್ತಿಯು ಹೇಗಿತ್ತು ?
೪. ಮಲ್ಲಮ್ಮನು ಶತ್ರುಗಳನ್ನು ಮಿತ್ರರೆಂದು ತಿಳಿಯುತ್ತಿದ್ದಳೆಂಬ ಮಾತನ್ನು ಸಿದ್ಧ ಮಾಡಿ ಹೇಳಿರಿ.
೫. ಮಲ್ಲಯ್ಯನು ನಿಸರ್ಗದ ನಿಯಮಗಳ ಬಗ್ಗೆ ಏನು ಹೇಳಿರುವನು ?
೬. ಮಲ್ಲಮ್ಮನ ಪಾಠದಲ್ಲಿ ಸ್ತ್ರೀಯರು ಕಲಿಯತಕ್ಕ ಗುಣಗಳು ಯಾವವು ?

**ವ್ಯಾಕರಣ:**

**ಪುನರವಲೋಕನ**

ಕೆಳಗಿನ ವಾಕ್ಯಗಳಲ್ಲಿ ಬರುವ ನಾಮ ಹಾಗೂ ಸರ್ವನಾಮಗಳ ಪುರುಷ-ಲಿಂಗ-ವಚನಗಳನ್ನು ಗುರುತಿಸಿರಿ.

೧) ಬಸವಣ್ಣನವರು ಮಹಾನುಭಾವರಾಗಿದ್ದರು.
೨) ಜನವು ಬಂದಿತು.
೩) ದುರ್ಜನನು ದುಃಖಪಡುವನು.
೪) ಗಂಗೆ ಪ್ರವಹಿಸುತ್ತಾಳೆ.
೫) ಸೂರ್ಯನು ಬೆಳಗುತ್ತಾನೆ.
೬) ನಿಮ್ಮ ಮುದುಕಿ ಏನು ಮಾಡುತ್ತಿದೆ ?
೭) ತಾವುಗಳು ದಯಮಾಡಿಸಬೇಕು.
೮) ನೀರು ಬಂದವು.
೯) ನಾವು ಇನ್ನು ಬರುತ್ತೇವೆ.
೧೦) ಭುವನೇಶ್ವರಿಯು ನಿಮಗೆ ಕಲ್ಯಾಣಮಾಡಲಿ.

**ಪ್ರಬಂಧ ಪಾಠ ೪**

**ಪ್ರಸಂಗಗಳ ವರ್ಣನೆ** (ಪುನರವಲೋಕನ)

ಈಗಾಗಲೇ ನೀವು ಪ್ರಸಂಗಗಳನ್ನು ಬಣ್ಣಿಸುವದನ್ನು ಕಲಿತಿರುವಿರಿ. ನಿಮಗೆ ಅದು ಇನ್ನೂ ಚನ್ನಾಗಿ ರೂಢಿಯಾಗಬೇಕೆಂದು ನಿಮಗೆ ಬರೆಯಲಿಕ್ಕೆ ಮತ್ತೆ ಕೆಲವು

ಪ್ರಸಂಗಗಳನ್ನು ಕೆಳಗೆ ಕೊಟ್ಟಿದೆ. ಅವುಗಳಲ್ಲಿ ಬೇಕಾದ ಒಂದನ್ನು ಆಯ್ದುಕೊಂಡು ಅದರ ವರ್ಣನೆಯನ್ನು ಬರೆಯಿರಿ.

೧) ನೀವು ಒಂದು ಜಾತ್ರೆಗೆ ಹೋದ ಪ್ರಸಂಗ.
೨) ನೆರೆಯ ಓಣಿಯಲ್ಲಿ ಒಂದು ಮನೆಗೆ ಬೆಂಕಿಹತ್ತಿದ ಪ್ರಸಂಗ.
೩) ನಿಮ್ಮ ಊರಿಗೆ ಬಂದ ಒಬ್ಬ ಮಹಾಪುರುಷನನ್ನು ನೋಡಲು ಹೋದಪ್ರಸಂಗ.
೪) ನೀವು ಪ್ರಜಾರಾಜ್ಯದಿನವನ್ನು ಆಚರಿಸಿದ ಪ್ರಸಂಗ.
೫) ನಿಮಗೆ ಒಂದು ಚೇಳು ಕಚ್ಚಿದ ಪ್ರಸಂಗ.
೬) ನೀವು ಒಬ್ಬ ರೋಗಿಗೆ ನೆರವಾದ ಪ್ರಸಂಗ.
೭) ನೀವು ಬೆಳಸಿಯನ್ನು ತಿನ್ನಲು ಹೋದ ಪ್ರಸಂಗ.
೮) ನೀವು ಒಂದು ಸರ್ಕಸ್‌ನ್ನು ನೋಡಲು ಹೋದ ಪ್ರಸಂಗ
೯) ನೀವು ಒಂದು ಅಪಘಾತದಲ್ಲಿ ಸಿಕ್ಕ ಪ್ರಸಂಗ.
೧೦) ನೀವು ಒಂದು ವಸ್ತುವನ್ನು ಕಳೆದುಕೊಂಡ ಪ್ರಸಂಗ.



# ೩೧. ನಮ್ಮ ಆಹಾರ

[ ಆಹಾರದ ಅವಶ್ಯಕತೆಯು ಎಲ್ಲರಿಗೂ ಗೊತ್ತಿದ್ದರೂ ಆಹಾರದ ಶಾಸ್ತ್ರೀಯ ವಿವೇಚನೆಯನ್ನು, ಸಮತೋಲ ಆಹಾರವನ್ನು ಬಹಳ ಜನರು ತಿಳಿದಿರುವದಿಲ್ಲ. ಈ ವಿಷಯಗಳನ್ನು ತಿಳಿದಿರುವದು ಎಷ್ಟು ಅವಶ್ಯಕವೆಂಬುದು ಈ ಪಾಠ ಓದಿದ ಮೇಲೆ ನಿಮಗೆ ತಿಳಿಯುವದು. ]



ಜೀವಿಸಿರಬೇಕೆಂಬ ಇಚ್ಛೆಯುಳ್ಳ ಮಾನವನು ಆಹಾರವನ್ನು ಸೇವಿಸದೆ ಹಾಗೆಯೆ ಇರಲಾರ. ಒಂದೇ ದಿನ ಉಪವಾಸ ಮಾಡಿದಾಗ್ಗೆ, ಅದೇಕೆ ಕೆಲಸ ಮಾಡಿ ದಣಿದು ಮನೆಗೆ ಬಂದಾಗ್ಗೆ ಹಸಿವೆಯಿಂದ ಬಳಲುವ ನಿಮಗೆ, ನಿಮ್ಮ ಹಸಿವೆಯನ್ನು ಹಿಂಗಿಸಲು ಬೇಕಾದ ಯಾವದೊಂದೂ ಪದಾರ್ಥ ಸಿಕ್ಕದಿದ್ದರೆ ವಿಪರೀತ ಸಿಡಕುತನ ಬರುತ್ತದೆ. ಕೈಕಾಲುಗಳಲ್ಲಿ ತ್ರಾಣವೇ ಹೋಗಿ ಬಿಟ್ಟಂ ತಾಗುತ್ತದೆ. ಮನಸ್ಸು ಏನನ್ನೂ ಮಾಡಲಿಚ್ಛಿಸುವದಿಲ್ಲ. ಇದೆಲ್ಲ ಏಕೆ ಆಗು ತ್ತದೆ; ನಿಮಗೆ ಗೊತ್ತೆ ?

ನೀವು ಯಾವದೊಂದು ಕೆಲಸದಲ್ಲಿ ತೊಡಗಿದಾಗ ನಿಮ್ಮ ದೇಹದಲ್ಲಿಯ ಎಲ್ಲ ಅವಯವಗಳೂ ಕೆಲಸ ಮಾಡುತ್ತಿರುತ್ತವೆ. ಯಂತ್ರಗಳ ಚಾಲನೆಗೆ ಕಲ್ಲಿ ದ್ದಲಿ, ಪೆಟ್ರೋಲು, ಹರಳೆಣ್ಣೆ ಮೊದಲಾದವುಗಳನ್ನು ಪೂರೈಸುವಂತೆ ಯಂತ್ರ

ದಂತಿದ್ದ ನಮ್ಮ ದೇಹಕ್ಕೆ ಅದರ ಚಾಲನೆ ಹಾಗೂ ಚಟುವಟಿಕೆಗಳು ಅವ್ಯಾಹತ ವಾಗಿ ಸಾಗುವಂತೆ ಆಹಾರ, ನೀರು ಮೊದಲಾದವುಗಳನ್ನು ದೇಹದ ಬೇಡಿಕೆಗನು ಸಾರವಾಗಿ ಕೊಡಬೇಕಾಗುತ್ತದೆ. ಅಂತೂ ಆಹಾರವು ಮೂರು ಕೆಲಸಗಳಿಗಾಗಿ ಅಗತ್ಯ ಬೇಕಾಗುತ್ತದೆ. ದೇಹದ ಬೇರೆ ಬೇರೆ ಕೆಲಸ ಹಾಗೂ ಚಟುವಟಿಕೆಗಳಿಗೆ ಶಕ್ತಿಯನ್ನೊದಗಿಸುವದು ಆಹಾರದ ಮೊದಲನೇ ಉಪಯೋಗ.

ವಾತಾವರಣದಲ್ಲಿ ಸ್ಥಿತ್ಯಂತರಗಳಾಗುತ್ತಿದ್ದರೂ ಅದಕ್ಕೆಡೆಗೊಡದೆ ಶರೀರ ದಲ್ಲಿಯ ಉಷ್ಣತಾಮಾನವನ್ನು ಸಮನಾಗಿ ಕಾಯ್ದುಕೊಳ್ಳಲು ಸಹಾಯ ಮಾಡು ವದು ಆಹಾರದ ಎರಡನೆಯ ಕೆಲಸ. ದೇಹವು ಬೇರೆ ಬೇರೆ ಅಣುಕೋಶಗಳಿಂ ದುಂಟಾಗಿದೆ; ದೇಹದ ಚಟುವಟಿಕೆಗಳಿಂದ ಈ ಅಣುಕೋಶಗಳು ಸವೆಯು ತ್ತವೆ; ಆ ಸವಕಳಿಯನ್ನು ಪೂರೈಸಲಿಕ್ಕೂ ಹೊಸ ಹೊಸ ಅಣುಕೋಶಗಳನ್ನು ನಿರ್ಮಿಸಿ ದೇಹವು ಬೆಳೆಯುವಂತೆ ಮಾಡಲು ಆಹಾರವು ಅತ್ಯಗತ್ಯವಾಗಿದೆ. ಇದು ಆಹಾರದ ಮೂರನೇ ಉಪಯೋಗ. ಈಗ ವಿವರಿಸಿದ ಮೂರೂ ಹೇತು ಗಳನ್ನು ಸಾಧಿಸಲಿಕ್ಕೆ ಆಹಾರವು ಬೇಕೇ ಬೇಕು ಎಂದಂತಾಯಿತು.

ಆದರೆ ಸಿಕ್ಕ ಆಹಾರವನ್ನು ಸೇವಿಸಿ ಈ ಉದ್ದೇಶಗಳನ್ನು ಈಡೇರಿಸಿಕೊಳ್ಳ ಬಹುದೇ ಎಂಬ ಪ್ರಶ್ನೆ. ಆಹಾರವು ಕೆಳತರಗತಿಯದೂ, ನಿಃಸತ್ವವಾದದ್ದೂ ಅನಾರೋಗ್ಯಕರವಾದದ್ದೂ ಆಗಿದ್ದರೆ, ಅದನ್ನು ಸೇವಿಸುವವನೂ ಹಾಗೆಯೇ ಆಗಿರುತ್ತಾನೆ. ಅದೇ ಆಹಾರವು ಸತ್ವಯುಕ್ತವಾದದ್ದೂ, ದೇಹದ ಬೆಳವಣಿಗೆಗೆ ಬೇಕೇಬೇಕಾದ ಉಪಯುಕ್ತ ಪೋಷಣಾಂಶಗಳಿಂದ ಕೂಡಿದುದೂ ಆದರೆ ಅದನ್ನು ಸೇವಿಸುವ ಮಾನವನು ತೇಜಸ್ವಿಯೂ, ಬಲಿಷ್ಠನೂ ಆಗುತ್ತಾನೆ. ಹೀಗಾಗಿ ಮಾನವನು ಸಿಕ್ಕದ್ದನ್ನು ತಿಂದು ಹೊಟ್ಟೆ ಮಾತ್ರ ಹೊರಬಲ್ಲ. ಆದರೆ ಮಾನವ ನಂತೆ ಬಾಳಲಾರ. "ಆರೋಗ್ಯವೇ ಭಾಗ್ಯ" ಎಂಬ ಗಾದೆಯಂತೆ ನಿರೋಗಿ ಯಾದ ಮನುಷ್ಯನು ಮಾತ್ರ ನಿಜವಾದ ಜೀವನವನ್ನು ಸಾಗಿಸಬಲ್ಲ.

ಹಾಗಾದರೆ ನಾವು ಎಂಥ ಆಹಾರವನ್ನು ಸೇವಿಸಬೇಕು. ಬೇರೆ ಬೇರೆ ದೇಶಗಳ ಆಹಾರವು ಭಿನ್ನ ಭಿನ್ನ ಸ್ವರೂಪದ್ದಾಗಿದೆ. ಹವಾಮಾನಗಳಿಗನುಸಾರ ವಾಗಿ ಮನುಷ್ಯನು ತಾನು ಸೇವಿಸುವ ಆಹಾರಗಳಲ್ಲಿ ಬದಲಾವಣೆಗಳನ್ನು ಮಾರ್ಪ ಡಿಸಿಕೊಂಡಿದ್ದಾನೆ. ಅದಕ್ಕೆಂತಲೇ ತಂಪು ಪ್ರದೇಶದಲ್ಲಿರುವವರಿಗೆ ಹೆಚ್ಚು ಉಷ್ಣತೆ ಯನ್ನೊದಗಿಸುವ ಆಹಾರ ಬೇಕಾಗಿದ್ದರಿಂದ ಅವರು ಪ್ರಾಣಿಜ ಆಹಾರವಾಗಿದ್ದರೆ ಮಾಂಸ, ಮೀನ, ತತ್ತಿಗಳನ್ನು, ಸಸ್ಯಜ ಆಹಾರವಾಗಿದ್ದರೆ ಗೋದಿಯನ್ನು ತಮ್ಮ ಮುಖ್ಯ ಆಹಾರವೆಂದು ಸೇವಿಸುತ್ತಾರೆ. ಅದರಂತೆ ಉಷ್ಣ ಪ್ರದೇಶಗಳಲ್ಲಿಯ

ಜನರು ಕಡಿಮೆ ಉಷ್ಣತೆಯನ್ನುಂಟುಮಾಡುವ ಆಹಾರವನ್ನು ತೆಗೆದುಕೊಳ್ಳು
ತ್ತಾರೆ. ಉಷ್ಣ ಪ್ರದೇಶಗಳಾಗಿರುವ ಬಂಗಾಲ, ಮದ್ರಾಸಗಳು ಅಕ್ಕಿಯನ್ನು
ಸೇವಿಸುವದೇ ಇದಕ್ಕೆ ಸಾಕ್ಷಿ. ಈ ಮೊದಲು ತಿಳಿಸಿದಂತೆ ನಮ್ಮ ದೇಹದ ಎಲ್ಲ
ವ್ಯಾಪಾರಗಳೂ, ಚಟುವಟಿಕೆಗಳೂ ಸೇರವಾಗಿ ನಾಗಲೇಬೇಕೆಂದಿದ್ದರೆ ನಮ್ಮ
ಆಹಾರವು ಪೇಹಕ್ಕೆ ಶಕ್ತಿ ಹಾಗೂ ಉಷ್ಣತೆಯನ್ನೊದಗಿಸುವ ಶರ್ಕರಾಪಿಷ್ಟ
ಗಳನ್ನೂ, ಅಣುಕೋಶಗಳ ಆಕಾರ ಹಾಗೂ ಬೆಳವಣಿಗೆ ಅವಶ್ಯವಾದ ಸಸಾರ
ಜನಕಗಳನ್ನೂ, ಎಲಬು ಹಾಗೂ ಅಣುಕೋಶಗಳ ರಚನೆಗೂ, ದೇಹದ ಚಲ
ನೆಗೂ ಅವಶ್ಯವಾಗಿರುವ ಖನಿಜ ವಸ್ತುಗಳನ್ನೂ ಅಲ್ಲದೆ ದೇಹದ ಬೇರೆ ಬೇರೆ
ಭಾಗಗಳನ್ನು ಕಟ್ಟಲೂ, ದೇಹವನ್ನು ರೋಗ ಜಂತುಗಳಿಂದ ರಕ್ಷಿಸುವದಕ್ಕೂ
ಅಗತ್ಯವಾದ, ತ್ತೀಚೆಗೆ ಇಪ್ರಾಮುಖ್ಯತೆಯನ್ನು ಪಡೆಯುತ್ತಿರುವ ಜೀವನ ಸತ್ವ
ಗಳನ್ನು ಒಳಗೊಂಡಿರಬೇಕು.

ಶರ್ಕರಾಪಿಷ್ಟಗಳು ಅಕ್ಕಿ, ಜೋಳ, ಗೋದಿ ಮೊದಲಾದ ಏಕದಳ ಧಾನ್ಯ
ಗಳಲ್ಲಿಯೂ, ಗೆಣಸು, ಬಟಾಟೆ, ಬೀಟು ಮೊದಲಾದವುಗಳಲ್ಲಿಯೂ, ಹಣ್ಣು,
ಹಾಲು, ಜೇನುತುಪ್ಪ ಮೊದಲಾದವುಗಳಲ್ಲಿಯೂ ಸಕ್ಕರೆಯಲ್ಲಿಯೂ ವಿಪುಲವಾಗಿ
ರುತ್ತದೆ. ಕೂಡಲೇ ರಕ್ತಾಗತವಾಗುವ ಇವು ಸಣ್ಣಮಕ್ಕಳಿಗೂ, ಬೇನೆಯುವ
ರಿಗೂ ಮುದುಕರಿಗೂ ಹಿತಕಾರಿ.

ಕೊಬ್ಬು ಪ್ರಾಣಿಜ, ಸಸ್ಯಜ ಹೀಗೆ ಎರಡು ವಿಧಗಳಲ್ಲಿ ದೊರೆಯುತ್ತದೆ.
ಬೆಣ್ಣೆ, ತುಪ್ಪ, ತತ್ತಿ, ಮೀನದ ಎಣ್ಣೆ ಮೊದಲಾದವುಗಳು ಪ್ರಾಣಿಜ ಕೊಬ್ಬಿನ
ವಿಧಗಳಾಗಿದ್ದರೆ, ಕುಸುಬಿ ಎಣ್ಣೆ, ಕೊಬ್ಬರಿ ಎಣ್ಣೆಗಳು ಸಸ್ಯಜ ಕೊಬ್ಬಿನ ವಿಧಗಳು.

ಕೊಬ್ಬಿನಂತೆ ಸಸಾರ ಜನಕಗಳೂ ಪ್ರಾಣಿಜ ಹಾಗೂ ಸಸ್ಯಜ ರೂಪದಲ್ಲಿ
ದೊರಕುತ್ತವೆ. ಹಾಲು, ಮೊಸರು, ತತ್ತಿ, ಮೀನಗಳ ಮುಖಾಂತರ ದೊರೆ
ಯುವ ಸಸಾರಜನಕಗಳು ಪ್ರಾಣಿಜ ಸಸಾರ ಜನಕಗಳು. ಅಕ್ಕಿ, ಜೋಳ,
ಗೋದಿ, ಕಡ್ಲೆ, ತೊಗರಿ, ಹೆಸರು, ಉದ್ದು ಮೊದಲಾದ ಪಿಷ್ಟ ಕಾಳುಗಳಿಂದಲೂ,
ಭೈಮೂಗು, ಕುಸುಬೆ, ಎಳ್ಳು ಮೊದಲಾದ ಎಣ್ಣೆಯ ಕಾಳುಗಳಿಂದಲೂ ದೊರೆ
ಯುವ ಸಸಾರಜನಕಗಳು ಸಸ್ಯಜ ಸಸಾರಜನಕಗಳು.

ನಮ್ಮ ದೇಹದಲ್ಲಿ ಸಾಧಾರಣವಾಗಿ ೨೦ ತರದ ಖನಿಜಾಂಶಗಳುಂಟೆಂದೂ
ಅವುಗಳಲ್ಲಿ ಸುಣ್ಣ, ರಂಜಕ, ಕಬ್ಬಿಣಗಳೇ ಮುಖ್ಯವಾದವುಗಳೆಂದೂ ಗೊತ್ತಾಗಿದೆ.
ಇವುಗಳನ್ನು ನಾವು ಹಾಲು, ಸಜ್ಜಿಗೆ, ತೊಪ್ಪಲು ಪಲ್ಲೆಗಳು, ಬೇರೆ ಬೇರೆ ತರದ

ಮಸಾಲೆಯ ಜಿನಸುಗಳು, ಹಣ್ಣುಗಳು ಮೊದಲಾದವುಗಳ ಮುಖಾಂತರವಾಗಿ ಸೇವಿಸುತ್ತೇವೆ.

ಜೀವನ ಸತ್ವಗಳಲ್ಲಿ ಅ, ಬ, ಕ, ಡ, ಇ ಗಳೇ ಮುಖ್ಯವಾಗಿದ್ದು ಇವುಗಳ ಕೊರತೆಯಿಂದ ಅನೇಕ ತರದ ರೋಗರುಜಿನಗಳುಂಟಾಗುತ್ತವೆ. ನಮ್ಮ ಆಹಾರವು ಶರ್ಕರಾಪಿಷ್ಟ, ಕೊಬ್ಬು, ಸಸಾರಜನಕ ಹಾಗೂ ಖನಿಜವಸ್ತುಗಳೊಡನೆ ಈ ಜೀವನ ಸತ್ವಗಳನ್ನು ಒಳಗೊಂಡಿರಲೇಬೇಕು. ಇವು ಇರದ ಆಹಾರವು ಪರಿಪೂರ್ಣವೂ, ಸಮತೋಲದ್ದೂ ಎನಿಸದು. ಈ ಜೀವನ ಸತ್ವಗಳನ್ನು ಹೈನದ ವಿವಿಧ ಪದಾರ್ಥಗಳಿಂದಲೂ, ತಾಜಾ ಕಾಯಿಪಲ್ಲೆ ಹಣ್ಣುಗಳಿಂದಲೂ, ಧಾನ್ಯಗಳ ಮೇಲಿರುವ ತೌಡುಗಳಿಂದಲೂ ನಾವು ದೊರಕಿಸಿಕೊಳ್ಳಬಹುದು;

**ಶಬ್ದಾರ್ಥ:**

ಅನುಸಾರವಾಗಿ– ತಕ್ಕಂತೆ; ಸ್ಥಿತ್ಯಂತರ– ಮೊದಲಿನ ಸ್ಥಿತಿಯಲ್ಲಿ ಬದಲಾಗೋಣ; ಹೇತು– ಉದ್ದೇಶ; ಮಾರ್ಪಡಿಸು– ಬದಲು ಮಾಡು; ನೇರವಾಗಿ– ಅಡ್ಡಿಯಿಲ್ಲದೆ, ಏಕದಲ– ಒಡೆದರೆ ಬೇಳೆಯಾಗದಂಥ ಕಾಳುಗಳು; ವಿಪುಲ– ಬಹಳ; ಸಸಾರಜನಕ– ಬೆಳವಣಿಗೆಗೆ ಅವಶ್ಯವಾದ ಶಕ್ತಿಯನ್ನು ಹುಟ್ಟಿಸುವಂಥ.

**ಪ್ರಶ್ನೆ:**

೧. ಪ್ರಾಣಿಗಳ ದೇಹದ ಸವಕಳಿಯಲ್ಲಿ ಯಂತ್ರ ಸಾಮಾನುಗಳ ಸವಕಳಿಗಿಂತಲೂ ವೈಶಿಷ್ಟ್ಯವೇನಿರುವದು ?
೨. ಆಹಾರದ ಅವಶ್ಯಕತೆಯಲ್ಲಿರುವ ಮೂರು ಮುಖ್ಯ ಹೇತುಗಳು ಯಾವವು ?
೩. ನಾವು ತಕ್ಕೊಳ್ಳುವ ಆಹಾರದಲ್ಲಿ ಯಾವ ಯಾವ ಶಕ್ತಿಗಳು ಅಡಕವಾಗಿರಬೇಕು ?
೪. ಬೇರೆ ಬೇರೆ ರಾಜ್ಯದವರು ಬೇರೆ ಬೇರೆ ತರದ ಆಹಾರಗಳನ್ನು ತಕ್ಕೊಳ್ಳುವ ಉದ್ದೇಶವೇನು ?
೫. ಪ್ರಾಣಿಜ ಸಸಾರಜನಕಗಳೂ ಸಸ್ಯಜ, ಸಸಾರ ಜನಕಗಳೂ ಯಾವವು?
೬. ಜೀವನಸತ್ವಗಳೆಂದರೇನು ? ಅವುಗಳಲ್ಲಿ ಎಷ್ಟು ಪ್ರಕಾರ ? ಈ ಸತ್ವಗಳನ್ನು ಯಾವ ಯಾವ ಪದಾರ್ಥಗಳಿಂದ ದೊರಕಿಸಿಕೊಳ್ಳಬೇಕು ?

**ವ್ಯಾಕರಣ:**

## ವಿಭಕ್ತಿ

### ಪ್ರಥಮಾ, ದ್ವಿತೀಯಾ ವಿಭಕ್ತಿಗಳು

(ಅ) ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಶಬ್ದಗಳನ್ನು ನಿರೀಕ್ಷಿಸಿರಿ.

೧. ಬೇರೆ ಬೇರೆ ದೇಶಗಳ **ಆಹಾರವು** ಭಿನ್ನ ಭಿನ್ನ ಸ್ವರೂಪದ್ದಾಗಿದೆ.
೨. ನಾವು **ಆಹಾರವನ್ನು** ಸೇವಿಸುತ್ತೇವೆ.

ಮೇಲಿನ ಎರಡೂ ವಾಕ್ಯಗಳಲ್ಲಿ ಬಂದ ಆಹಾರವು ಹಾಗೂ ಆಹಾರವನ್ನು ಎಂಬ ಶಬ್ದಗಳನ್ನು ನೋಡಿರಿ. ಈ ಎರಡೂ ಶಬ್ದಗಳ ಮೂಲ ರೂಪವು ಆಹಾರ ಎಂದು ಇಷ್ಟೇ ಇರುವದು. ಮೊದಲಿನ ವಾಕ್ಯದಲ್ಲಿ ಆಹಾರ ಎಂಬ ಶಬ್ದವು ಕರ್ತೃಪದ ವಾಗಿರುವದು. ಎರಡನೆಯ ವಾಕ್ಯದಲ್ಲಿ ಅದೇ ಶಬ್ದವು ಕರ್ಮಪದವಾಗಿರುವದು. ಕರ್ತೃಪದವಾಗಿರುವಾಗ ಅದಕ್ಕೆ '**ಉ**' ಪ್ರತ್ಯಯವು ಹತ್ತಿದೆ. ಕರ್ಮಪದವಾದಾಗ ಅದಕ್ಕೆ '**ಅನ್ನು**' ಪ್ರತ್ಯಯವು ಹತ್ತಿದೆ. ಹೀಗೆ ನಾಮಪದಗಳಿಗೆ ಹತ್ತುವ ಪ್ರತ್ಯಯ ಗಳಿಗೆ ನಾವು ವಿಭಕ್ತಿ ಪ್ರತ್ಯಯಗಳೆಂದು ಹೆಸರು.

ಇನ್ನು ಕರ್ತೃಪದವು ಯಾವಾಗಲೂ ಪ್ರಥಮಾವಿಭಕ್ತಿಯಲ್ಲಿರುತ್ತದೆ. ಪ್ರಥಮಾ ವಿಭಕ್ತಿ ಪ್ರತ್ಯಯ '**ಉ**'. ಆದ್ದರಿಂದ ಆಹಾರವೆಂಬ ಶಬ್ದವು ಮೊದಲನೆಯ ವಾಕ್ಯ ದಲ್ಲಿ ಕರ್ತೃಪದವಾಗಿದ್ದಾಗ ಅದಕ್ಕೆ ಪ್ರಥಮಾ ವಿಭಕ್ತಿಯ '**ಉ**' ಪ್ರತ್ಯಯವು ಹತ್ತಿದೆ. ಅದೇ ಎರಡನೇ ವಾಕ್ಯದಲ್ಲಿ ಕರ್ಮಪದವಾದಾಗ ಅದಕ್ಕೆ '**ಅನ್ನು**' ಪ್ರತ್ಯಯ ಹತ್ತಿದೆ. ಕರ್ಮಪದವು ಯಾವಾಗಲೂ ದ್ವಿತೀಯಾ ವಿಭಕ್ತಿಯಲ್ಲಿರುವದು. ದ್ವಿತೀಯಾ ವಿಭಕ್ತಿ ಪ್ರತ್ಯಯ '**ಅನ್ನು**'

ಕೆಲವು ಪಂಡಿತರು ಪ್ರಥಮಾ ವಿಭಕ್ತಿಗೆ ಪ್ರತ್ಯಯವೇ ಇಲ್ಲವೆಂದು ಅಭಿಪ್ರಾಯ ಪಡುತ್ತಾರೆ.

ದ್ವಿತೀಯಾ ವಿಭಕ್ತಿಗೆ '**ಅ**' ಎಂಬ ಇನ್ನೊಂದು ಪ್ರತ್ಯಯವೂ ಉಂಟು.

(ಬ) ಈ ಪಾಠದಲ್ಲಿ ಬಂದ ಪ್ರಥಮಾ, ದ್ವಿತೀಯಾ ವಿಭಕ್ತಿ ಪ್ರತ್ಯಯಗಳುಳ್ಳ ೧೦ ಶಬ್ದಗಳನ್ನು ಗುರುತಿಸಿರಿ.

# ೩೨. ಮತ್ತಿಯ ತಿಮ್ಮಣ್ಣನಾಯಕ

[ ಮತ್ತಿಯ ತಿಮ್ಮಣ್ಣನಾಯಕನೆಂದು ಹೆಸರಾದ ಪಾಳೆಯಗಾರನು ಚಿತ್ರ ದುರ್ಗದ ಮೂಲ ಪುರುಷನು. ಚಿತ್ರದುರ್ಗದ ಕೋಟೆಯನ್ನು ಈತನೇ ಕಟ್ಟಿಸಿದನು. ಇವನ ಅಚಲ ಧೈರ್ಯ, ಅದ್ಭುತ ಸಾಹಸಾದಿ ಕೆಲವು ಪ್ರಸಂಗಗಳು ರೋಮಾಂಚ ಕಾರಿಯಾಗಿರುತ್ತವೆ. "ಮೂರ್ತಿ ಸಂಣದಿದ್ದರೂ ಕೀರ್ತಿ ದೊಡ್ಡದು" ಎಂಬ ಮಾತನ್ನು ಈ ಪಾಠದಲ್ಲಿ ಕಾಣಬಹುದು. ]

■ ■ ■

ಹೆಂಡತಿ— [ ನಸುಕಿನಲ್ಲಿ ಅರಮನೆಗೆ ಬಂದ ಗಂಡನನ್ನು ಕಂಡು ] ಏನಿದು ? ನಿನ್ನೆ ಇಡಿಯ ರಾತ್ರಿ ನಿಮ್ಮ ದರ್ಶನವೇ ಇಲ್ಲ, ಎತ್ತಲೋ ಗುಪ್ತ ಸಂಚಾರಕರಾಗಿ ಹೋಗಿದ್ದಂತೆ ಕಾಣುತ್ತದೆ. ಹೊಸ ಕುದುರೆಯ ಹುರುಪು ! ಸವಾರಿಯ ಸಡ ಗರ ! ಬಡದಾಸಿಯನ್ನು ಮರೆಯದೆ ಮರಳಿ ಬಂದದ್ದು ನನ್ನ ಭಾಗ್ಯ ! ನಿಮ್ಮ ಮುಖವನ್ನು ನೋಡಿದರೆ ಬೆಳತನಕ ನಿದ್ರಿಸಿದಂತೆಯೇ ಕಾಣುವದಿಲ್ಲ ?

ಗಂಡ— ಶತ್ರುರಾಜರು ಕೋಟೆಗೆ ಮುತ್ತಿಗೆ ಹಾಕಿರುವಾಗ ಅಹೋ ರಾತ್ರಿ ಸುತ್ತಲೂ ಕಣ್ಣಿಡಬೇಕಾದ ಈ ದುರ್ಗಪಾಲನಿಗೆ ನಿದ್ರೆ ಎತ್ತಣದು?

ಹೆಂಡತಿ— [ ಗಂಡನ ಬಲಗೈ ಮೊಂಡವಾದದ್ದನ್ನು ನೋಡಿ ಗಾಬರಿಯಿಂದ ] ಸರ ದಾರರೇ, ಇದೇನು! ಬಲದ ಮುಂಗೈ ತುಂಡಾಗಿರುವದಲ್ಲ? ರಕ್ತಧಾರೆಯು ಇನ್ನೂ ನಿಂತಿಲ್ಲ. ಏನಿದು, ಎದೆ ಬಿರಿಯುವ ದೃಶ್ಯ! ಇದನ್ನು ನೋಡಿ ನನ್ನ ಕಣ್ಣಲ್ಲಿ ಕತ್ತಲೆ ಗೂಡಿಸಿದಂತಾಯಿತು! ಇಂಥ ಅಪಾಯದ ಕಾರಣವನ್ನು ತಿಳಿ ಸುವದಾಗಲಿ.

ಗಂಡ— ವೈರಿರಾಜರ ಪಾಳೆಯದಲ್ಲಿ ನಿನ್ನೆ ರಾತ್ರಿ ಘಟಿಸಿದ ಘಟನೆಯಿದು.

ಹೆಂಡತಿ— ಅಂದರೆ? ನಿನ್ನೆ ರಾತ್ರಿ ಯುದ್ಧದ ಗದ್ದಲವೇ ಇದ್ದಿಲ್ಲ; ಅದ ರಾತ್ರಿಯಲ್ಲಿ ಒಬ್ಬರೇ ವೈರಿಯ ಪಾಳೆಯವನ್ನು ನುಗ್ಗಿದಂತೆ ಕಾಣುತ್ತದೆ. ಉತ್ಸಾ ಹವು ಉಕ್ಕಲು ನಿಮಗೆ ಜೀವದ ಪರಿವೆಯೇ ಇರುವದಿಲ್ಲ.

ಗಂಡ— ದುರ್ಗದ ಮೇಲೆ ದುರ್ಧರ ಪ್ರಸಂಗ ಬಂದಾಗ ಪ್ರಜಾಪಾಲನೆ ಗಾಗಿ ಜೀವದಾಸೆಬಿಟ್ಟು ಮುಂಜಾಗ್ರತೆ ವಹಿಸುವದು ಈ ದುರ್ಗಪಾಲನ ಮುಖ್ಯ ಕರ್ತವ್ಯವಲ್ಲವೇ? ಹೋಗಲೇಬೇಕಾಗಿತ್ತು; ಹೋಗಿದ್ದೆನು.

ಹೆಂಡತಿ— ಇಂತಹ ನೋವಿನಿಂದಲೂ ಕಂದದ ಕುಂದದ ನಿಮ್ಮ ವೀರಶ್ರೀಯ ಮುಖವನ್ನು ನೋಡಿದರೆ ನನ್ನ ಮೈಮೇಲೆ ರೋಮಾಂಚನಗಳೇಳು ತ್ತವೆ! ಮುಂಗೈ ಮೊಂಡವಾದ ಕಾರಣವನ್ನು ದಯಮಾಡಿ ತಿಳಿಸುವಿರಾ?

ಗಂಡ— ಈ ಅನಾಹುತ ಘಟನೆಯು ವೈರಿಗಳಿಂದಾದದ್ದಲ್ಲ. ಅನಿರ್ವಾಹ ಪ್ರಸಂಗದಲ್ಲಿ ನಾನೇ ಹೀಗೆ ಮಾಡಿಕೊಳ್ಳಬೇಕಾಯಿತು.

ಹೆಂಡತಿ— ಈ ನಿಮ್ಮ ಮಾತಿನ ಅರ್ಥವೇ ನನಗಾಗಲಿಲ್ಲ?

ಗಂಡ— ಈಗ ಅದನ್ನೆಲ್ಲ ಹೇಳುತ್ತ ಕೂಡ್ರಲು ನನಗೆ ಸಮಯವಿಲ್ಲ. ಬೇರೆ ಕಡೆಗೆ ಹೋಗುವ ಅವಸರವಿದೆ, ಹಿಂದಿನಿಂದ ನಿನಗೆ ಎಲ್ಲವನ್ನು ತಿಳಿಸುವೆನು.

ಕ್ರಿ. ಶ. ೧೬ ನೆಯ ಶತಮಾನದಲ್ಲಿ ಚಿತ್ರದುರ್ಗದ ಮತ್ತಿಯ ತಿಮ್ಮಣ್ಣ ನಾಯಕನು ತನ್ನ ಹೆಂಡತಿಯೊಡನೆ ನಡೆಯಿಸಿದ್ದ ಸಂಭಾಷಣೆಯಿದು.

ಮೈಸೂರು ಸಂಸ್ಥಾನದಲ್ಲಿ ಚಿತ್ರಕಲ್‌ದುರ್ಗ ಎಂಬುದೊಂದು ಜಿಲ್ಲೆಯಿದೆ. ಅದಕ್ಕೆ ಚಿತ್ರದುರ್ಗವೆಂತಲೂ ಹೆಸರು. ಈಗ ಜಿಲ್ಲೆಯ ಮುಖ್ಯ ಸ್ಥಳವಾಗಿರುವ ಚಿತ್ರದುರ್ಗವು ಹಿಂದಕ್ಕೆ ವಿಜಯನಗರದ ಅರಸರ ಆಳಿಕೆಗೆ ಒಳಪಟ್ಟಿದ್ದ ಪಾಳೆಯ

ಗಾರರ ಮೂಲಸ್ಥಾನವಾಗಿತ್ತು. ಮತ್ತಿಯ ತಿಮ್ಮಣ್ಣನಾಯಕನೆಂಬವನೇ ಈ ಚಿತ್ರದುರ್ಗ ಪಾಳೆಯಗಾರರ ಮೂಲ ಪುರುಷನು. ಈತನು ವಾಲ್ಮೀಕಿ ಗೋತ್ರದ ತಳವಾರ ಜಾತಿಯವನು. ಈತನ ಹೆಂಡತಿಯ ಹೆಸರು ತಿಮ್ಮಕ್ಕ. ಗಂಡನಿಗೆ ತಕ್ಕ ಹೆಂಡತಿಯಾಗಿದ್ದಳು. ಮೊದಲಿಗೆ ನಾಮಮಾತ್ರ ಸೈನಿಕನಾದ ತಿಮ್ಮಣ್ಣನನ್ನು ಆತನ ಸುದೈವವು ಸುಮ್ಮನಿರಗೊಡಲಿಲ್ಲ. ಆತನಲ್ಲಿದ್ದ ಪರಾಕ್ರಮದಿಂದ ಪಾಳೆಯ ಗಾರನೆನಿಸಿಕೊಳ್ಳುವಂತೆ ಮಾಡಿತು. ಚಿತ್ರದುರ್ಗಕ್ಕೆ ಕೋಟೆಯೊಂದನ್ನು ಕಟ್ಟಿಸಿ ಅಲ್ಲಿಯೇ ತನ್ನ ವಸತಿಯನ್ನು ಮಾಡಬೇಕೆಂದು ತಿಮ್ಮಣ್ಣನು ಯೋಚಿಸಿದನು.

ಚಿತ್ರದುರ್ಗದ ಸಮೀಪದಲ್ಲಿ ಸಣ್ಣಗುಡ್ಡವೊಂದಿದ್ದು ಅದು ಕಲ್ಲುಬಂಡೆ ಗಳಿಂದ ತುಂಬಿರುತ್ತದೆ. ಅಂಥ ದುರ್ಗಮಯವಾದ ಸ್ಥಳದಲ್ಲಿಯೇ ಭದ್ರವಾದ ದುರ್ಗವನ್ನು ಕಟ್ಟಿಸಲು ನಿರ್ಧರಿಸಿದನು. ಅದಕ್ಕೆ ಅನುಕೂಲವಾಗಿ ಆತನಿಗೆ ಮಹಾತ್ಮರೊಬ್ಬರ ದರ್ಶನವಾಯಿತು. ಅವರ ಆಶೀರ್ವಾದ ಬಲದಿಂದ ಮೂರು ಸುತ್ತಿನ ಕೋಟೆಯನ್ನು ಕಟ್ಟಿಸಿದ್ದಲ್ಲದೆ, ಅದಕ್ಕೆ ಗುಪ್ತಬಾಗಿಲೊಂದನ್ನೂ ಮಾಡಿಸಿದನು. ಮತ್ತು ಅರಮನೆಯನ್ನೂ ಕಟ್ಟಿಸಿದನು. ಓಬವ್ವನ ಕಾಲಕ್ಕೆ ಆ ಗುಪ್ತ ಬಾಗಿಲಿಗೆ 'ಒನಿಕೆಯ ಕಿಂಡಿ' ಎಂಬ ಹೆಸರು ಬಂದಿದೆ. ತಿಮ್ಮಣ್ಣ ನಾಯಕನು ಆ ಕೋಟೆಯಲ್ಲಿಯೇ ವಸತಿಮಾಡಿ ಸುತ್ತಲಿನ ಒಂದೊಂದೇ ಪ್ರದೇಶವನ್ನು ಕೈವಶಮಾಡಿಕೊಳ್ಳುತ್ತ ಬೆಳಕಿಗೆ ಬಂದು ಬಲಿಯಹತ್ತಿದನು.

ತಿಮ್ಮಣ್ಣನಾಯಕನು ದಿನ ದಿನಕ್ಕೆ ಪ್ರಬಲನಾಗುತ್ತ ನಡೆದದ್ದನ್ನು ಕೇಳಿ ವಿಜಯನಗರದ ಅರಸರಿಗೆ ಅಂಜಿಕೆ ಹುಟ್ಟಿತು. ಈತನನ್ನು ಹಣಿದು ಹಣ್ಣು ಮಾಡಲು ವಿಜಯನಗರದ ಶೂರ ಸೇನಾಪತಿ ಸಾಳ್ವ ನರಸಿಂಗರಾಯನೆಂಬವನು ಬಂದು ಚಿತ್ರದುರ್ಗದ ಬಯಲಿನಲ್ಲಿ ಬೀಡುಬಿಟ್ಟನು; ಹಾಗೂ ಮರುದಿನ ಕೋಟೆಗೆ ಲಗ್ಗೆ ಹತ್ತುವ ಹವಣಿಕೆಯಲ್ಲಿದ್ದನು. ಇದನ್ನು ತಿಳಿದ ತಿಮ್ಮಣ್ಣ ನಾಯಕನು ನಡು ರಾತ್ರಿಯಲ್ಲಿ ವೈರಿ ಪಾಳೆಯದ ಎಲ್ಲರಿಗೂ ಗಾಢನಿದ್ರೆ ಹತ್ತಿದಾಗ ಒಬ್ಬನೇ ಅವರ ಪಾಳೆಯವನ್ನು ಹೊಕ್ಕನು. ನರಸಿಂಗರಾಯನ ಕುದುರೆಯನ್ನು ಕಟ್ಟಿದ ಸ್ಥಳಕ್ಕೆ ಗುಪ್ತವಾಗಿ ಬಂದನು ಹಾಗೂ ಕುದುರೆಯನ್ನು ಕಟ್ಟಿದ್ದ ಗೂಟ ಗಳನ್ನು ಕಿತ್ತಿದನು.

ಹೊಸಬನನ್ನು ಕಂಡ ಆ ಕುದುರೆಯು ಕಾಲುಗಳನ್ನು ಝಾಡಿಸುತ್ತ ಸಪ್ಪಳ ಮಾಡಹತ್ತಲು ಸಮೀಪದಲ್ಲಿಯೇ ಮಲಗಿದ್ದ ಲಾಯದವನು ಎಚ್ಚತ್ತನು. ಕೂಡಲೇ ತಿಮ್ಮಣ್ಣನಾಯಕನು ಅವನಿಗೆ ಕಾಣದಹಾಗೆ ಅಲ್ಲಿಯೇ ನೆಲದಮೇಲೆ ಒರಗಿ ಬದಿಯಲ್ಲಿದ್ದ ಹುಲ್ಲನ್ನು ಮೈಮೇಲೆ ಎಳೆದುಕೊಂಡು ಕೈಗಳನ್ನು ಅಗಲ

ವಾಗಿ ಚಾಚಿಕೊಂಡು ನಿದ್ದೆಹತ್ತಿ ಮಲಗಿದವನ ಸೋಗುಹಾಕಿದನು. ಕಾರಣ ನಿದ್ದೆ ಗಣ್ಣಿನಲ್ಲಿದ್ದ ಲಾಯದವನಿಗೆ ತಿಮ್ಮಣ್ಣನಾಯಕನ ಗುರುತು ಹತ್ತಲಿಲ್ಲ. ಕಿತ್ತಿದ ಗೂಟಗಳನ್ನು ಮತ್ತೆ ನೆಲದಲ್ಲಿ ಗಟ್ಟಿಯಾಗಿ ಬಡಿದು ಮಲಗಿಕೊಂಡನು. ಒಂದು ಗೂಟವನ್ನು ಬಡಿಯುವಾಗ ಅಲ್ಲಿಯೇ ಮಲಗಿದ್ದ ತಿಮ್ಮಣ್ಣನಾಯಕನ ಬಲ ಅಂಗೈಯನಡುವೆ ನಟ್ಟು ಪಾರಾಗಿ ನೆಲದಲ್ಲಿ ಸೇರಿತು! ಆಗ ನಾಯಕನು ಸ್ವಲ್ಪ ಅಲುಗಾಡಿದ್ದರೆ ಅಲ್ಲಿಯೇ ಅವನ ಅಂತ್ಯವಾಗುವಂತಿತ್ತು. ಕಾರಣ ಅಂಗೈ ನೋವನ್ನು ತಾಳಿಕೊಂಡನು. ಆಳವಾಗಿ ನೆಲದೊಳಗೆ ಸೇರಿದ್ದ ಗೂಟವನ್ನು ಎಡದ ಕೈಯಿಂದ ಕೀಳುವದಾಗಲಿಲ್ಲ. ತಡಮಾಡುವಂತೆಯೂ ಇರಲಿಲ್ಲ. ಕಾರಣ ತನ್ನ ಟೊಂಕದಲ್ಲಿದ್ದ ಕತ್ತಿಯನ್ನು ಎಡದಕೈಯಿಂದ ಹಿರಿದುಕೊಂಡು ತನ್ನ ಬಲದ ಮುಂಗೈಯನ್ನು ಕಡಿದುಕೊಂಡನು. ಗಾಯಕ್ಕೊಂದು ಅರಿವೆಯನ್ನು ಸುತ್ತಿ ಕೊಂಡು ಎಡಗೈಯಿಂದಲೇ ಕುದುರೆ ಕಟ್ಟಿದ ಹಗ್ಗಗಳನ್ನು ಬಿಚ್ಚಿ ಅದರಮೇಲೆ ಕುಳಿತು ತನ್ನ ದುರ್ಗಕ್ಕೆ ನಡೆದುಬಿಟ್ಟನು. ನಸುಕಿನಲ್ಲಿಯೇ ತನ್ನ ಅರಮನೆಗೆ ಬರಲು ಹಿಂದ ಹೇಳಿದಂತೆ ಆ ಗಂಡಹೆಂಡಿರ ನಡುವೆ ಸಂಭಾಷಣೆ ನಡೆಯಿತು.

ತಿಮ್ಮಣ್ಣನಾಯಕನು ಇಂತಹದೇ ಮತ್ತೊಂದು ಸಾಹಸದ ಕೆಲಸವನ್ನು ಮರುದಿನವೇ ಮಾಡಿದನು. ಬೀಡುಬಿಟ್ಟಿದ್ದ ನರಸಿಂಗರಾಯನ ಆನೆಯೊಂದಿತ್ತು. ಮಾವುತನು ಅದಕ್ಕೆ ನೀರು ಕುಡಿಸಲೆಂದು ದುರ್ಗದ ಪಕ್ಕದಲ್ಲಿಯೇ ಇದ್ದ ಚಿಕ್ಕ ಕೆರೆಯೊಂದಕ್ಕೆ ಆನೆಯನ್ನು ತರುತ್ತಿದ್ದನು. ಅದೇ ವೇಳೆಗೆ ಕೋಟೆಯ ಮೇಲೆ ನಿಂತು ವೈರಿಸೇನೆಯ ಚಲನ-ವಲನವನ್ನು ನಿರೀಕ್ಷಿಸುತ್ತಿದ್ದ ತಿಮ್ಮಣ್ಣನ ಕಣ್ಣಿಗೆ ಆ ಆನೆಯು ಬಿತ್ತು. ಕೂಡಲೇ ಬಿಲ್ಲನ್ನು ಕಾಲಲ್ಲಿ ಮೆಟ್ಟಿ ಹೋಗುತ್ತಿದ್ದ ಆ ಆನೆಯ ಹಣೆಗೆ ಗುರಿಯಿಟ್ಟು ಎಡಗೈಯಿಂದಲೇ ಬಾಣಬಿಟ್ಟನು. ಗುರಿ ತಪ್ಪದೇ ಬಾಣವು ಬಂದು ಆನೆಯ ಹಣೆಗೆ ಬಡಿದು ಆನೆಯು ಕೂಡಲೇ ಸತ್ತುಬಿದ್ದಿತು.

ಈ ಎರಡು ಅಪಮಾನಗಳಿಂದ ನರಸಿಂಗರಾಯನು ಕೆರಳಿದ ಕೇಸರಿಯಾ ದನು. ಆದರೆ ಆತನು ಎಷ್ಟು ಪ್ರಯತ್ನಬಟ್ಟರೂ ದುರ್ಗವು ವಶವಾಗಲಿಲ್ಲ. ತಿಮ್ಮಣ್ಣನ ಪರಾಕ್ರಮಕ್ಕೆ ಬೆಚ್ಚಿ ಬೆರಗಾಗಿ ಒಪ್ಪಂದ ಮಾಡಿಕೊಂಡು ಹಿಂದಿರು ಗಿದನು.

ಕಲಬುರ್ಗಿಯ ರಾಜರಿಗೂ ವಿಜಯನಗರದರಸರಿಗೂ ಹಿಂದಿನಿಂದಲೂ ಹಗೆ ತನವಿತ್ತು. ಕಲಬುರ್ಗಿಯವರನ್ನು ಸೋಲಿಸುವದು ಶೂರ ಸೇನಾಪತಿ ನರಸಿಂಗ ರಾಯನಿಂದಲೂ ಆಗಿರಲಿಲ್ಲ. ಕಾರಣ ಈ ಕಾರ್ಯ ಮಾಡಲು ಎರಡೊಂದು ನೆವದಿಂದ ತಿಮ್ಮಣ್ಣನಾಯಕನಿಗೆ ವಿಜಯನಗರದ ಅರಸರು ತಿಳಿಸಿದರು. ಅದಕ್ಕೆ

ನಾಯಕನು "ಆಗಲಿ, ಕಲಬುರ್ಗಿಯನ್ನು ಕೈವಶ ಮಾಡಿಕೊಂಡೇ ನಿಮಗೆ ಮುಖ ತೋರಿಸುವೆ" ನೆಂದು ಉತ್ತರಿಸಿದನು. ಹಾಗೂ ಕಲಬುರ್ಗಿಯುವರನ್ನು ಹಣಿಯುವದಕ್ಕಾಗಿ, ದಣಿಸುವದಕ್ಕಾಗಿ, ಮಣಿಸುವದಕ್ಕಾಗಿ, ಕೂಡಲೇ ಹೊರಟನು. ಒಂದುದಿನ ನಸುಕಿನಲ್ಲಿ ಮಿಂಚಿನ ವೇಗದಿಂದ ಕಲಬುರ್ಗಿಗೆ ಮುತ್ತಿಗೆ ಹಾಕಿದನು. ಅರ್ಧ ತಾಸು ಹೊತ್ತು ಏರುವದರೊಳಗೆಯೇ ಆ ಕಲಬುರ್ಗಿಯನ್ನು ಕೈವಶ ಮಾಡಿಕೊಂಡು ಬಿಟ್ಟನು !

ತಿಮ್ಮಣ್ಣ ನಾಯಕನ ಈ ಕೆಚ್ಚೆದೆಯ ಶೌರ್ಯಕ್ಕೆ ಮೆಚ್ಚಿ ವಿಜಯನಗರದ ಅರಸರು ಆತನಿಗೆ ಆದರದ ಕರೆಯಿತ್ತು ಕೆಲದಿನ ಇಟ್ಟುಕೊಂಡು ಬಹುಮಾನವಿತ್ತು ಸನ್ಮಾನಿಸಿದರು. ಅಂದಿನಿಂದ ತಿಮ್ಮಣ್ಣನಾಯಕನೂ ವಿಜಯನಗರದರಸರೊಡನೆ ರಾಜನಿಷ್ಠೆಯಿಂದಲೇ ನಡೆದುಕೊಂಡನು. ಈತನಿರುವ ವರೆಗೆ ವಿಜಯನಗರ ಅರಸರ ಮೇಲೆ ಏರಿಹೋಗಲು ವೈರಿರಾಜರು ಅಂಜುತ್ತಿದ್ದರು.

**ಶಬ್ದಾರ್ಥ :**

ಅಹೋರಾತ್ರಿ – ಹಗಲು ರಾತ್ರಿ; ಅಪರಾತ್ರಿ – ಮಧ್ಯರಾತ್ರಿ; ದುರ್ಧರ – ಕಠಿಣ; ವೀರಶ್ರೀ – ಶೂರತನ; ದುರ್ಗಮ – ಪ್ರವೇಶ ಮಾಡಲಿಕ್ಕೆ ಕಠಿಣವಾದ; ಲಾಯ – ಕುದುರೆ ಕಟ್ಟುವ ಜಾಗಾ; ಕೇಸರಿ – ಸಿಂಹ; ಕೆಚ್ಚೆದೆ – ಧೈರ್ಯದ ಎದೆ.

**ಪ್ರಶ್ನೆ:**

೧. ನಸುಕಿನಲ್ಲಿ ತಿಮ್ಮಣ್ಣನಾಯಕನನ್ನು ಕಂಡ ಅವನ ಹೆಂಡತಿಯು ಮೊದಲು ಆನಂದಪಟ್ಟರೂ ಕಡೆಗೆ ಭಯಗೊಂಡಳೇಕೆ ?
೨. ನಾಯಕನು ಕೋಟೆಯನ್ನು ಕಟ್ಟಿಸಲು ಯಾರು ಪ್ರೋತ್ಸಾಹನೆ ಕೊಟ್ಟರು ? ಕೋಟೆಯು ಎಲ್ಲ ಬಾಜುಗಳಿಂದ ಭದ್ರವಾಗಿತ್ತೆಂಬದು ಹೇಗೆ ?
೩. ನಡುರಾತ್ರಿಯಲ್ಲಿ ನಾಯಕನು ವೈರಿಪಾಳಯದಲ್ಲಿ ಗುಪ್ತವಾಗಿ ನುಗ್ಗಿ ಏನೇನು ಮಾಡಿದನು ?
೪. ನಾಯಕನಲ್ಲಿ ಅಚಲಧೈರ್ಯ, ಅದ್ಭುತ ಸಾಹಸಗಳಿದ್ದವೆಂಬುದನ್ನು ಸಿದ್ಧ ಮಾಡಿರಿ.
೫. ನಾಯಕನು ನುಡಿದಂತೆ ನಡೆದ ಪ್ರಸಂಗವು ಯಾವದು ?
೬. ನಾಯಕನು ರಾಜನಿಷ್ಠನಾಗಿದ್ದನೆಂಬುದು ಹೇಗೆ ಸಿದ್ಧವಾಗುತ್ತದೆ ?

**ವ್ಯಾಕರಣ:**

## ವಿಭಕ್ತಿ

### ತೃತೀಯಾ, ಚತುರ್ಥೀ, ಪಂಚಮೀ ವಿಭಕ್ತಿಗಳು

(ಅ) ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಪದಗಳನ್ನು ನಿರೀಕ್ಷಿಸಿರಿ.

೧) ತಿಮ್ಮಣ್ಣನಾಯಕನು **ಕತ್ತಿಯಿಂದ** ತನ್ನ ಮುಂಗೈ ಕಡಿದುಕೊಂಡನು.

೨) ಅವನ ಶೂರತನವನ್ನು ಕಂಡು ವಿಜಯನಗರದ ರಾಯರು **ತಿಮ್ಮಣ್ಣ ನಾಯಕನಿಗೆ** ಬಹುಮಾನವನ್ನಿತ್ತರು.

೩) ತಿಮ್ಮಣ್ಣನಾಯಕನು ನರಸಿಂಗರಾಯನ **ಲಾಯದಿಂದ** ಕುದುರೆಯನ್ನು ಕದ್ದು ತಂದನು.

ಇಲ್ಲಿ ಮೊದಲನೆಯ ವಾಕ್ಯದಲ್ಲಿ ಮುಂಗೈ ಕಡಿದುಕೊಳ್ಳುವ ಕ್ರಿಯೆಗೆ ಕತ್ತಿಯು **ಸಾಧನ**ವಾಗಿದೆ. ಆದ್ದರಿಂದ ಕತ್ತಿ ಎಂಬ ನಾಮಪದಕ್ಕೆ **'ಇಂದ'** ಎಂಬ ಪ್ರತ್ಯಯವು ಹತ್ತಿದೆ. ಇದು ತೃತೀಯಾ ವಿಭಕ್ತಿಯ ಪ್ರತ್ಯಯವು. ಕ್ರಿಯೆ ನಡೆಯು-ವದಕ್ಕೆ ಸಾಧನವಾದ ವಸ್ತುವನ್ನು ನಾವು ತೃತೀಯಾ ವಿಭಕ್ತಿಯಲ್ಲಿಡಬೇಕು.

ಎರಡನೆಯ ವಾಕ್ಯದಲ್ಲಿಯ ಬಹುಮಾನವನ್ನು ಹೊಂದುವವನು ತಿಮ್ಮಣ್ಣ ನಾಯಕನು. ಆದ್ದರಿಂದ ತಿಮ್ಮಣ್ಣನಾಯಕ ಎಂಬ ನಾಮಕ್ಕೆ **ಇಗೆ** ಎಂಬ ಪ್ರತ್ಯಯ ಬಂದಿದೆ. ಕೊಡುವ ವಸ್ತುಗಳನ್ನು ಹೊಂದತಕ್ಕ ನಾಮಕ್ಕೆ **ಇಗೆ** ಪ್ರತ್ಯಯ ಸೇರುವದು. ಇದು ಚತುರ್ಥೀ ವಿಭಕ್ತಿ. ಚತುರ್ಥೀ ವಿಭಕ್ತಿಗೆ **ಗೆ, ಇಗೆ, ಕೆ, ಅಕ್ಕೆ** ಎಂದು ನಾಲ್ಕು ಪ್ರತ್ಯಯಗಳುಂಟು.

ಮೂರನೆಯ ವಾಕ್ಯದಲ್ಲಿ, ತಿಮ್ಮಣ್ಣನಾಯಕನು ಕುದುರೆಯನ್ನು ಅದು ಇದ್ದ ಸ್ಥಳದಿಂದ ಅಂದರೆ ಲಾಯದಿಂದ ಅಗಲಿಸಿದ್ದಾನೆ. ಅದು ಈಗ ಲಾಯದಲ್ಲಿ ಇಲ್ಲ. ಹೀಗೆ ಅಗಲಿಕೆಯನ್ನು ವ್ಯಕ್ತಮಾಡುವ ನಾಮಪದಗಳಿಗೆ **ಇಂದ** ಎಂಬ ಪ್ರತ್ಯಯವು ಬರುತ್ತದೆ. ಇಲ್ಲಿ ಲಾಯ ಎಂಬ ನಾಮಪದಕ್ಕೆ **ಇಂದ** ಎಂಬ ಪ್ರತ್ಯಯ ಹತ್ತಿದೆ. ಯಾಕಂದರೆ ಲಾಯವು ಅಗಲುವಿಕೆಯನ್ನು ಇಲ್ಲಿ ಸೂಚಿಸುತ್ತದೆ.

ಇದು ಪಂಚಮೀ ವಿಭಕ್ತಿಯು. ಇದರ ಪ್ರತ್ಯಯ **ಇಂದ.**

ಪಂಚಮೀ ಹಾಗೂ ತೃತೀಯಾ ವಿಭಕ್ತಿಗಳ ಪ್ರತ್ಯಯಗಳು ಒಂದೇ ಆಗಿರುತ್ತವೆ. ಆದರೆ ಆ ಪ್ರತ್ಯಯಗಳು ಮಾಡುವ ಕಾರ್ಯ ಮಾತ್ರ ಬೇರೆ ಬೇರೆಯಾಗಿವೆ.

ತೃತೀಯಾ ವಿಭಕ್ತಿಯು ಸಾಧನವನ್ನೂ ಪಂಚಮೀ ವಿಭಕ್ತಿಯು ಅಗಲುವಿಕೆಯನ್ನೂ ಸೂಚಿಸುತ್ತವೆ.

(ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಸ್ಥಳಗಳಲ್ಲಿ ಯೋಗ್ಯ ವಿಭಕ್ತಿ ಪ್ರತ್ಯಯಗಳನ್ನು ತುಂಬಿ ಅವುಗಳ ಹೆಸರು ಹೇಳಿರಿ.

೧) ತಿಮ್ಮಣ್ಣನಾಯಕನು ಕಲಬುರ್ಗಿ............ಬಂದನು.

೨) ರಾಯ............ಅವನು ಬಹುಮಾನವನ್ನು ಪಡೆದನು.

೩) ಅವನು ಆನೆಯ ಹಣೆ............ಬಾಣಬಿಟ್ಟನು.

೪) ಕುದುರೆಯನ್ನು ಗೂಟ............ಕಟ್ಟಿದ್ದರು.

೫) ನೀನು ಊರಿ............ಎಂದು ಹೋಗುತ್ತೀ ?



## ೩೩. ಸಹವಾಸ

[ ಗೆಳೆತನ ನೋಡಿ ಮನುಷ್ಯನ ಗುಣ ಕಂಡು ಹಿಡಿಯಬಹುದು. ಆದುದರಿಂದ ಎಂಥ ಸಹವಾಸವೋ ಅಂಥ ಮನುಷ್ಯನೆಂಬ ರೂಢಿಯ ಮಾತು ಬಳಕೆಯಲ್ಲಿ ಬಂದಿದೆ. ಇಲ್ಲಿ 'ಸಹವಾಸ' ಇದರ ಮೇಲೆ ಶ್ರೀಮಾನ್ ಹಿರೇಮಲ್ಲೂರ ಈಶ್ವರನ್ನರು ಒಂದು ಸುಂದರವಾದ ಲಲಿತಪ್ರಬಂಧ ಬರೆದಿದ್ದಾರೆ. ]

• • •

"ನೀನು ಕೀರ್ತಿವಂತನಾಗಬಯಸಿದರೆ ಒಳ್ಳೆಯ ಚಾರಿತ್ರ್ಯವುಳ್ಳವರ ಸಹವಾಸವನ್ನೇ ಮಾಡು. ಕುಹಕರ ಸಂಗಕ್ಕಿಂತ ಏಕಾಂತವೆ ಮಿಗಿಲು" ಎಂದು ಜಾರ್ಜ ವಾಶಿಂಗ್ಟನ್ ಎಂಬಾತನು ಹೇಳಿರುವನು. ಸಹವಾಸದಿಂದ ಕೀರ್ತಿಯ ಫಲವನ್ನಪೇಕ್ಷಿಸುವುದಕ್ಕಿಂತಲೂ ಆತ್ಮಸಂಸ್ಕಾರದ ಹೆಜ್ಜಗಳವನ್ನು ಕಂಡುಕೊಳ್ಳುವುದು ನೂರುಪಾಲಿಗೆ ಒಳ್ಳೆಯದು. ಸಹವಾಸದ ಲಾಭವು ಎಂದಿಗೂ ಎದ್ದು ತೋರುವುದಿಲ್ಲ. ಸಹವಾಸದ ಆಶ್ರಯದಲ್ಲಿ ದಾರಿ ನಡೆದವನು ಕೆಲಕಾಲ ಗತಿಸಿದನಂತರ ಹಿಂದಕ್ಕೆ ತಿರುಗಿ ನೋಡಿದರೆ ಮೂಡಿಬಂದ ತನ್ನ ಹೆಜ್ಜೆಗಳನ್ನು ಗುರುತಿಸುತ್ತಾನೆ. ಆಗ ಅವನು ಅಳಬೇಕು, ಇಲ್ಲವೆ ಹೆಮ್ಮೆಯಿಂದ ಹಿಗ್ಗಬೇಕು. ಅಂತ ಜಾವದಲ್ಲಿ ನಕ್ಕರೂ ಒಂದು ಚಂದು, ಅತ್ತರೂ ಒಂದು ಚಂದ. ನಕ್ಕವನು ತನ್ನ ಸುತ್ತಣ ಬಾಳನ್ನು ನಗಿಸುತ್ತ ಸಾಗಬೇಕು. ಅತ್ತವನು ತಾನು ತಪ್ಪಿದ ದಾರಿಯನ್ನು ಬಿಟ್ಟು ಸತ್‌ಪಥದಲ್ಲಿ ನಡೆಯಬೇಕು. ಕಣ್ಣೀರಿನಲ್ಲಿ ಮಿಂದುಬಂದವನಿಗೆ ಪೂರ್ವದ ದೋಷ ತೊಲಗಿಹೋಗಿ ಸತ್-ಸಂಗದ ಲಾಭವುಂಟಾಗಿ ಅವನು ಬದುಕುತ್ತಾನೆ.

ತಾಯಿಯಲ್ಲಿ ವಿಶ್ವಾಸವಿರಬೇಕು; ಸಹವಾಸದಲ್ಲಿ ಕಣ್ಣಿರಬೇಕು. ತಾಯಿ ಯಾರ ಸಹವಾಸವನ್ನು ಬೇಡವೆಂದು ಹೇಳುತ್ತಾಳೋ ಅಂತಹರನ್ನು ಕೂಡಲೆ ಬಿಟ್ಟುಬಿಡಬೇಕು. 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂದು ಸರ್ವಜ್ಞನು ಹೇಳಿದ್ದಾನೆ. ಸರ್ವರೊಳಗೊಂದು ನುಡಿಗಲಿತು ವಿದ್ಯೆಯ ಪರ್ವತವೆ ತಾನಾದ ಸರ್ವಜ್ಞನ ಮಾತಿನಲ್ಲಿ ವಿಶ್ವಾಸವಿರಲಿ. ಇದಕ್ಕಿಂತಲೂ ಆತ್ಮೀಯವಾದ ಸಲಹೆಯನ್ನು ನಿನಗೆ ಯಾರೂ ಕೊಡಲಾರರು. ನಿನ್ನ ಬಾಳನ್ನು ತನ್ನ ಜೀವಮಾನದುದ್ದಕ್ಕೂ ಹರಸಿ ಕಾಯುವವಳೊಬ್ಬಳೇ ತಾಯಿ. ಬರಿ ಮನೆಯಲ್ಲಷ್ಟೇ ನಿನ್ನ ಹಿತವನ್ನು ಅವಳು ಕೋರುವುದಿಲ್ಲ. ಹೊರಗೆ ಹೋದಾಗಲೂ ನಿನ್ನ ಪರೀಕ್ಷೆಯಲ್ಲಿಯೂ ಹಿತಚಿಂತನೆಯಲ್ಲಿಯೂ ಅವಳು ಮಗ್ನಳಾಗಿರುತ್ತಾಳೆ. ಆದುದರಿಂದ ನೀನು ಮಾಡುವ ಸಹವಾಸಕ್ಕೆ ತಾಯಿಯ ಸಮ್ಮತಿಯಿರಲಿ.

ಅವಳು ಅಭಯವಿತ್ತರೆ ವೇದವಾಕ್ಯವನ್ನು ನೀನು ಕಡೆಗಣಿಸಿ ನಡೆದರೆ ನನ್ನದೇನೂ ಆಕ್ಷೇಪವಿಲ್ಲ.

ಬಾಳಿನ ಉದ್ಯಾನದಲ್ಲಿ ಸಹವಾಸಿಗನೇ ತೋಟಿಗ. ಹೂವಿಗೆ ಕೀಡೆ ಹತ್ತದಂತೆ ಅವನು ನೋಡಿಕೊಳ್ಳಬೇಕು. ಆವಾರದ ಕಳ್ಳಿ ಬೆಳೆದು ಲತಾಕುಂಜಗಳನ್ನು ಮುಸುಕದಂತೆ ಜಾಗರೂಕತೆ ವಹಿಸಬೇಕು. ಮರುಕುಟಿಗಗಳು ಬಂದು ದಾಳಿಂಬದ ಚಿಗುರುಗಳನ್ನು ಕತ್ತರಿಸದಂತೆ ಎಚ್ಚರವಹಿಸಬೇಕು. ಅಬ್ಬರದ ಬಿರುಗಾಳಿ ಕೊಚ್ಚಿಬಂದು, ತೋಟದ ಕುಸುಮಕುಂಜ ಕಿತ್ತುಹಾಕದಂತೆ ಭದ್ರತೆಯನ್ನು ಮಾಡಿಕೊಳ್ಳಬೇಕು. ಇಷ್ಟಾದಲ್ಲಿ ಉಪವನವು ರಮ್ಯಮನೋಹರವಾಗಿ ತೋರಿ ಪಥಿಕರಿಗೂ ನಿರಾಶಾಪೀಡಿತರಿಗೂ ಆಲ್ಹಾದವನ್ನುಂಟು ಮಾಡುವುದು. ಇಂತಹ ಸಹವಾಸಿಗಳನ್ನು ಸಂಪಾದಿಸಿಕೊ. ಆಗ ನೀನೇ ಪುಣ್ಯವಂತ.

ಸಿರಿಬಂದ ಕಾಲಕ್ಕೆ ಸಹವಾಸಿಗಳು ಕೂಡಿ ಬರುತ್ತಾರೆ. ದಾರಿದ್ರ್ಯ ಬಂದಡರಿದ ಸಮಯಕ್ಕೆ ಹುಟ್ಟು ಹರಿದ ಜೇನ್ನೊಣದಂತೆ ಅವರು ತೊಲಗಿ ಹೋಗುತ್ತಾರೆ. ಆದುದರಿಂದ ಸಿರಿವಂತಿಕೆಯಲ್ಲಿ ಸಹವಾಸಿಗಳ ನಿಶ್ಚಲ ಮನೋವೃತ್ತಿಯನ್ನು ನಿರ್ಧರಿಸುವ ಗುಣವಿಲ್ಲ. ಒಂದು ವೇಳೆ ಶ್ರೀಮಂತನು ತನ್ನ ಸಹವಾಸಿಗಳ ಮನಸ್ಸನ್ನು ಪರೀಕ್ಷಿಸಬೇಕೆಂದು ಎಳಸಿದರೆ ಆತನು ದರಿದ್ರ ಚಾರುದತ್ತನ ಪಾತ್ರ ವಹಿಸಲಿ. ಆಗ ತಾನು ಸಿಂತ ಸೆಲೆ ಏನೆನ್ನುವುದು ಗೊತ್ತಾಗುತ್ತದೆ. ಹೊರಗಿನಿಂದ ವಸಂತಸೇನೆ ಬರುವದೊತ್ತಟ್ಟಿಗಿರಲಿ, ಮನೆಯ ಮಡದಿಯೂ ಮೂಗು ಮುರಿಯಲು ತೊಡಗುತ್ತಾಳೆ. ಇನ್ನು ಹೊರಗಿನವರ ಪಾಡೇನು? ದಾರಿದ್ರ್ಯವೇ ಸಹವಾಸಿಗಳ ಮನಸ್ಸನ್ನು ಪರೀಕ್ಷಿಸಿ ನೋಡುವ ಸೂಜಿಗಲ್ಲು. ಖಂಡಿತದ ನುಡಿಯೊಂದನ್ನು ನಾನು ಹೇಳಬಯಸುತ್ತೇನೆ. ಸಿರಿವಂತರಿಗೆ ಇರುವ ಸಹವಾಸಿಗಳೆಲ್ಲರೂ ವಂಚಕರು. ಅವರು ಹುಸಿ ವಿನಯ ತೋರುತ್ತಾರೆ. ಕುಡಿತ–ಕುಣಿತದ ತೃಪ್ತಿಯ ಲಾಭಕ್ಕಾಗಿಯೇ ಅವರು ಸಹವಾಸದ ಸೋಗು ಹಾಕಿಕೊಂಡು ಬಂದಿರುವ ನಂಟರು.

ಸಹವಾಸ ವಯಸ್ಸಿಗೆ ತಕ್ಕಂತೆ ರೂಪ ತಳೆದು ಬರುವದು. ಚಿಕ್ಕಂದಿನಲ್ಲಿ ಕಲ್ಲು–ಮಣ್ಣು, ಹುವ್ವು–ಹುಲ್ಲು ಮಾತಾಪಿತೃಗಳ ಸಹವಾಸದ ಆರೈಕೆದೊಟ್ಟಿಲಲ್ಲಿರು. ಪ್ರಾಯಕ್ಕೆ ಬಂದಾಗ ಗ್ರಂಥಾದಿಗಳ ಸಹವಾಸವಿರಲಿ. ನಡುವಯದಲ್ಲಿ ಗ್ರಂಥಗಳ ಜತೆಗೆ ದೇಶಕೋಶಗಳ ಸಹವಾಸವೂ ಬೇಕು. ಮುಪ್ಪಿನಲ್ಲಿ ಮಾತ್ರ ಎಳೆಯರ ಸಹವಾಸ ಅತ್ಯಗತ್ಯ. ಬಾಲ್ಯಕ್ಕೂ ಮುಪ್ಪಿಗೂ ನೆಳಲು

ಬೆಳಕಿನ ಬಾಂಧವ್ಯವುಂಟು. ಯಾವ ಕಾಲಕ್ಕೂ ಓರಗೆಯವರ ಸಹವಾಸ ಬೇಡ. ನನಗೆ ಸರಿಕರಲ್ಲಿ ವಿಶ್ವಾಸವಿಲ್ಲ.

ಬಾಲ್ಯದ ಸಮಯ ಸುಮಕೋಮಲ. ಹಸಿಯ ಗೋಡೆಯಂತೆ ಎಳೆಯರ ಮನಸ್ಸು. ಒಂದು ಹರಳು, ಒಂದು ಗಾಜಿನ ಚೂರು ಒಗೆದರೆ ಅಲ್ಲಿ ನೆಟ್ಟು ಮರೆಯದಂತಹ ಗಾಯಮಾಡುತ್ತದೆ. ಆ ಗಾಯ ನಂದಿಸುವದು ಕಷ್ಟ. ಜೀವನ ದುದ್ದಕ್ಕೂ ಅದರ ಗುರುತು ಮೂಡಿ ನಿಲ್ಲುವುದು. ಸಹವಾಸದ ಫಲವಾಗಿ ಎಳೆ ವರಯದಲ್ಲುದ್ಭವಿಸುವ ಚಟವು ಜೀವನ ನಾಟಕದ ಕೊನೆಯಂಕಿನ ಪಡದೆ ಬೀಳುವ ವರೆಗೂ ತನ್ನ ಕಪಿಮುಷ್ಟಿಯನ್ನು ಬಿಚ್ಚುವುದೇ ಇಲ್ಲ. ಗರ್ಭಿಣಿಯ ಹೆರಿಗೆಯ ಸುಮುಹೂರ್ತದ ಬಗೆಗೆ ವಹಿಸುವ ಜಾಗ್ರತೆಯನ್ನೇ ಎಳೆತನದಲ್ಲೊದ ಗುವ ಸಹವಾಸದ ಸುಮಂಗಲ ಸಮಯದಲ್ಲೂ ವಹಿಸಬೇಕು. ಒಳ್ಳೆಯ ಸಹ ವಾಸದಿಂದ ದೊರೆತ ಫಲವೂ, ಬಂಜೆ ದೀರ್ಘಕಾಲದ ನಂತರ ಪುತ್ರ ರತ್ನವನ್ನು ಕಾಣುವ ಭಾಗ್ಯವೂ ಸಮ.

ಉತ್ತಮರ ಸಹವಾಸ ಬಯಸುವವನು ಮೊದಲು ತಾನು ಒಳ್ಳಿದನಾಗಿ ತೋರಲಿ. ಪರುಷ ಮುಟ್ಟಿದ ಕಲ್ಲು ಪರುಷವೇ ಆಗುವದಲ್ಲದೆ ಶಿಲೆಯಾಗಿ ಉಳಿಯಲಾರದು. ನಿನ್ನ ಸ್ಪರ್ಶದಲ್ಲಿ ಸ್ನೇಹಾಮೃತವಿದ್ದರೆ ನೀನು ಮುಟ್ಟಿದ ಬದನೆಯಕಾಯಿಯೂ ಶಿವಲಿಂಗವಾಗುವದು. ಕಾರಣ ಪುರುಷರ ಬಾಳಿಸಿಂದ ಈ ಮಾತಿನ ಅರ್ಥವನ್ನರಿತುಕೊ.

ಸತ್‌ಸಂಗಕ್ಕಾಗಿ ಹಾತೊರೆದು ನಿಂತವನಿಗೊಂದು ಕಿವಿ ಮಾತು ಹೇಳಬಯು ಸುತ್ತೇನೆ. ಕೇದಗೆಯಲ್ಲಿ ಹಾವು ವಾಸಿಸಿರುತ್ತದೆ. ಹಾವಿನ ಕೊರಲಲ್ಲಿ ವಿಷ ವಿರುತ್ತದೆ; ಹೆಡೆಯಲ್ಲಿ ರತ್ನವಿರುತ್ತದೆ. ಇವೆರಡರಲ್ಲಿ ಬೇಕಾದುದನ್ನು ಆರಿಸಿಕೊ. ನಿನ್ನ ಇಷ್ಟ.

**ಶಬ್ದಾರ್ಥ:**

ಹೆಚ್ಚಳ– ಹಿರಿಮೆ; ಸತ್‌ಪಥ– ಒಳ್ಳೇ ಮಾರ್ಗ; ಅಭಯ– ಅಂಜಿಕೆ ಇಲ್ಲದೆ ಇರೋಣ; ಪರುಷ– ಮುಟ್ಟಿದರೆ ಬಂಗಾರವಾಗುವ ಕಲ್ಲು; ಕಪಿಮುಷ್ಟಿ– ಬಿಗಿ ಹಿಡಿತ.

**ಪ್ರಶ್ನೆ:**

೧. ಸಹವಾಸದ ಮಹಿಮೆ ಯಾವಾಗ್ಗೆ ತಿಳಿಯುವದು ?
೨. ತಾಯಿಯಲ್ಲಿ ಏಕೆ ವಿಶ್ವಾಸವಿಡಬೇಕು ?
೩. ಎಂಥ ಸಹವಾಸಿಗಳನ್ನು ಸಂಪಾದಿಸಿಕೊಳ್ಳಬೇಕು ?

೪. ಕೆಟ್ಟ ಸಹವಾಸಿಗಳು ಏನು ಮಾಡುವರು ?
೫. ಉತ್ತಮರ ಸಹವಾಸಬೇಕಾದರೆ ನಾವು ಏನು ಮಾಡಬೇಕು ?

**ವ್ಯಾಕರಣ:**

**ಷಷ್ಠೀ, ಸಪ್ತಮೀ, ಸಂಬೋಧನೆ ವಿಭಕ್ತಿಗಳು**

(ಅ) ಕೆಳಗಿನ ವಾಕ್ಯಗಳಲ್ಲಿಯ ದಪ್ಪಕ್ಷರದ ಶಬ್ದಗಳನ್ನು ನಿರೀಕ್ಷಿಸಿರಿ.

೧) ದಾರಿದ್ರ್ಯವೇ **ಸಹವಾಸಿಗಳ** ಮನಸ್ಸನ್ನು ಪರೀಕ್ಷಿಸಿ ನೋಡುವ ಸೂಜಿಗಲ್ಲು.
೨) **ಕೇದಗೆಯಲ್ಲಿ** ಹಾವು ವಾಸಿಸಿರುತ್ತದೆ.
೩) **ಬಾಲಕರೇ,** ಒಳ್ಳೆಯ ಸಹವಾಸ ಮಾಡಿರಿ.

ಮೊದಲಿನ ವಾಕ್ಯದಲ್ಲಿ ಸಹವಾಸಿಗಳಿಗೂ ಮನಸ್ಸಿಗೂ ಅವಯವ **ಸಂಬಂಧ** ವಿದೆ. ಸಹವಾಸಿಗಳು ಎಂಬ ಪದಕ್ಕೆ ಅ ಎಂಬ ಪ್ರತ್ಯಯವು ಸೇರಿ ಇಲ್ಲಿ ಸಹವಾಸಿಗಳ ಎಂಬ ರೂಪವು ಸಿದ್ಧವಾಗಿದೆ. ಸಂಬಂಧವನ್ನು ತೋರಿಸುವಾಗ ಅ ವಿಭಕ್ತಿ ಪ್ರತ್ಯಯ ಬರುತ್ತದೆ. ಇದು ಷಷ್ಠೀ ವಿಭಕ್ತಿ ಪ್ರತ್ಯಯವು. **ಷಷ್ಠಿ** ವಿಭಕ್ತಿಯು **ಸಂಬಂಧ** ವನ್ನು ಸೂಚಿಸುತ್ತದೆ.

ಎರಡನೆಯ ವಾಕ್ಯದಲ್ಲಿ ಹಾವು ವಾಸಿಸುವದಕ್ಕೆ ಕೇದಗೆಯು ಆಧಾರವಾಗಿದೆ. ಆದ್ದರಿಂದ ಕೇದಗೆ ಎಂಬ ನಾಮಪದಕ್ಕೆ **ಅಲ್ಲಿ** ಎಂಬ ಪ್ರತ್ಯಯವು ಸೇರಿದೆ. **ಅಲ್ಲಿ** ಎಂಬುದು **ಸಪ್ತಮೀ** ವಿಭಕ್ತಿಯ ಪ್ರತ್ಯಯ. ಆಧಾರ, ಸ್ಥಾನ, ಆಶ್ರಯವನ್ನು ಕೊಡುವ ವಸ್ತುವಿಗೆ ಸಪ್ತಮೀ ವಿಭಕ್ತಿಯ ಪ್ರತ್ಯಯವು ಹತ್ತುತ್ತದೆ.

ಮೂರನೆಯ ವಾಕ್ಯದಲ್ಲಿ **ಬಾಲಕರೇ** ಎಂಬದು ಬಾಲಕರ ಲಕ್ಷ್ಯವನ್ನು ಸೆಳೆಯುವದಕ್ಕಾಗಿ ಉಪಯೋಗಿಸಲ್ಪಟ್ಟಿದೆ. ಬಾಲಕರೇ ಎಂಬುದು **ಕರೆ,** ಎಂದರೆ ಕರೆಯುವಿಕೆಯು.

ಯಾರನ್ನಾದರೂ ಕರೆಯುವಾಗ, ಎಚ್ಚರಿಸುವಾಗ, ಕೇಳುವಾಗ, ಬೇಡುವಾಗ, ನಾವು ಕರೆಯುವ, ಎಚ್ಚರಿಸುವ, ಕೇಳುವ, ಬೇಡುವ ವ್ಯಕ್ತಿ ಅಥವಾ ನಾಮಪದಗಳು ಸಂಬೋಧನ ವಿಭಕ್ತಿಯನ್ನು ಹೊಂದುತ್ತವೆ. ಸಂಬೋಧನ ವಿಭಕ್ತಿ ಪ್ರತ್ಯಯವು **ಏ.**

(ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಸ್ಥಳದಲ್ಲಿ ಯೋಗ್ಯವಿಭಕ್ತಿ ಪ್ರತ್ಯಯಗಳನ್ನು ತುಂಬಿರಿ ಹಾಗೂ ಅವುಗಳ ಹೆಸರನ್ನು ಹೇಳಿರಿ.

೧) ತಾಯಿ ....... ವಿಶ್ವಾಸವಿರಬೇಕು; ಸಹವಾಸ........ ಕಣ್ಣಿರಬೇಕು.
೨) ನಾಯಿ........ ಬಾಲಡೊಂಕು; ಹೂಜಿ........ ನೀರು ತಂಪು.
೩) ........ಧರ್ಮಮಾಡಿರಪ್ಪಾ. ಶಿವ........ ನೀನೇ ಗತಿ.



# ೩೪. ಮುತ್ತು ರತ್ನ

[ ಹಳ್ಳಿಯ ಜೀವನ ನಿಜಕ್ಕೂ ಆನಂದವನ್ನುಂಟು ಮಾಡುವಂಥದು. ಹಳ್ಳಿಗರು ಮಾತು ಮಾತಿಗೆ ಕಥೆ ಹೇಳಿ ನಗಿಸುತ್ತಾರೆ. ಅವರ ಬಾಳು ರಸಮಯವಾದುದು. ಇಲ್ಲಿ ಮಕ್ಕಳ ಮಹತ್ವವನ್ನು ಕುರಿತು ಒಂದು ಜಾನಪದ ಕಥೆ ಇದೆ. ]

ಹಿಂದಕ್ಕೆ ಊರಿಗೊಬ್ಬ ಅರಸನಿರುತ್ತಿದ್ದ! ನಮ್ಮ ದೇಶ ಹಳ್ಳಿಗಳ ದೇಶ. ಊರಿಗೊಬ್ಬ ಅರಸನೆಂದ ಬಳಿಕ ಆಗ ರಾಜರ ವೈಭವ ಎಷ್ಟಿರಬೇಕು? ನೀವೆ ವಿಚಾರಿಸಿರಿ. ಅರಸನಿಗೆ ಜನ ಮನ್ನಣೆ ಕೊಟ್ಟು ಅವನಿಂದ ತಮ್ಮ ರಕ್ಷಣೆ ಪಡೆಯುತ್ತಿತ್ತು. ಅರಸನಾದರೂ ತನ್ನ ಪ್ರಜೆಗಳನ್ನು ಸಂತೈಸುವದರಲ್ಲಿ ನಿರತನಾಗಿರುತ್ತಿದ್ದ. ಅದೊಂದು ಕಾಲವಾಗಿ ಹೋಯಿತಷ್ಟೇ? ಇರಲಿ, ಒಂದಕ್ಕೆ ಒಂದೂರಲ್ಲಿ ಒಬ್ಬ ಅರಸ ಆಳುತ್ತಿದ್ದ. 'ಅರಸ ಒಲಿದರೆ ಅರ್ಧರಾಜ್ಯ' ಅನ್ನೋ ರೀತಿಯಾಗಿ ಆ ಅರಸು ಬಡವರ ಕಷ್ಟಗಳನ್ನು ಒಡನೆಯೇ ಪರಿಹರಿಸುತ್ತಿದ್ದ. ಆ ಊರು ಸಣ್ಣದಾದರೂ ಸುಂದರವಾಗಿತ್ತು! ದೊಡ್ಡ ಹಾವಿನಂತಹ ಕೋಟೆಯ ಗೋಡೆ ಊರನ್ನು ಸುತ್ತಿಕೊಂಡಿತ್ತು! ಆ ಊರ ಜನರು ಬಹಳ ಉದ್ಯೋಗಿಗಳಾಗಿದ್ದರು. ಆದ್ದರಿಂದ ಅಲ್ಲಿ ಬಡವರೇ ಇರಲಿಲ್ಲ. ಪರ ಊರಿನವರೂ ಆ ಊರಿಗೆ ಬಂದು ದುಡಿದು ಸಿರಿವಂತರಾಗುತ್ತಿದ್ದರು. ಆ ಊರ ಮಹಿಮೆ ಸುತ್ತಲೂ ಹಬ್ಬಿತ್ತು.

ಹೀಗಿರಲು ಒಂದು ದಿನ ಒಂದು ಬಡ ಕುಟುಂಬವು ಆ ಊರಿಗೆ ಬಂದು ನೆಲೆಸಿತು. ಆ ಬಡವನಿಗೆ ಒಂದು ಗಂಡು, ಒಂದು ಹೆಣ್ಣು ಹೀಗೆ ಎರಡು ಸಂತತಿ. ಆತನ ಹೆಂಡತಿಯೋ ಪ್ರಕೃತಿಯಿಂದ ಗಟ್ಟಿಗಳು. ಗಂಡನೂ ಅವಳ ಮನದೊಲವಿನಂತೆ ನಡೆಯುತ್ತಿದ್ದ. ಇವರಿಗೆ ಆ ಹೊಸ ಊರಲ್ಲಿ ಇರಲು ಮನೆ ಸಿಕ್ಕುವದೆಂತು? ಹೇಗೋ ಮಾಡಿ ಊರ ಕೋಟೆಯ ಗೋಡೆಯ ಹತ್ತರವಿರುವ ಒಂದು ಹಾಳು ಮನೆಯನ್ನು ಆಶ್ರಯಿಸಿದರು. ಗಂಡ–ಹೆಂಡತಿ ಊಳಿಗ ಮಾಡಿ ಸಂಸಾರ ಸಾಗಿಸುತ್ತಿದ್ದರು. ಅರಸ ಇವರನ್ನೇನು ಬಲ್ಲ?

ಕೆಲವು ದಿನಗಳು ಹೀಗೆಯೇ ಉರುಳಿದವು. ಒಂದು ದಿನ ರಾತ್ರಿ ಹೆಂಡತಿ ಗಂಡನಿಗೆ, " ಈ ಊರಾಗ ಬಡವರಽ ಇಲ್ಲಂತಽ. ನಾವಽ ಬಡವರು " ಎಂದು ನುಡಿದು ತನ್ನ ಗಂಡು ಮಗುವನ್ನು ಮುತ್ತಿಟ್ಟಳು. " ಏ ಹುಚ್ಚೀ....ಬಡತನಾ ಕಳಕೊಳ್ಳಾಕ ಈ ಊರಿಗೆ ಬಂದೇವು ನಾವು! " ಎಂದ ಗಂಡ. " ಈ ಊರ ರಾಜ ಬಹಳ ಚಲೋ ಅದನಾಂತ; ನಮ್ಮ ಸುದ್ದಿ ಅವಗ ಮುಟ್ಟಬೇಕರಽ

ಹ್ಯಾಂಗ?" ಎಂದು ಹೆಂಡತಿ ಮಾತು ಮುಗಿಸಿದಳು. "ರಾತ್ರೀನು ಬಹಳ ಆದ್ಹಾಂಗಾತು. ಹೊರಗ ಯಾರೋ ಗುಜು ಗುಜು ಮಾತಾಡಿದ್ಹಾಂಗ ಕೇಳಿಸ ತೈತೆ" ಎಂದು ಹೇಳಿ, ಹೊರಗೆ ಹೋಗಿ, ತಿರುಗಿ ಒಳಗೆ ಬಂದು ಹೆಂಡತಿಯ ಕಿವಿಯಲ್ಲಿ ನಾವಕಾಶವಾಗಿ ಹೇಳಿದ. "ಕಳ್ಳರು ಈ ಊರ ಅರಸನ ಮನಿ ಕನ್ನ ಹಾಕಾಕ ಬಂದು ನಮ್ಮ ಮನಿ ಹತ್ತರ ಬೇತ ಮಾಡಿಕೊಂಡು ಕುಳಿತಾರ........ ಹ್ಯಾಂಗ ಮಾಡೋದು?" ಹೆಂಡತಿ ಮಾತ್ರ ಗಾಬರಿಯಾಗಲಿಲ್ಲ. ಗಂಡನಿಗೆ ಸಾವ ಕಾಶವಾಗಿ ಹೇಳಿದಳು. "ನಾನು ಏನ ಮಾತಾಡತೇನಿ ಅದಕ್ಕೆ 'ಹುಂ' ಅನ್ನಿರಿ ನೀವು". ಅದಕ್ಕೆ ಗಂಡ ಸಮ್ಮತಿಸಿದ. ಹೆಂಡತಿ ದೀಪ ಆರಿಸಿ "ಮುತ್ತು ನಿಮ್ಮ ಹತ್ತೇಕ ಇರಲಿ" ಎಂದು ಗಟ್ಟಿಯಾಗಿ ಹೇಳಿದಳು. "ಹೂ ಗಟ್ಟಿಯಾಗಿ ಇಟ್ಟುಕೊಂಡಿದ್ದೇನೆ" ಎಂದು ಗಂಡ ಉತ್ತರಕೊಟ್ಟ. ಮತ್ತೆ ಆತನ ಹೆಂಡತಿ "ರತ್ನ ನನ್ನ ಹತ್ತರ ಇರಲಿ" ಎಂದಳು. ಅದಕ್ಕೂ ಆತ "ಹಾಗೇ ಮಾಡು" ಎಂದ. ಇಬ್ಬರೂ ಸುಮ್ಮನೆ ಮಲಗಿದರು.

ಹೊರಗೆ ನಾಯಿಗಳ ಬೊಗಳು ಹೆಚ್ಚಾಯಿತು. ಕಳ್ಳರು ಹಿತ್ತಲಗೋಡೆ ಜಿಗಿದು ಒಳಗೆ ಬಂದು ಕುಳಿತುಕೊಂಡರು! ಆಗ ಬಡವನ ಹೆಂಡತಿ ಮತ್ತೆ ತಮ್ಮ ಊರ ಸುದ್ದಿಯನ್ನೆಲ್ಲ ಸವಿಸ್ತಾರವಾಗಿ ಮಾತಾಡಿ "ಮುತ್ತಿನ ಗಡಿಗೆ ಮುಚ್ಚಿಟ್ಟಿರಾ?" ಎಂದು ಗಟ್ಟಿಯಾಗಿ ಕೇಳಿದಳು. ಗಂಡನಾದರೂ ಬಹು ಚತುರ. "ಹೂಂ ಗಟ್ಟಿಯಾಗಿಯೇ ಮುಚ್ಚಿಟ್ಟಿದ್ದೇನೆ" ಎಂದ. ಕಳ್ಳರಿಗೆ ಇದಕ್ಕಿಂತಲೂ ಹೆಚ್ಚಿನದೇನು ಬೇಕು? ರಾಜನ ಮನೆಯಲ್ಲಿ ಸಿಕ್ಕುವದೇ ಇಲ್ಲಿ ಸಿಕ್ಕರೆ ಅರಮನೆಗೇಕೆ ಕನ್ನಹಾಕಬೇಕು? ಅಲ್ಲವೆ? ಅವರು ಅಲ್ಲಿಯೇ ಸುಮ್ಮನೆ ಕುಳಿತರು. ಒಳಗೆ ಮಗುವಿನ ಅಳುವು ನಡೆಯಿತು. "ಸುಮ್ಮಾಕ ಮಲಕೋ....ಬಂಗಾರ ತಳಗೀ ಮುಚ್ಚಿಟ್ಟು ಬರತೇನಿ" ಎಂದು ಆ ಹೆಣ್ಣುಮಗಳು ನುಡಿದದ್ದು ಕೇಳಿ ಕಳ್ಳರು ಮತ್ತಷ್ಟು ಹರ್ಷಬಟ್ಟರು! ರಾತ್ರಿ ಹಾಗೆ ಸರಿಯು ತ್ತಿತ್ತು. ಒಳಗಡೆ ಜನರಿಗೆ ನಿದ್ದೆ ಹತ್ತಿತೆಂದು ಬಗೆದು ಕಳ್ಳರು ಒಳಗೆ ಬಂದರು. ಮನೆಯಲ್ಲಾ ಸದ್ದು ಮಾಡದೆ ಹುಡುಕಿದರು. ಬಂಗಾರದ ತಳಿಗೆ ಸಿಗಲಿಲ್ಲ! ಮುತ್ತಿನ ಗಡಿಗೆ ಕಾಣಲಿಲ್ಲ! ಮುತ್ತು-ರತ್ನಗಳಂತೂ ಎಲ್ಲಿಯೂ ಸಿಗಲಿಲ್ಲ!!! ಕಳ್ಳರು ಹುಚ್ಚರಾದರು. ಅವರಲ್ಲೊಬ್ಬ "ಎಬ್ಬಿಸು ಆ ಮೂರ್ಖನನ್ನು, ಎಲ್ಲಿ ಬಚ್ಚಿಟ್ಟಿದ್ದಾನೋ ಕೇಳೋಣ" ಎಂದ. ಕಳ್ಳರ ಮಾತಿಗೆ ಆ ಬಡಪಾಯಿ ದೀಪ ಹೊತ್ತಿಸಿದ. ಒಬ್ಬ ಕಳ್ಳ "ಏ ಮೂರ್ಖಾ, ಎಲ್ಲಿಟ್ಟಿದ್ದೀ ಬಂಗಾರದ ತಳಿಗೆ ಯನ್ನು?" ಎಂದ. ಆ ಬಡವನು ಒಡನೆ ಎದ್ದು ರೊಟ್ಟಿ ಮಾಡುವ ತಳಿಗೆ

ತಂದು ಮುಂದಿಟ್ಟ ! ಕಳ್ಳರು ನಗಹತ್ತಿದರು. ಆ ಹೆಣ್ಣುಮಗಳು " ಇದೇ ನಮ್ಮ ಬಂಗಾರದ ತಳಿಗೆ " ಎಂದಳು. ಮತ್ತೊಬ್ಬ " ಮುತ್ತು ರತ್ನವೆಲ್ಲಿ ? " ಎಂದು ತುಸು ಗಡುಸಾಗಿಯೇ ಕೇಳಿದ. ಕೂಡಲೆ ಅವಳು " ಎಣ್ಣಾ— ಈ ಮಗನ್ಽ ನನ್ನ ಮುತ್ತು........ ಆ ಮಗಳು ನನ್ನ ರತ್ನ ! " ಎಂದು ತನ್ನ ಎರಡೂ ಮಕ್ಕಳನ್ನು ಮುಂದೆ ನಿಲ್ಲಿಸಿದಳು. ಕಳ್ಳರೆಲ್ಲ ಹುಚ್ಚು ನಗೆ ನಗಹತ್ತಿದರು. ಮೊದಲಿನ ಕಳ್ಳ " ನಿನ್ನ ಮುತ್ತಿನ ಗಡಗಿ ತೋರಿಸೋ " ಎಂದ. ಅದಕ್ಕೆ ಆ ಬಂಟ ಬಡವ ಜೋಳದ ಗಡಿಗೆ ಮುಂದೆ ತಂದಿಟ್ಟ ! ಈ ಸಂಗತಿ ಜರಗುತ್ತಿರುವಾಗ " ಕು....ಕೂ....ಕ್ಕೂಽಽ " ಎಂದು ಹೊರಗೆ ಕೋಳಿ ಕೂಗಿತು. ಕಳ್ಳರು ಬೆಳಗಾಯಿತೆಂದು ಗಾಬರಿಯಾಗಿ ಓಡಿಹೋದರು !

ಮರುದಿನ ಊರಲೆಲ್ಲ ಇದೇ ಸುದ್ದಿ. ಅರಸನಿಗೂ ಈ ಸುದ್ದಿ ತಲುಪಿತು. ತನ್ನ ಮನೆಯನ್ನುಳಿಹಿದ ಆ ಬಡವನನ್ನು ಅರಸನು ಕರೆಯಿಸಿ ಬೊಗಸೆ ಬೊಗಸೆ ಮುತ್ತು ರತ್ನಗಳನ್ನು ಆತನಿಗೆ ಕೊಟ್ಟ ! ಆ ಬಡ ದಂಪತಿಗಳೂ ಸಿರಿವಂತರಾದರು !!!

**ಶಬ್ದಾರ್ಥ:**

ಮನ್ನಣೆ– ಮರ್ಯಾದೆ, ಒಪ್ಪಿಗೆ; ನೆಲಸು– ತಳವೂರು; ಆಶ್ರಯಿಸು– ಹೊಂದು, ಪಡೆ; ಗಡುಸಾಗಿ– ಗಟ್ಟಿಯಾಗಿ; ಪರಿಹರಿಸು– ಕಡಿಮೆ ಮಾಡು, ಇಲ್ಲದಾಗಿಸು.

**ಪ್ರಶ್ನೆ:**

೧. ಆ ಊರ ಮಹಿಮೆ ಸುತ್ತಲೂ ಹಬ್ಬಲು ಕಾರಣವೇನು ?
೨. ಆ ಊರಿಗೆ ಯಾರು ಬಂದು ನೆಲಸಿದರು ?
೩. ಆ ಬಡಕುಟುಂಬವು ಆ ಊರಿಗೆ ಯಾಕೆ ಬಂದಿತು ?
೪. ಒಂದಃ ದಿನ ರಾತ್ರಿ ಏನು ಸಂಭವಿಸಿತು ?
೫. ಕಳ್ಳರು ಹೇಗೆ ಮೋಸ ಹೋದರು ?
೬. ಅರಸನು ಅವರಿಗೆ ಏನು ಕೊಟ್ಟನು ?

**ವ್ಯಾಕರಣ:**

## ಪುನರವಲೋಕನ

(ಅ) ಈಗ ನೀವು ಎಲ್ಲ ವಿಭಕ್ತಿ ಪ್ರತ್ಯಯಗಳನ್ನು ಅರಿತಿರುವಿರಿ. ಇನ್ನು ಒಂದೇ ನಾಮಪದವನ್ನು ಎಲ್ಲ ವಿಭಕ್ತಿ ಪ್ರತ್ಯಯಗಳಲ್ಲಿ ನಡೆಸುವದನ್ನು ನೀವು ಕಲಿಯಬೇಕು. ಅಂದರೆ ಒಂದೇ ನಾಮಪದದ ಎಲ್ಲ ವಿಭಕ್ತಿ ಪ್ರತ್ಯಯಗಳ ರೂಪಗಳು ನಿಮಗೆ ತಿಳಿಯುತ್ತವೆ.

ಒಂದೇ ಶಬ್ದವನ್ನು ಎಲ್ಲ ವಿಭಕ್ತಿಗಳಲ್ಲಿ ನಡೆಯಿಸಲು—

ಈ ವರೆಗೆ ನೀವು ಕಲಿತ ನಾಮ ವಿಭಕ್ತಿ ಪ್ರತ್ಯಯಗಳನ್ನು ಒಂದೆ ಕಡೆಗೆ ಕೂಡಿಸಿ ನೋಡುವದು ಅವಶ್ಯವಿದೆ.

## ನಾಮ ವಿಭಕ್ತಿಯ ಪ್ರತ್ಯಯಗಳು

| ವಿಭಕ್ತಿ | ಅರ್ಥ | ಪ್ರತ್ಯಯ |
|---|---|---|
| ಪ್ರಥಮಾ | ಕರ್ತೃ | ಉ |
| ದ್ವಿತೀಯಾ | ಕರ್ಮ | ಅ, ಅನ್ನು |
| ತೃತೀಯಾ | ಕರಣ, ಸಾಧನ | ಇಂದ |
| ಚತುರ್ಥೀ | ಸಂಪ್ರದಾನ (ಕೊಡುವದು) | ಗೆ, ಇಗೆ, ಕೆ, ಅಕ್ಕೆ |
| ಪಂಚಮೀ | ಅಪಾದಾನ (ಅಗಲುವದು) | ಇಂದ |
| ಷಷ್ಠೀ | ಸಂಬಂಧ | ಅ |
| ಸಪ್ತಮೀ | ಅಧಿಕರಣ (ಆಧಾರ) | ಅಲ್ಲಿ |
| ಸಂಬೋಧನ | ಸಂಬೋಧನ (ಕರೆಯುವದು) | ಎ, ಏ, ಆ, ಇರಾ |

**ಅರಸ** ಅಕಾರಂತ ಪುಲ್ಲಿಂಗ ಶಬ್ದ

| ವಿಭಕ್ತಿ | ಏ. ವ. | ಬ. ವ. |
|---|---|---|
| ಪ್ರ. | ಅರಸನು | ಅರಸರು |
| ದ್ವಿ. | ಅರಸನನ್ನು | ಅರಸರನ್ನು |
| ತೃ. | ಅರಸನಿಂದ | ಅರಸರಿಂದ |
| ಚ. | ಅರಸನಿಗೆ | ಅರಸರಿಗೆ |
| ಪಂ. | ಅರಸನಿಂದ | ಅರಸರಿಂದ |
| ಷ. | ಅರಸನ | ಅರಸರ |
| ಸ. | ಅರಸನಲ್ಲಿ | ಅರಸರಲ್ಲಿ |
| ಸಂ. | ಅರಸೇ, ಅರಸನೇ | ಅರಸರೇ |

ಇದೇ ರೀತಿಯಲ್ಲಿ ನೀವು ಎಲ್ಲ ನಾಮಪದಗಳನ್ನು ನಡೆಯಿಸಲು ಕಲಿಯಬೇಕು.
ಸರ್ವನಾಮಗಳಿಗೆ ಸಂಬೋಧನ ವಿಭಕ್ತಿ ಬರುವದಿಲ್ಲ.
ಅಂಕಿತನಾಮಗಳಿಗೆ ಬಹುವಚನವಿಲ್ಲ.

(ಬ) ಕೆಳಗಿನ ನಾಮಪದಗಳನ್ನು ನಡೆಯಿಸಿರಿ.

ಗುರು, ತಂದೆ, ತಾಯಿ, ದನ, ಸಿಂಹ, ಜಾಣೆ, ತೊತ್ತು, ನಾನು, ಅವನು, ಅವಳು, ಅದು, ತಾವು.

## ಪ್ರಬಂಧ ಪಾಠ ೫:
## ಅನುಭವಗಳ ವರ್ಣನೆ (ಪುನರವಲೋಕನ)

(ಅ) ಈಗಾಗಲೇ ನೀವು ಅನುಭವಗಳನ್ನು ಹೇಗೆ ಬಣ್ಣಿಸಬೇಕೆಂಬುದನ್ನು ಕಲಿತಿರುವಿರಿ. ಅನುಭವಗಳಲ್ಲಿ ವೈಯಕ್ತಿಕ ಅಂಶಗಳು ಹೆಚ್ಚಾಗಿರುತ್ತವೆ. ಪ್ರಸಂಗಗಳಲ್ಲಿ ಹೊರಗಿನ ಸಂಗತಿಗಳ ಅಂಶಗಳು ಹೆಚ್ಚಾಗಿರುತ್ತವೆ. ಈ ಮಾತನ್ನು ನೀವು ನೆನಪಿನಲ್ಲಿಟ್ಟರೆ ನಿಮ್ಮ ಅನುಭವಗಳನ್ನು ಹೇಗೆ ಬರೆಯಬೇಕೆಂಬುದು ನಿಮಗೆ ಚನ್ನಾಗಿ ಅವಗತವಾಗುತ್ತದೆ. ಪ್ರಬಂಧವೂ ಒಂದು ಸಾಹಿತ್ಯ ರೂಪವಾಗಿದೆ. ಆದ್ದರಿಂದ ನೀವು ಬರೆಯುವ ಪ್ರಬಂಧಗಳೂ ಸಾಹಿತ್ಯದ ರೂಪ ತಾಳುವದು ಒಳ್ಳೆಯದು.

(ಬ) ಕೆಳಗೆ ಕೊಟ್ಟ ಅನುಭವಗಳಲ್ಲಿ ಒಂದನ್ನು ಬಣ್ಣಿಸಿ ಬರೆಯಿರಿ.

೧. ನೀವು ಸಾಲೆಗೆ ಹೋದ ಮೊದಲ ದಿನದ ಅನುಭವ.
೨. ನೀವು ಒಮ್ಮೆ ಕಾಯಿಲೆ ಬಿದ್ದ ಅನುಭವ.
೩. ನೀವು ಸಾಯಕಲ್ ಕಲಿತ ಅನುಭವ.
೪. ನೀವು ಈಸು ಕಲಿತ ಅನುಭವ.
೫. ಒಂದು ಸರಿ ರಾತ್ರಿಯಲ್ಲಿ ನೀವು ಒಬ್ಬರೇ ಮನೆಗೆ ಬಂದ ಅನುಭವ.
೬. ನೀವು ನಿಮ್ಮ ಸಾಲೆಯ ಆಟದ ಗುಂಪಿನ ಹಿರಿಯ ಹುದ್ದರಿಯಾಗಿ ಒಂದು ಪಂದ್ಯಾಟವಲ್ಲಿ ಭಾಗವಹಿಸಿದ ಅನುಭವ.
೭. ನಿಮ್ಮ ಪರೀಕ್ಷೆಯ ಪರಿಣಾಮ ತಿಳಿದ ದಿನದ ಅನುಭವ.
೮. ನೀವು ಒಂದು ನಿಧಿಯನ್ನು ಕೂಡಿಸಲಿಕ್ಕೆ ಹೋದಾಗ ಬಂದ ಅನುಭವ.
೯. ನಿಮ್ಮ ಮನೆಯಲ್ಲಿ ಒಬ್ಬ ಹೊಸ ತಮ್ಮ ಅಥವಾ ತಂಗಿ ಹುಟ್ಟಿದ ದಿನ ಬಂದ ಅನುಭವ.
೧೦. ನಿಮ್ಮ ಮನೆಗೆ ಬೀಗರು ಬಂದ ದಿನದ ಅನುಭವ.

---

# ೩೫. ವರ್ಷಾಕಾಲ

[ ಎನ್ಕೆಯವರ 'ಮುಂಗಾಲ್ ಪುಟಿಗೆ' ಎಲ್ಲರಿಗೂ ಗೊತ್ತಿರಬಹುದು ಸಹಜವಿರಲಿ, ಗಂಭೀರವಿರಲಿ, ಸಾಮಾನ್ಯವಿರಲಿ, ಅಸಾಮಾನ್ಯವಿರಲಿ ಯಾವುದೇ ವಿಷಯವನ್ನು ಬಹು ಸರಳವಾಗಿ ಲಲಿತವಾಗಿ ಸ್ವಾರಸ್ಯಮಯವಾಗಿ ಹೇಳುವ ಶಕ್ತಿ ಎನ್ಕೆಯವರಲ್ಲಿದೆ. ಅವರ ' ಮುಂಗಾಲ್ ಪುಟಿಗೆ'ಯಲ್ಲಿ ಹರುಷ ಕೊಡುವ ವಿಧವಿಧದ ಹರಟೆಗಳಿವೆ. ಅವುಗಳಲ್ಲಿ ವರ್ಷಾಕಾಲವೂ ಒಂದು. ]

• • •

ವರ್ಷಾಕಾಲವೇ ಯುವಕರ ಯುಗಾದಿ; ಹರ್ಷ ವರ್ಷಾಕಾಲ. ಬೇಸಗೆಯು ಬಯಲಾಗಿ ಮನಸೋನ ಗಾಳಿಯು ಬೀಸಿ ವರ್ಷಾಕಾಲವು ಕಾಲಿಕ್ಕುವ

ಸಮಯಕ್ಕೇ ಎಲ್ಲ ಶಾಲೆ–ಕಾಲೇಜುಗಳ ಹೊಸ ವರ್ಷದ ಬಾಗಿಲುಗಳೂ ತೆರೆಯುವವು. ಬೇಸಿಗೆಯ ಬೇಗೆ, ಶಾಲೆ–ಕಾಲೇಜುಗಳ ನಿಡುಬಿಡುವಿನ ಬೇಸರಗಳಿಂದ ಜೀವ ತೀರ ಬೇಸರಿಸಿದಾಗ ಮಳೆಗಾಲದ ಕಾರ್ಮೋಡಗಳು ಸುಳಿಯುತ್ತಲೆ ಹೊಸ ಕಾಲದ ನವಿಲಿನಂತೆ ನವನಾಗರಿಕರ ಮನಸ್ಸು ಚೇತರಿಸಿಕೊಂಡೇಳುವುದು. ಇದೇ ಸಮಯಕ್ಕೆ ವಿಶ್ವವಿದ್ಯಾಲಯದ ಪದವೀ ಪರೀಕ್ಷೆಗಳ ಪರಿಣಾಮಗಳ ಸುರಿಮಳೆಯೂ ಆರಂಭಿಸುವದು. ಕೂಟಕೂಟಕ್ಕೆ ವಿದ್ಯಾರ್ಥಿಗಳ ಗುಂಪನ್ನು ಕಾಣುತ್ತೇವೆ. ಪರೀಕ್ಷೆಗಳಲ್ಲಿ ವಿಜಯ ಸಂಪಾದಿಸಿದ ವಿದ್ಯಾರ್ಥಿಗಳು ಮೇಘಗರ್ಜನೆಗೆ ಕುಣಿದಾಡುವ ನವಿಲುಗಳಿಗಿಂತ ನೂರ್ಮಡಿಯಾಗಿ ಕುಣಿದಾಡಲಾರಂಭಿಸುತ್ತಾರೆ. ಹಳೆಯ ವರುಷವು ಹಿಂಗಿ ಹೊಸ ವರುಷದ ಹೊಸ ಹರುಷದೊಡನೆ ಯಾರಿಗೆ ತಾನೆ ಬದುಕಿನಲ್ಲಿ ಹೊಸ ಹುರುಪು ತೋರುವದಿಲ್ಲ ?

ನನಗಂತೂ ನಮ್ಮೂರಿನ ಮಳೆಗಾಲವೆಂದರೆ ಒಂದು ಒಸಗೆಯ ಕಾಲ. ಪೊಸಬಸಂತನ ಬರವಿನಿಂದ ಕವಿಗೂ ಕೋಗಿಲೆಗೂ ಉತ್ಸಾಹವು ಇಮ್ಮಡಿಸಬಹುದು. ವಸಂತರಾಜನನ್ನು ಸ್ವಾಗತಿಸುವದಕ್ಕಾಗಿ ಹಕ್ಕಿಗಳು ಮಾಗಿಯ ಗಂಟಲನ್ನು ಸಡಲಿಸಿ ಹಾಡಲುಜ್ಜುಗಿಸಬಹುದು. ಆದರೆ ವಿದ್ಯಾರ್ಥಿಗಳಿಗೆ ತೀರ ಸಮೀಪಿಸಿರುವ (ಸತ್ವ) ಪರೀಕ್ಷೆಯ ಝಳದಿಂದ ಒಡಲು ಬೇದಾಗ ಈ ವಸಂತ ಕಾಲಕ್ಕೆ ಯಾವ ಹುಮ್ಮಸ್ಸು ತಲೆದೋರಬೇಕು ? ಕ್ರಿಶ್ಚನ್ ಜನರಿಗೆ ಜನೆವರಿಯು ಹೊಸ ವರುಷವಾಗಬಹುದು, ಭಾರತೀಯರಿಗೆ ಯುಗಾದಿಯು ಹೊಸ ವರುಷವಾಗಬಹುದು; ಶಾಲೆ ಕಾಲೇಜಿನ ವಿದ್ಯಾರ್ಥಿ– ವಿದ್ಯಾರ್ಥಿನಿಯರಿಗೂ ಶಿಕ್ಷಕ–ಶಿಕ್ಷಿಕೆಯರಿಗೂ ಮಳೆಗಾಲವೇ ಹೊಸ ವರುಷದ ಮುನ್ನುಡಿಯಲ್ಲವೆ ? ಕೆಲವರಿಗೆ ಬೇಸಗೆಯ ಬಿಡುವು ಹೆಚ್ಚು ಇಷ್ಟವೆನಿಸಬಹುದು. ಆದರೆ ಬಿಡುವು ಬರಿ ಬಿಡುವಾದರೂ ಅದರಂತಹ ಬೇಸರ ಇನ್ನಾವುದೂ ಇಲ್ಲ. ಮೇಲಾಗಿ ಒಂದು ವರ್ಗದಿಂದ ತೇರ್ಗಡೆ ಹೊಂದಿ ಹೊಸ ವರ್ಗಕ್ಕೆ ಹೋಗಬಯಸುವ ಪ್ರಗತಿಯ ಹುಮ್ಮಸ್ಸಿನಲ್ಲಿ ಬೇಸಗೆ ಇನ್ನಷ್ಟು ಕೀಸರಿಡುವದು.

ಜೇಷ್ಠಮಾಸವು ಆರಂಭಿಸಿರಬೇಕು. ಮೃಗಶಿರದ ತುಂತುರು ಮಳೆಯು ಭೂತಾಯಿಗೆ ಸಿಂಚನಗೆಯ್ಯುತ್ತಿರಬೇಕು. ನೆನೆದರೂ ನೇಸರಿನ ದರ್ಶನವು ಅಲಭ್ಯವಾಗಿರಬೇಕು; ಆಗ ನೋಡಬೇಕು. ನಮ್ಮೂರ ಮಳೆಗಾಲದ ಸಡಗರವನ್ನು. ಬೀದಿ ಬೀದಿಗಳಲ್ಲಿ ಪೇಟೆ ಪೇಟೆಗಳಲ್ಲಿ ಬರಿ ಕಪ್ಪು ಕೊಡೆಗಳ ಸಮ್ಮೇಲನವೇ ನಮ್ಮೇಲನ. ಆಗಸದ ಕಪ್ಪು ಮೋಡಗಳೆ ಭೂಮಿಗಿಳಿದಂತೆ ಕಾಣುವುದು. ಜನದ ಬೆಳ್ಗೊಡೆಗಳನ್ನು ರಾಜರು ಧರಿಸಿದರೆ ಪ್ರಜೆಗಳು ತಮ್ಮ ದಾಸ್ಯದ ಪ್ರತೀಕಗಳಾಗಿ ಈ ಕಪ್ಪು ಧ್ವಜಗಳನ್ನು ಧರಿಸಿರುವಂತೆ ಕಾಣುತ್ತದೆ.

ಒಂದು ಕೈಯಲ್ಲಿ ಕೊಡೆಯನ್ನು ಹಿಡಿದಿದ್ದರೆ ಇನ್ನೊಂದು ಕೈಯಿಂದ ಧೋತರವನ್ನು ಎತ್ತಿಕೊಂಡು ನಡೆಯುತ್ತಿರುವ ಪಾಂಥರೇ ನಮ್ಮ ಕಣ್ಣಿಗೆ ಬೀಳುವರು. ಇಷ್ಟು ಧೋತರವನ್ನು ಮೇಲಕ್ಕೆತ್ತಿಕೊಂಡರೂ ಅವರ ಬೆನ್ನಹಿಂದೆ ನೋಡಿದರೆ ಪಂಕದ ರಂಗಪಂಚಮಿಯನ್ನು ಸಮೃದ್ಧಿಯಾಗಿ ಕಾಣಬಹುದು. ಇಂತಹ ಸಮಯದಲ್ಲಿ ಕಾಲೊಳಗೆ ಸಡಿಲಾದ ಚಪ್ಪಲಿಗಳಾಗಲಿ ವಿಜಾಪುರದ ಮೊಚ್ಚೆಗಳಾಗಲಿ ಇದ್ದರಂತೂ ತೀರಿಯೇ ಹೋಯಿತು; ಕೇಳುವದೇನು ? — 'ಮಾರೊ ಪಿಚಕಾರಿ ಕನ್ಹಯಾ'— ಓಕುಳಿಯಾಟಕ್ಕೆ ಇನ್ನಷ್ಟು ರಂಗ ಬರುವುದು. ಸಡಗರದಿಂದ ಹೋಗುವ ವಿದ್ಯಾರ್ಥಿಗಳ ಅಚ್ಚ ಬಿಳಿಯ 'ಪೈಜಮು'ಗಳು ಕೆಸರಿನ ಅಭಿಸೇಚನದಿಂದ ಪುನೀತವಾಗಿ ಹೋಗುವವು. ಒನಪಿನಿಂದ ನಿರಿಗೆಗಳನ್ನು ಒದೆಯುತ್ತ ನಾಗಿರುವ ಪಂಕೇರುಹ ವದನೆಯರ ಮೇಲುದಗಳ ಪಾಡೇನು ? ಅವರ ಮುಖಗಳಂತೆ ಮೇಲುದಗಳೂ 'ಪಂಕೇರುಹ' ( ಕೆಸರಿನಲ್ಲಿಯೆ ಬೆಳೆದು ನಿಂತದ್ದು ) ಗಳೇ ಆಗುತ್ತವೆ. ಇಂತಹ ಸಮಯದಲ್ಲಿ ಎರಡೂ ಕೈಗಳಲ್ಲಿ ಸಾಲದಷ್ಟು ಸಾಮಾನುಗಳಿದ್ದರಂತೂ ತೀರಿಯೇಹೋಯಿತು, ಆ ಭವಣಿಯನ್ನು ಭಗವಂತನೇ ಬಲ್ಲ. ಇದೇ ಸಮಯಕೆ ಚಿಲ್ಲಿಂದು ಚೀಕಳಿಯಾಡುತ ಒಂದು ಕಾರು ಸರ್ರನೆ ಹಾದು ಹೋಗಬೇಕು. ಪಂಕಜಮುಖಿರು ಪಂಕಮುಖಿರಾಗುತ್ತಾರೆ ಆಗ.

ಇಷ್ಟಕ್ಕೇ ತೀರದು ಈ ಮೃಗಶಿರದ ಸೇಡು. ಉಟ್ಟುಕೊಳ್ಳುವ ಅರಿವೆಗಳು ಮೂರು ಮೂರು ದಿನಗಳಾದರೂ ಆರ್ದ್ರತೆಯನ್ನು ಬಿಟ್ಟಿರುವದಿಲ್ಲ. ಈ ನಮ್ಮ ಪರಿಸ್ಥಿತಿಯನ್ನು ನೋಡಿಯಾದರೂ ಸೂರ್ಯನು ಕರುಣಾರ್ದ್ರನಾಗುವದಿಲ್ಲ. ಅಂತೂ ನಮಗೆ ಹೃದಯಾದ್ರ್ರತೆ ತಪ್ಪುವಂತಿಲ್ಲ.

ವಿದ್ಯಾಖಾತೆಗೆ ಮುನ್ನುಡಿಯಾದಂತೆ ಈ ಮಳೆಗಾಲ ಅನೇಕ ಪಿಡುಗುಗಳಿಗೂ ಮುನ್ನುಡಿಯಾಗಿದೆ. ಕೆರೆಗಳಿಗೆ ಹೊಸ ನೀರು ಬರುತ್ತದೆ. ನಳಗಳಲ್ಲಿ ಕೆನ್ನೀರು; ನಾಗರಿಕರಿಗೆ ಕಣ್ಣೀರು. ( ಈ ಕಣ್ಣೀರಿನಲ್ಲಿ ಒದ್ದೆಗಿಚ್ಚಿನ ಹೊಗೆ ಸುತ್ತೂ ಸೇರಿದೆ.) ನಗರಸಭೆಯ ಕರ್ತವ್ಯಚ್ಯುತಿಯನ್ನು ಬೊಟ್ಟುಮಾಡಿ ತೋರಿಸುವಂತೆ 'ಪ್ಲೇಗು', 'ಮಾರಿಕಾ' ಗಳ ಪರಾಟವೂ ಆರಂಭಿಸುತ್ತದೆ.

ಶ್ರಾವಣವು ಸಮೀಪಿಸಿದ ಹಾಗೆ ವಾತಾವರಣವು ಸ್ವಲ್ಪ ಹದಕ್ಕೆ ಬಂದಿರುತ್ತದೆ. ವರ್ಷಾವತರಣಕ್ಕೆ ವಿರಾಮವಿಲ್ಲದಿದ್ದರೂ ಇಷ್ಟರಲ್ಲಿಯೇ ಒಂದೆರಡು ಜೋರು ಮಳೆಗಳಾಗಿ ಆಗಾಗ ಸೂರ್ಯನೂ ಭೆಟ್ಟಿ ಕೊಟ್ಟು ಹೋಗುವನು. ಈಗ, ಎಂದರೆ ಹೊರಗೆ ಮಳೆ ಹತ್ತಿ, ಒಳಗೆ ಚಳಿ ಹೆಚ್ಚಿ ಒಲೆಯ ಮುಂದೆ

ಕಾಸುತ್ತ ಕೂತಾಗ, ನೆನಪಾಗುವುದು ಸರ್ವಜ್ಞನ ಆ ಶ್ರೇಷ್ಠ ಅನುಭವವಾಣಿ— 'ಬೆಚ್ಚನಾ ಮನೆಯಾಗಿ............ಸ್ವರ್ಗಕ್ಕೆ ಕಿಚ್ಚ ಹಚ್ಚೆಂದ' ಇತ್ಯಾದಿ. ಮತ್ತೆ, ಶಾಪ ಹೊಂದಿದ ಯಕ್ಷನ ವಿರಹವು ಕುದಿಗೆ ಬಂದದ್ದು ಈಗಲೆ ಅಲ್ಲವೆ— 'ಆಷಾಢಸ್ಯ ಪ್ರಥಮ ದಿವಸೆ ಮೇಘ ಮಾಶ್ಲಿಷ್ಠ ಸಾನುಂ' ನೋಡಿದಾಗ ?

ಒಮ್ಮೊಮ್ಮೆ ಒಳ್ಳೇ ರಭಸದಿಂದ ಮಳೆಯಾದಾಗ ಆಕಾಶವು ಕೂಡಲೆ ನಿರಭ್ರವಾಗುತ್ತದೆ. ದಿನವು ಪ್ರಸನ್ನವಾಗಿರುತ್ತದೆ. ರಾಜಬೀದಿಯ ಇರ್ಕಡೆಗಳಲ್ಲಿ ಕಾಲ್ವರಿವ ಅನೇಕ ಪ್ರವಾಹಗಳು ಮನಸ್ಸಿಗೆ ಆನಂದವನ್ನು ಕೊಡುತ್ತವೆ. ಗುಡ್ಡಗಳ ಮೇಲೆಲ್ಲ ಹಸಿರೇ ಹಸಿರು. ಅಡವಿಯ ಹಾದಿಗುಂಟ ಅರಳಿರುವ ಹಸಿರು, ಹಳದಿ ಕಾಡು ಹೂಗಳು, ಹುಲ್ಲುಕಡ್ಡಿಗಳ ಮೇಲೆ ಹೊಳೆಹೊಳೆವ ನೀರ್ವನಿಗಳು ನಯನಾನಂದಕಾರಿಯಾಗಿರುತ್ತವೆ. ಪ್ರಕೃತಿದೇವಿ ಮೈತೊಳೆದಂತೆ, ಚೆಲುವು ಮೈತಳೆದಂತೆ ಸುತ್ತಲಿನ ನೋಟ. ಗಿಡಗಳ ಮೇಲೂ ಹೂಗಳ ಮೇಲೂ ಹಸುರಿನ ಮೇಲೂ ದುಕೂಲಪಟವನ್ನು ಹಾಸಿದಂತೆ ಒಮ್ಮೊಮ್ಮೆ ಹೂಬಿಸಿಲು ಬಿದ್ದಾಗ ಮನಸ್ಸಿಗುಂಟಾಗುವ ಉಲ್ಲಾಸವನ್ನು ಹೇಳುವದಕ್ಕೆ ಎಣೆಯೆ ?

ಅಂತೂ ಪ್ರವಾಸಗಳಿಗೆ ಪ್ರತಿಕೂಲವೆನಿಸಿದರೂ ರೋಗಗಳ ಆಗರವಾದರೂ ಪಿಡುಗಿನ ಎಡೆಯಾದರೂ ಮಳೆಗಾಲವೇ ನನ್ನ ಮೆಚ್ಚುಗೆಯ ಕಾಲ. ನನ್ನ ಹಿಗ್ಗಿನ ಸುಗ್ಗಿಯ ಕಾಲ.

**ಶಬ್ದಾರ್ಥ:**

ಬಸಂತ – ವಸಂತಋತು; ಉಜ್ಜಗಿಸು – ಆರಂಭಿಸು; ಕೀಸರಿಡು – ಬಹಳ ಬೇಸರವಾಗು; ಸಿಂಚನಗೈಯು – ಹನಿಹನಿಯಾಗಿ ಉದುರು; ಜಸ – ಕೀರ್ತಿ, ಪಾಂಥರು – ಹಾದಿಕಾರರು; ಪಂಕ – ಕೆಸರು; ಪಂಕೇರುಹ – ಕಮಲ; ಮೇಲುದ– ಮೇಲಿನ ಬಟ್ಟೆ; ಚ್ಯುತಿ – ಮಾಡದೆ ಇರುವದು; ನಿರಭ್ರ – ಸ್ವಚ್ಛ; ದುಕೂಲ – ರೇಶಿಮೆ ವಸ್ತ್ರ.

**ಪ್ರಶ್ನೆ:**

೧. ಶಾಲೆ-ಕಾಲೇಜುಗಳಿಗೆ ವರ್ಷಾಕಾಲವೇ ಹೊಸ ವರುಷದ ಮುನ್ನಡಿ ಯಾಕೆ ?
೨. ನಮ್ಮೂರಿನ ಕಪ್ಪು ಕೊಡೆಗಳ ಸಮ್ಮೇಳನವು ಯಾವಾಗ ಕೂಡುತ್ತದೆ? ಮತ್ತು ಆಗಿನ ದೃಶ್ಯ ಹೇಗೆ ಕಾಣುತ್ತದೆ ?
೩. ನಿಬಂಧದಲ್ಲಿ ವರ್ಣಿಸಿದ ಪಾಂಥರ ಗತಿಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.
೪. ಮಳೆಗಾಲವು ಅನೇಕ ಪಿಡುಗುಗಳಿಗೆ ಏಕೆ ಮುನ್ನಡಿಯಾಗಿದೆ ?
೫. ಶ್ರಾವಣದ ಮುಂದಿನ ಮಳೆಗಾಲದ ವರ್ಣನೆಯನ್ನು ಸ್ವಲ್ಪದರಲ್ಲಿ ಹೇಳಿರಿ.

## ಪೂರ್ಣವಿರಾಮ, ಪ್ರಶ್ನಾರ್ಥಕ, ಉದ್ಗಾರವಾಚಕ, ಚಿಹ್ನೆಗಳು

ಅ) ೧. ಆದರೆ ಬಿಡುವು ಬಯಬಿಡುವಾದರೂ ಅವರಂತಹ ಬೇಸರ ಇನ್ನಾವುದೂ ಇಲ್ಲ.

೨. ಶಾಲೆ – ಕಾಲೇಜಿನ ವಿದ್ಯಾರ್ಥಿ – ವಿದ್ಯಾರ್ಥಿನಿಯರಿಗೂ ಶಿಕ್ಷಕ – ಶಿಕ್ಷಿಕೆಯರಿಗೂ ಮಳೆಗಾಲವೇ ಹೊಸ ವರುಷದ ಮುನ್ನುಡಿಯಲ್ಲವೇ ?

೩. ಆಹಾ ! ಮಳೆಗಾಲದ ವೈಭವವೇನು !

ಮೇಲಿನ ಮೂರು ವಾಕ್ಯಗಳನ್ನು ನಿರೀಕ್ಷಿಸಿ ನೋಡಿರಿ.

ಮೊದಲನೆಯ ವಾಕ್ಯದಲ್ಲಿ " ಇಲ್ಲ " ಎಂಬ ಕ್ರಿಯಾಪದಕ್ಕೆ ಒಂದು ಅರ್ಥವು ಪೂರ್ಣವಾಗುತ್ತದೆ. ಆದ್ದರಿಂದ " ಇಲ್ಲ " ಈ ಶಬ್ದದ ಕೆಳಗಡೆ ಬಲಬದಿಗೆ ' . ' ಈ ಚಿಹ್ನವನ್ನು ಕೊಡಲಾಗಿದೆ. ' . ' ಚಿಹ್ನವು ಒಂದು ವಾಕ್ಯದ ಅರ್ಥ ಪೂರ್ಣವಾಗುವಲ್ಲಿ ಬರುವದರಿಂದ ಇದನ್ನು **' ಪೂರ್ಣವಿರಾಮ ಚಿಹ್ನ '** ವೆಂದು ಕರೆಯುವರು. ಸಾಮಾನ್ಯವಾಗಿ ವಾಕ್ಯದ ಕೊನೆಗೆ ಪೂರ್ಣವಿರಾಮ ಚಿಹ್ನವು ಬರುತ್ತದೆ.

ಎರಡನೆಯ ವಾಕ್ಯದಲ್ಲಿ ಪ್ರಶ್ನೆಯನ್ನು ಕೇಳಲಾಗಿದೆ. ಆದ್ದರಿಂದ ಆ ವಾಕ್ಯದ ಕೊನೆಗೆ " ? " ಈ ಚಿಹ್ನ ಬಂದಿದೆ. " ? " ಈ ಚಿಹ್ನವು **ಪ್ರಶ್ನಾರ್ಥಕ ಚಿಹ್ನ.** ಪ್ರಶ್ನವನ್ನು ಕೇಳತಕ್ಕ ವಾಕ್ಯದ ಕೊನೆಗೆ ಇದು ಬರುತ್ತದೆ.

ಮೂರನೆಯ ವಾಕ್ಯದಲ್ಲಿ " ! " ಈ ಚಿಹ್ನವು ಎರಡು ಸಾರೆ ಬಂದಿದೆ. ಯಾಕಂದರೆ ಮೂರನೆಯ ವಾಕ್ಯವು ಮಳೆಗಾಲದ ವೈಭವವನ್ನು ನೋಡಿ ಆನಂದ ಆಶ್ಚರ್ಯಗಳಿಂದ ಉದ್ಗಾರ ಹೊರಡಿಸಿದ್ದನ್ನು ವ್ಯಕ್ತಪಡಿಸುತ್ತದೆ. ಆಶ್ಚರ್ಯ, ಆನಂದ ಮೊದಲಾದ ಭಾವನೆಗಳ ಉದ್ಗಾರವನ್ನು ಒಳಗೊಂಡ ಶಬ್ದ ಅಥವಾ ವಾಕ್ಯದ ಕೊನೆಗೆ ಉದ್ಗಾರವಾಚಕ ಚಿಹ್ನವು ಬರುತ್ತದೆ. " ! " ಇದು **ಉದ್ಗಾರವಾಚಕ ಚಿಹ್ನವು.**

ಬ) ಕೆಳಗಿನ ಗದ್ಯಭಾಗದಲ್ಲಿ ಅವಶ್ಯಕವಿದ್ದಲ್ಲಿ ಪೂರ್ಣವಿರಾಮ, ಪ್ರಶ್ನಾರ್ಥಕ, ಉದ್ಗಾರವಾಚಕ ಚಿಹ್ನಗಳನ್ನು ತುಂಬಿ, ವಾಕ್ಯಾವಳಿಗಳನ್ನು ಮಾಡಿ ಅದನ್ನು ಸರಿಯಾಗಿ ಬರೆಯಿರಿ.

ನಾಯಕರು ತಮ್ಮ ಮಗನ ಮದುವೆಯ ಪ್ರಸಂಗದಲ್ಲಿ ಸಂಗೀತಕ್ಕಾಗಿ ಒಬ್ಬ ದೊಡ್ಡ ಗವಾಯಿಯನ್ನು ಕರೆಯಿಸಿದ್ದರು ಮದುವೆಯಾದ ದಿನ ಸಂಗೀತ ಕಛೇರಿ ಏರ್ಪಟ್ಟಿತ್ತು ಊರ ಹಿರಿಯರಿಗೆಲ್ಲ ಆಮಂತ್ರಣಗಳಿದ್ದವು ಭವ್ಯಮಂಟಪದಲ್ಲಿ ಸಮಯಕ್ಕೆ ಸರಿಯಾಗಿ ಸದ್ಗೃಹಸ್ಥರೆಲ್ಲ ಕೂಡಿದರು ಮಂಟಪ ಕಿಕ್ಕಿರಿಯಿತು ಸಂಗೀತ ಕ್ಕಾರಂಭವಾಯಿತು ಗವಯಿಗಳು ಸಾರಂಗ ರಾಗದಲ್ಲಿ ಚನ್ನಾಗಿ ಆಲಾಪನೆ ಮಾಡಿ ಮುಗಿಸಿದರು ಎಲ್ಲರೂ ಅದನ್ನು ಕೇಳಿ ತಲೆದೂಗಿದರು ನಂತರ ಮತ್ತೆ ಯಾವ ರಾಗ ಹಾಡಲಿ ಸಂಗೀತಗಾರ ಕೇಳಿದರು ನಾಯಕರೇ ತಮ್ಮಿಂದಲೇ ಅಪ್ಪಣೆಯಾಗಲಿ ಜನರು

ಆಗ್ರಹಪಡಿಸಿದರು ಓಹೋ ಅದಕ್ಕೇನಂತೆ ಇನ್ನು ಸಾರಂಗ ರಾಗ ಸಾಗಲಿ ನಾಯಕರು ಹೆಮ್ಮೆಯಿಂದ ಹೇಳಿದರು ಅಯ್ಯೋ ಈ ವರೆಗೂ ಹಾಡಿದ್ದು ಸಾರಂಗರಾಗವೇ ಅಲ್ಲವೇ ಗವಯಿ ಮೂಗೇರಿಸುತ್ತ ಕೇಳಿದ ಜನರ ಅಟ್ಟಹಾಸ ಆಕಾಶಕ್ಕೇ ಏರಿತು ಪಾಪ ನಾಯಕರು ಇದ್ದವರೂ ಅಲ್ಲ ಸತ್ತವರೂ ಅಲ್ಲ

## ಪ್ರಬಂಧ

(ಪುನರವಲೋಕನ)

(ಅ) ಈಗಾಗಲೇ ನೀವು ವ್ಯಾವಹಾರಿಕ ಪತ್ರಗಳನ್ನು ಬರೆಯಲು ಕಲಿತಿರುವಿರಿ. ಏನಾದರೂ ವ್ಯವಹಾರ ಉದ್ಯೋಗವನ್ನು ನಡೆಯಿಸುವಾಗ ಪತ್ರ ಬರೆಯುವ ಪ್ರಸಂಗ ಮೇಲಿಂದ ಮೇಲೆ ಬರುತ್ತದೆ. ಆದ್ದರಿಂದ ವ್ಯಾವಹಾರಿಕ ಪತ್ರಗಳನ್ನು ಬರೆಯಲು ನಾವು ರೂಢಿ ಮಾಡುವದು ಬಹಳ ಅವಶ್ಯವಾಗಿದೆ. ವ್ಯಾವಹಾರಿಕ ಪತ್ರಗಳಲ್ಲಿ ವೈಯಕ್ತಿಕ ವಿಷಯಗಳು ಬರಬಾರದು ಮತ್ತು ವ್ಯಾವಹಾರಿಕ ಪತ್ರವು ಅನಾವಶ್ಯಕವಾಗಿ ಬೆಳೆಯಬಾರದು.

(ಬ) ರೂಢಿಗಾಗಿ ಕೆಳಗಿನ ಒಂದನ್ನು ಕುರಿತು ಒಂದು ವ್ಯಾವಹಾರಿಕ ಪತ್ರ ಬರೆಯಿರಿ.

೧) ಡ್ರಾಯಿಂಗ ಕಾಗದ, ಸೀಸಕಡ್ಡಿ, ರಬ್ಬರು ಮುಂತಾದ ಸ್ಟೇಶನರಿ ಸಾಮಾನುಗಳು ಬೇಕಾಗಿವೆ. ಅವುಗಳನ್ನು ತರಿಸುವ ಕುರಿತು ಚೀಪ ಸ್ಟೇಶನರಿ ಮಾರ್ಟ, ಅಬ್ದುಲ್‌ರಹಿಮಾನ ಸ್ಟ್ರೀಟ, ಮುಂಬಯಿ ಇವರಿಗೆ ಒಂದು ಪತ್ರ ಬರೆಯಿರಿ.

೨) ಶಾಲೆಯ ಬಾಲಕರ ಸಮವಸ್ತ್ರಗಳ ಸಲುವಾಗಿ ಬಟ್ಟೆ ಬೇಕಾಗಿದೆ. ಅದಕ್ಕಾಗಿ ಭುವನೇಶ್ವರಿ ವೀವಿಂಗ ಮಿಲ್, ಚಾಮರಾಜ ನಗರ, ಮೈಸೂರ ಇವರಿಗೆ ವಿವಿಧ ಬಟ್ಟೆಗಳ ದರಗಳ ವಿವರವನ್ನು ತಿಳಿಸುವದಕ್ಕಾಗಿ ಒಂದು ವ್ಯಾವಹಾರಿಕ ಪತ್ರ ಬರೆಯಿರಿ.

೩) ನೀವು ಕಿರಾಣಿ ವ್ಯಾಪಾರಸ್ಥರೆಂದು ಭಾವಿಸಿ — ವಿವಿಧ ಕಿರಾಣಿ ಸಾಮಾನು ಹಾಗೂ ಸಬಕಾರ ವಗೈರೆ ತರಿಸುವ ಬಗ್ಗೆ ಎಸ್. ಶ್ರೀನಿವಾಸ ಶೆಟ್ಟಿ ಆ್ಯಂಡ ಸನ್ಸ, ಮಂಡಿಪೇಟೆ, ಬೆಂಗಳೂರ ಇವರಿಗೆ ಕೆಲವು ನಮೂನೆಗಳನ್ನು ಹಾಗೂ ಅವುಗಳ ದರಗಳನ್ನು ಕೇಳಿ ಒಂದು ಪತ್ರ ಬರೆಯಿರಿ.



# ೩೬. ವಚನಾಮೃತ

[ ವೀರಶೈವ ಅನುಭಾವಿಗಳು ವಚನಗಳನ್ನು ಬರೆದು ಕನ್ನಡ ಸಾಹಿತ್ಯದ ಕಣಜವನ್ನು ತುಂಬಿದ್ದಾರೆ. ವಚನಗಳು ಗದ್ಯದ ರೀತಿಯಲ್ಲಿ ಬರೆದಿದ್ದರೂ ಅವುಗಳಿಗೆ ಪದ್ಯದ ಓಟವಿರುತ್ತದೆ. ಅನೇಕ ಶಿವಶರಣರು ವಚನಗಳನ್ನು ಬರೆದಿದ್ದಾರೆ. ಅವರಲ್ಲಿ ಬಸವಣ್ಣ, ಅಲ್ಲಮ, ಅಕ್ಕಮಹಾದೇವಿ ಮೊದಲಾದವರು ಬಹಳ ಪ್ರಸಿದ್ಧರು. ನಿತ್ಯ ಜೀವನದಲ್ಲಿಯೂ ದೇವತ್ವವನ್ನು ಪಡೆಯುವ ಸ್ಥಿತಿ ಬರಬೇಕೆಂದು ವಚನಗಳಲ್ಲಿ ಹೇಳಲಾಗಿದೆ. ಇಹಪರಗಳು ಬೇರೆ ಇರುವದಿಲ್ಲ. ಇಲ್ಲಿ ಸಂದುವರೇ ಅಲ್ಲಿಯೂ ಸಂದುವರೆಂದು ಹೇಳುವ ಮಾತು ಬಲು ಮಹತ್ವದ ಮಾತಾಗಿದೆ. ಒಂದೊಂದು ನುಡಿಯಲ್ಲಿ ಒಂದೊಂದು ತತ್ವ ಬಿಂಬಿಸಲಾಗಿದೆ. ಹೀಗೆ ವಚನ ವಾಙ್ಮಯವು ತನ್ನದೇ ಆದ ಒಂದು ವೈಶಿಷ್ಟ್ಯವನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದೆ ಎಂದು ಹೇಳಬಹುದು.]

• • •

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿ ಭೋ !
ಸತ್ಯವ ನುಡಿವುದೆ ದೇವಲೋಕ; ಮಿಥ್ಯವ ನುಡಿವುದೆ ಮರ್ತ್ಯಲೋಕ !
ಆಚಾರವೇ ಸ್ವರ್ಗ, ಅನಾಚಾರವೇ ನರಕ–
ಕೂಡಲಸಂಗಮದೇವಾ ನೀವೇ ಪ್ರಮಾಣು ॥ ೧ ॥

ಹುತ್ತವ ಬಡಿದೊಡೆ ಹಾವು ಸಾಯ ಬಲ್ಲುದೆ ಅಯ್ಯಾ ?
ಅಘೋರ ತಪವ ಮಾಡಿದೊಡೇನು ?
ಅಂತರಂಗ--ಆತ್ಮ ಶುದ್ಧಿಯಿಲ್ಲದವರನೆಂತು ನಂಬುವನಯ್ಯಾ ಕೂಡಲ
ಸಂಗಮದೇವ ? ॥ ೨ ॥

ಕಾಯಕವೆಂದು ಕಾಯುವ ಬಳಲಿಸದೆ ತನುಕರಗದೆ ಮನನೋಯದೆ
ಬೇಡಿ ಕಾಡಿ ಮಾಡುವದು ದಾಸೋಹವೇ ?
ಆವ ಕಾಯಕವಾದಡೂ ಪ್ರಮಾಣವೇ ಕಡೆಯಾಗಿ ಚಿತ್ತ ಶುದ್ಧದಲ್ಲಿ-
ಮಯ್ಯಾಂತು
ಬಂದುದನು ಸರಿಗಂಡು ದೇಹಿಗಳನ್ನೆಲ್ಲ ಒಂದೇ ಪ್ರಮಾಣದಲ್ಲಿ ಕಂಡಡೆ
ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗಕ್ಕೆ ತೃಪ್ತಿ ॥ ೩ ॥

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯಾ ?
ಸಮುದ್ರದ ತಡೆಯಲ್ಲಿ ಮನೆಯ ಮಾಡಿ, ನೆರೆತೆರೆಗಳಿಗಂಜಿದಡೆಂತಯ್ಯಾ ?
ಸಂತೆಯೊಳಗೊಂದು ಮನೆಯ ಮಾಡಿ, ಶಬ್ದಕ್ಕೆ ನಾಚಿದಡೆಂತಯ್ಯಾ ?

ಚೆನ್ನ ಮಲ್ಲಿಕಾರ್ಜುನ ದೇವ ಕೇಳವಯ್ಯ
ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದಡೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು ॥ ೪ ॥

ಅಗ್ಗವಣಿ ಪತ್ರೆ, ಪುಷ್ಪ, ಧೂಪ, ದೀಪ, ನೀವಾಳಿಯಲ್ಲಿ ಪೂಜಿಸಿ,
ಪೂಜಿಸಿ ಬಳಲುತ್ತಿದ್ದಾರೆ ಏನೆಂದರಿಯರು ಎಂತೆಂದರಿಯರು.
ಜನಮರುಳೊ ಜಾತ್ರೆ ಮರುಳೊ ಎಂಬಂತೆ ಎಲ್ಲರೂ ಪೂಜಿಸಿ ಏನನೂ
ಕಾಣದೆ ಲಯಕ್ಕೊಳಗಾಗಿ ಹೋದರು ಗುಹೇಶ್ವರ ॥ ೫ ॥

**ಶಬ್ದಾರ್ಥ:**

ಮರ್ತ್ಯಲೋಕ – ಭೂಲೋಕ; ಅಘೋರ – ಭಯಂಕರ; ಮಿಥ್ಯ – ಸುಳ್ಳು; ಕಾಯ – ಶರೀರ; ಅಗ್ಗವಣಿ – ನೀರು.

**ಪ್ರಶ್ನೆ:**

೧. ಆತ್ಮಶುದ್ಧಿಯೇ ಮುಖ್ಯವೆಂಬ ಮಾತನ್ನು ಬಸವಣ್ಣನವರು ಹೇಗೆ ಹೇಳಿದ್ದಾರೆ?
೨. ಚಿತ್ತ ಶುದ್ಧಿಯೇ ಮುಖ್ಯವೆಂದು ಎರಡನೆಯ ವಚನದಲ್ಲಿ ಹೇಗೆ ಹೇಳಿದ್ದಾರೆ?
೩. ಭೂಲೋಕದಲ್ಲಿ ಹುಟ್ಟಿಬಂದಮೇಲೆ ಯಾಕೆ ಅಂಜಬಾರದು ?
೪. 'ಜನಮರುಳೋ ಜಾತ್ರೆಮರುಳೋ' ಅಂದರೇನು ?

## **ಪ್ರಬಂಧ** (ಪುನರವಲೋಕನ)

ಈಗಾಗಲೇ ನೀವು ಸಂವಾದ ಅಥವಾ ಸಂಭಾಷಣೆಯ ಬಗ್ಗೆ ಕಲಿತಿರುವಿರಿ. ಜೀವನದಲ್ಲಿ ಸಂವಾದ ಅಥವಾ ಸಂಭಾಷಣೆಮಾಡುವ ಪ್ರಸಂಗ ಮೇಲಿಂದ ಮೇಲೆ ಬರುತ್ತವೆ. ಆದ್ದರಿಂದ ನೀವು ಅವುಗಳನ್ನು ರೂಢಿ ಮಾಡುವದು ಅವಶ್ಯವಾಗಿದೆ. ಸಂವಾದ ಹಾಗೂ ಸಂಭಾಷಣೆಯಲ್ಲಿ ಇದ್ದ ಅಂತರವನ್ನು ನೀವು ಈಗಾಗಲೇ ಅರಿತಿರುವಿರಿ. ಅವನ್ನು ಲಕ್ಷದಲ್ಲಿಟ್ಟುಕೊಂಡು ನೀವು ಬರೆಹವನ್ನು ರೂಢಿ ಮಾಡಬೇಕು.

೧. ಕೆಳಗಿನ ವಿಷಯಗಳಲ್ಲಿ ಒಂದನ್ನು ಕುರಿತು ಒಂದು ಚಿಕ್ಕ ಸಂವಾದವನ್ನು ಬರೆಯಿರಿ.
   ೧. ಚಹ ಕುಡಿಯುವದು ಒಳ್ಳೆಯದೋ ಹಾಲು ಕುಡಿಯುವದು ಒಳ್ಳೆಯದೋ ?
   ೨. ಸಿನೇಮಾಕ್ಕೆ ಹೋಗಬೇಕೋ ಬೇಡವೋ ?
   ೩. ನಾಯಿ ಹಾಗೂ ಬೆಕ್ಕು ಇವುಗಳಲ್ಲಿ ಒಡೆಯನಿಗೆ ಯಾರು ಹೆಚ್ಚು ಬೇಕಾದವರು ?
   ೪. ಚಕ್ಕಡಿ ಹಾಗೂ ಮೋಟರು ಯಾವದು ಹೆಚ್ಚು ?
   ೫. ಸಾಯಕಲ್ ಮತ್ತು ಟಾಂಗಾ ತಮ್ಮ ಉಪಯುಕ್ತತೆಯ ಬಗ್ಗೆ.

೨. ಕೆಳಗಿನ ಸಂದರ್ಭಗಳಲ್ಲಿ ಒಂದನ್ನು ಆಯ್ದುಕೊಂಡು ಒಂದು ಚಿಕ್ಕ ಸಂಭಾಷಣೆ ಬರೆಯಿರಿ.

೧. ಗೆಳೆಯರಿಬ್ಬರು ಬಹಳ ದಿನಕ್ಕೆ ಭೆಟ್ಟಿಯಾದಾಗ ಅವರಲ್ಲಿ ನಡೆಯುವ ಸಂಭಾಷಣೆ.

೨. ತಂದೆ ಹಾಗೂ ಮಗ ಇವರಿಬ್ಬರಲ್ಲಿ ಮಗನು ಪರೀಕ್ಷೆಯಲ್ಲಿ ಪಾಸಾದಾಗ ನಡೆಯುವ ಸಂಭಾಷಣೆ.

೩. ಅಕ್ಕ ಹಾಗೂ ತಂಗಿ ಇವರಲ್ಲಿ ತಂಗಿಯು ಸಾಲೆಗೆ ಬರಲು ಒಲ್ಲೆನೆಂದಾಗ ನಡೆದ ಸಂಭಾಷಣೆ.

೩೭.




" ಕರುಣಾಳು ಬಾ ಬೆಳಕೆ
ಮುಸುಕಿದೀ ಮಬ್ಬಿನಲಿ, ಕೈಹಿಡಿದು ನಡೆಸೆನ್ನನು "

[ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕವಾಗುವಂತಹ ನಾಲ್ಕು ಚಿಕ್ಕ ಕಥೆಗಳನ್ನು ಈ ವಿಭಾಗದಲ್ಲಿ ಕೊಟ್ಟಿದೆ. ಈ ಕಥೆಗಳನ್ನು ಓದಿ, ಅವುಗಳ ವಿಚಾರಗಳನ್ನು ತಿಳಿದುಕೊಳ್ಳಬೇಕು. ಕಥೆಗಳಿಂದ ಹೊರಡುವ ನೀತಿಯ ಮಾತುಗಳನ್ನು ಮನನಮಾಡಿಕೊಳ್ಳಬೇಕು. ]

■ ■ ■

## ೧. ಶ್ವೇತಕೇತು

ಶ್ವೇತಕೇತು ಎಂಬ ಒಬ್ಬ ಹುಡುಗ ಇದ್ದ. ಅವನ ತಂದೆಯ ಹೆಸರು ಉದ್ದಾಲಕ. ತಂದೆ ಮಗನಿಗೆ ಒಂದು ದಿವಸ, "ಶ್ವೇತಕೇತು, ನಮ್ಮ ಕುಲದಲ್ಲಿ ಹೆಸರಿಗೆ ಮಾತ್ರ ಬ್ರಾಹ್ಮಣ ಎನಿಸಿಕೊಂಡವರು ಯಾರೂ ಇಲ್ಲ. ಆದ್ದರಿಂದ ನೀನು ಗುರುವನ್ನು ಹುಡುಕಿಕೊಂಡು ಹೋಗಿ ವಿದ್ಯೆ ಕಲಿ," ಎಂದು ಹೇಳಿದನು.

ಆಗ ಶ್ವೇತಕೇತುವಿಗೆ ಹನ್ನೆರಡು ವರ್ಷ. ತಂದೆಯು ಮಾತಿನಂತೆ ತನ್ನ ಇಪ್ಪತ್ತುನಾಲ್ಕನೆಯ ವರ್ಷದ ವರೆಗೆ ವಿದ್ಯೆ ಕಲಿತನು. ಆ ಮೇಲೆ ತಂದೆಯ

ಮನೆಗೆ ಹಿಂದಿರುಗಿದನು. ಆಗ ತಂದೆ ಮಗನನ್ನು ಆದರದಿಂದ ಹತ್ತಿರಕ್ಕೆ ಕರೆದು ಕೇಳಿದನು. "ಮಗು, ಏನೇನು ಕಲಿತೆ ?"

ಶ್ವೇತಕೇತು, "ಎಲ್ಲ ವೇದಗಳನ್ನೂ ಓದಿದ್ದೇನೆ," ಎಂದು ಬಹಳ ಜಂಭದಿಂದ ಹೇಳಿದನು.

"ನೀನು ದೊಡ್ಡ ಪಂಡಿತನಾದೆ. ಹಾಗಾದರೆ, ಯಾವುದನ್ನು ತಿಳಿದರೆ ಅದರಿಂದ ಎಲ್ಲವನ್ನೂ ತಿಳಿಯಬಹುದೋ, ಅದು ಏನು ಎಂದು ವಿಚಾರಮಾಡಿದ್ದೀಯಾ ?" ಎಂದು ತಂದೆ ಪ್ರಶ್ನೆಮಾಡಿದನು.

"ಇಲ್ಲ, ಅದು ಹೇಗಾದೀತು ?"

"ಏಕೆ, ಮಗು, ಬೇರೆ ಬೇರೆ ತರದ ಮಡಕೆಗಳಿಗೆಲ್ಲ ಮಣ್ಣು ಆಧಾರ. ಮಣ್ಣಿಗೆ ಬೇರೆ ಬೇರೆ ಆಕಾರ ಕೊಟ್ಟರೆ ಮಡಕೆ, ಕುಡಿಕೆ ಆಗುತ್ತವೆ ಅಲ್ಲವೆ ? ಹಾಗೆಯೇ ಪ್ರಪಂಚದ ಎಲ್ಲ ವಸ್ತುಗಳೂ."

"ನಮ್ಮ ಗುರುಗಳು ನನಗೆ ಇದನ್ನು ಹೇಳಲಿಲ್ಲ. ನಿಮ್ಮಿಂದ ಕಲಿಯಬೇಕು ಎಂದು ಆಸೆಯಾಗಿದೆ, ತಿಳಿಸಿಕೊಡಬೇಕು" ಎಂದು ಮಗ ಕೇಳಿದನು.

"ಮಗು, ಆ ಆಲದ ಮರದ ಒಂದು ಹಣ್ಣನ್ನು ತಾ !"

"ಇಕೋ, ತಂದಿದ್ದೇನೆ ಭಗವನ್ !"

"ಅದನ್ನು ಒಡಿ."

"ಒಡೆದೆ ಭಗವನ್"

"ಒಳಗೆ ಏನಿದೆ ?"

"ಸಣ್ಣ ಸಣ್ಣ ಬೀಜಗಳಿವೆ."

"ಅವುಗಳಲ್ಲಿ ಒಂದನ್ನು ಒಡಿ, ಮಗು"

"ಒಡೆದಿದ್ದೇನೆ ಭಗವನ್"

"ಅದರಲ್ಲಿ ಏನು ಕಾಣುತ್ತದೆ ?"

"ಏನೂ ಕಾಣುವುದಿಲ್ಲವಲ್ಲ."

"ಮಗು ಕಣ್ಣಿಗೆ ಕಾಣದೆ ಇರುವಷ್ಟು ಆ ಧೂಳಿನಿಂದ ಈ ದೊಡ್ಡ ಆಲದ ಮರ ಹುಟ್ಟಿ ಬೆಳೆದಿದೆ. ಆಶ್ಚರ್ಯವಲ್ಲವೆ ? ಅದೇ ರೀತಿಯಲ್ಲಿ ಈ ಜಗತ್ತಿಗೆಲ್ಲ ಕಣ್ಣಿಗೆ ಕಾಣದ ಒಂದು ವಸ್ತುವೇ ಆಧಾರ. ಅದೇ ಸತ್ಯ. ಅದನ್ನೇ ಎಲ್ಲೆಲ್ಲೂ ಇರುವ ಆತ್ಮಾ ಎಂದು ಕರೆಯುವುದು. ನೀನು ಕೂಡ ಅದೇ ವಸ್ತುವೇ !"

## ೨. ಕುಂಬಳಕಾಯಿ

ಒಮ್ಮೆ ಹಲವು ಸಾಧುಗಳು ಕೂಡಿ ಯಾತ್ರೆಗಾಗಿ ಹೊರಟರು. ಅವರು ಸಂತ ತುಕಾರಾಮರಿಗೂ ತಮ್ಮೊಡನೆ ಯಾತ್ರೆಗೆ ಬರಲು ಆಗ್ರಹ ಮಾಡಿದರು. ತುಕಾರಾಮರು ಜನರ ಮನಸ್ಸನ್ನು ಎಂದೂ ನೋಯಿಸದವರು. ಅವರು ಸಾಧುಗಳ ಅಕ್ಕರೆಯ ಆಗ್ರಹವನ್ನು ತಪ್ಪಿಸಲಾರದಾದರು. ಆದರೂ ಒಂದು ಯುಕ್ತಿಯನ್ನು ಹೂಡಿದರು. ಮನೆಯಿಂದ ಒಂದು ಕುಂಬಳ ಕಾಯಿಯನ್ನು ತಂದು ತುಕಾರಾಮರು ಸಾಧುಗಳ ಕೈಗೆ ಒಪ್ಪಿಸಿದರು. 'ನನಗಂತೂ ಈ ಬಾರಿ ಯಾತ್ರೆಗೆ ಬರಲು ಸಮಯವಿಲ್ಲ. ಈ ಕುಂಬಳ ಕಾಯಿಯನ್ನೇ ನನ್ನ ಪ್ರತಿನಿಧಿ ಯಾಗಿ ತಿಳಿದು ಜೊತೆಗೆ ಒಯ್ಯಿರಿ. ಯಾವ ಯಾವ ತೀರ್ಥಗಳಲ್ಲಿ ನೀವು ಸ್ನಾನ ಮಾಡುವಿರೋ ಅಲ್ಲೆಲ್ಲ ಈ ನನ್ನ ಕುಂಬಳಕಾಯಿಯನ್ನೂ ಯಥಾವಿಧಿಯಾಗಿ ಸ್ನಾನ ಮಾಡಿಸಿರಿ. ಮರಳಿ ಬರುವಾಗ ಸಂಗಡ ತರಲು ತಪ್ಪಬೇಡಿರಿ. ಇದರಿಂದ ನಮಗೂ ಜ್ಞಾನ ಪ್ರಾಪ್ತಿ ಯಾದೀತು!' ಎಂದು ಬಿನ್ನವಿಸಿ ಸಾಧುಗಳನ್ನು ಬೀಳ್ಕೊಟ್ಟರು. ಸಾಧುಗಳು ಒಡಂಬಟ್ಟು ಯಾತ್ರೆಮಾಡುತ್ತ ಅನೇಕ ತೀರ್ಥಗಳನ್ನು ಸಂಚರಿಸತೊಡಗಿದರು. ಹೋದಲ್ಲೆಲ್ಲ ತಮ್ಮೊಂದಿಗೆ ತುಕಾರಾಮರ ಪ್ರತಿನಿಧಿ ಯನ್ನು (ಕುಂಬಳಕಾಯಿಯನ್ನು) ಯಥಾವಿಧಿಯಾಗಿ ಸ್ನಾನ ಮಾಡಿಸುತ್ತ ನಡೆದರು. ಯಾತ್ರೆ ಮುಗಿದ ಕೊನೆಗೊಮ್ಮೆ ಮರಳಿ ಬಂದರು.

ಜೊತೆಯಲ್ಲಿ ಒಯ್ದು ಜೋಕೆಯಿಂದ ತಿರುಗಿ ತಂದ ತೀರ್ಥೋದಕ ಸ್ನಾನ ಪೂತವಾದ ಆ ಕುಂಬಳಕಾಯಿಯನ್ನು ತುಕಾರಾಮರಿಗೆ ಒಪ್ಪಿಸಿದರು. ತುಕಾರಾಮರು ತಮ್ಮ ಸಮ್ಮುಖದಲ್ಲಿ ಇಟ್ಟ ಕುಂಬಳಕಾಯಿಯನ್ನು ಒಳ್ಳೇ ಸಮಾರಂಭ ದಿಂದ ಪೂಜಿಸಿದರು. ಆ ಮೇಲೆ ಅದರ ಹೋಳುಗಳನ್ನು ಮಾಡಿ ಬಂದ ಸಾಧು ಗಳಿಗೆಲ್ಲ ಹಂಚಿಕೊಟ್ಟರು. ಸಾಧುಗಳು ಭಕ್ತಿಭಾವದಿಂದ ಬಾಯಲ್ಲಿಟ್ಟ ಕೂಡಲೇ ಬಾಯೆಲ್ಲ ಕಹಿಯಾಗಿ ಕೆಟ್ಟು ಹೋಯಿತು. ತುಕಾರಾಮರು ನಕ್ಕು ಅಂದರು. 'ಎಲಾ! ಈ ಕುಂಬಳಕಾಯಿಯು ಇನ್ನೂ ಕಹಿಯೇ ಉಳಿಯಿತು ಹೇಗೆ? ನೂರಾರು ತೀರ್ಥಗಳ ಸ್ನಾನ, ಕ್ಷೇತ್ರ, ದೇವತೆಗಳ ದರ್ಶನ! ಇದರ ಮೇಲೆ ಸ್ವಲ್ಪವೂ ಇದೆಲ್ಲದರ ಪರಿಣಾಮವಾಗಲಿಲ್ಲವೇ? ಸ್ವಲ್ಪವೂ ಪರಿವರ್ತನೆ ಹೊಂದ ಲಿಲ್ಲವೇ ಕಾಯಿಯ ಸ್ವರೂಪ!'

ಸಾಧುಗಳು ಸಂಕೋಚದಿಂದ ತಲೆ ಕೆಳಗೆ ಹಾಕಿದರು.

## ೩. ಬುದ್ಧಿ ಬಂತು

ಒಂದು ಊರಲ್ಲಿ ಪ್ರಾಯಕ್ಕೆ ಬಂದ ಸಿರಿವಂತನಿದ್ದನು. ಅವನು ಚಿಕ್ಕಂದಿನಲ್ಲಿ ತನ್ನನ್ನು ಅಕ್ಕರೆಯಿಂದ ಸಾಕಿ ಸಲಹಿದ ತಂದೆ–ತಾಯಿಗಳ ಉಪಕಾರವನ್ನೇ

ಮರೆತು ಬಿಟ್ಟಿದ್ದನು. ಅವರನ್ನು ಕಂಡರೆ ಸೇರುತ್ತಿದ್ದಿಲ್ಲ. ತಂದೆಯು ಹೇಳುವ ಬುದ್ಧಿಯ ಮಾತುಗಳು ಅವನ ಮನಸ್ಸಿಗೆ ಹಿಡಿಯುತ್ತಿರಲೇ ಇಲ್ಲ; ಇಷ್ಟೇ ಅಲ್ಲ, ಅದರ ಬದಲು ತಂದೆಯು ಮನೆಯಲ್ಲಿದ್ದರೆ, ಮೇಲಿಂದ ಮೇಲೆ ಆತನ ಕಿಟಿಕಿಟಿಯು ತಪ್ಪುವದಿಲ್ಲೆಂದು ತಂದೆಯನ್ನು ಮನೆಬಿಟ್ಟು ಹೊರಗೆ ಹಾಕಿದ್ದನು. ಪಾಪ! ಮುದುಕನು ಭಿಕ್ಷೆ ಬೇಡುತ್ತ ಜೀವಿಸುತ್ತಿದ್ದನು.

ಮುದುಕನು ಒಂದು ದಿನ ತನ್ನ ಮೊಮ್ಮಗನನ್ನು ಕಂಡು "ಮಗು, ರಾತ್ರಿಯ ಕಾಲದಲ್ಲಿ ಬಹಳೇ ಚಳಿಯಾಗುತ್ತದೆ. ಕಾರಣ ನಿಮ್ಮ ಅಪ್ಪನನ್ನು ಕೇಳಿ ಒಂದು ಹಳೆಯ ದೋತರವನ್ನು ತಂದುಕೊಟ್ಟರೆ ನಿನಗೆ ಬಹಳೇ ಪುಣ್ಯ ಬರುತ್ತದಪ್ಪಾ" ಎಂದು ಅಂಗಲಾಚಿದನು! ಮೊಮ್ಮಗನು ಸಣ್ಣವನಿದ್ದರೂ ಬಹಳೇ ಜಾಣನಿದ್ದನು. ಅಜ್ಜನ ಸ್ಥಿತಿಯನ್ನು ನೋಡಿ ಅವನಿಗೆ ಕನಿಕರ ಬಂದಿತು. ತಂದೆಯ ನೀಚತನಕ್ಕೆ ಕೆಡಕೂ ಎನಿಸಿತು. ಕೂಡಲೇ ಮನೆಗೆ ಬಂದನು. ಒಂದು ಹಳೆಯ ದೋತರವನ್ನು ತಕ್ಕೊಂಡು ಅದನ್ನು ಸರಿಯಾಗಿ ಎರಡು ತುಂಡು ಮಾಡಿದನು. ಅದನ್ನು ನೋಡಿ ಆತನ ತಂದೆಯು "ಎಲೋ, ಆ ದೋತರವನ್ನೇಕೆ ಹರಿದಿ?" ಎಂದು ಕೇಳಿದನು. ಅದಕ್ಕೆ ಆ ಮಗುವು " ಅಜ್ಜನಿಗೆ ಹೊದ್ದುಕೊಳ್ಳಲಿಕ್ಕೆ ಏನೂ ಇಲ್ಲವಂತೆ. ಅದಕ್ಕಾಗಿ ಹರಿದೆನು" ಎಂದು ಹೇಳಿದನು. ಅದಕ್ಕೆ ತಂದೆಯು "ಹಾಗಿದ್ದರೆ ಅದನ್ನೇಕೆ ಹರಿಯಬೇಕಿತ್ತು? ಇಡಿಯ ದೋತರವನ್ನೇ ಕೊಡಬೇಕಿತ್ತು?" ಎಂದು ಪ್ರಶ್ನಿಸಲು ಆ ಹುಡುಗನು "ಅಪ್ಪಾ, ಇದರ ಒಂದು ತುಂಡನ್ನು ಮಾತ್ರ ಅಜ್ಜನಿಗೆ ಒಯ್ದು ಕೊಡುವೆನು. ಇನ್ನೊಂದನ್ನು ನನ್ನ ಹತ್ತರ ಇಟ್ಟುಕೊಳ್ಳುವೆನು" ಎಂದು ಉತ್ತರಿಸಿದನು. ಅದಕ್ಕೆ ತಂದೆಯು "ಮನೆಯಲ್ಲಿ ಬೇಕಾದಷ್ಟು ಹೊಸ ದೋತರಗಳಿವೆ; ನಿನಗೆ ಈ ಹಳೆಯ ತುಂಡಿನ ಉಪಯೋಗವೇನು?" ಎಂದು ವಿಸ್ಮಯದಿಂದಲೇ ಕೇಳಿದನು.

ಆಗ ಆ ಮಗನು ಹೀಗೆ ಹೇಳಿದನು, "ಅಪ್ಪಾ, ನಾನು ದೊಡ್ಡವನಾದ ಬಳಿಕ ನಿನ್ನನ್ನು ಹೊರಗೆ ಹಾಕಿದಾಗ ನಿನಗೆ ಹೊದ್ದುಕೊಳ್ಳಲು ಕೊಡಲಿಕ್ಕೆ ನಾನು ಆಗ ಎಲ್ಲಿಂದ ದೋತರ ತರಲಿ? ಅದಕ್ಕಾಗಿ ಈಗಿನಿಂದಲೇ ಅವನ್ನು ಕಾದಿಟ್ಟುಕೊಳ್ಳುವೆನು. ಈ ನನ್ನ ಮುಂಜಾಗ್ರತೆಯು ಒಳ್ಳೆಯದಲ್ಲವೆ?"

ತನ್ನ ಮಗನ ಈ ಮರ್ಮಭೇದಕ ಮಾತುಗಳನ್ನು ಕೇಳಿದ ಕೂಡಲೇ ಅವನಿಗೆ ತಾನು ಮಾಡಿದ ತಪ್ಪು ಹೊಳೆಯಿತು. ಆಗ ಆತನು ತನ್ನ ಮುಪ್ಪಿನ ತಂದೆಯ ಹತ್ತರ ಹೋಗಿ ಅವನ ಕಾಲಿಗೆ ಬಿದ್ದನು. ತನ್ನ ತಪ್ಪಿಗಾಗಿ ಕ್ಷಮೆಬೇಡಿ ಮನೆಗೆ ಕರಕೊಂಡು ಬಂದು ಭಕ್ತಿಯಿಂದ ಆತನ ಸೇವೆ ಮಾಡಹತ್ತಿದನು.

## ೪. ಎರಡು ಗೂಗೆಗಳು

ಹಿಂದಕ್ಕೆ ಒಬ್ಬ ಒಳ್ಳೆಯ ಕುಶಲನಾದ ಮಂತ್ರಿಯು ತನ್ನ ಒಡೆಯನಿಗೆ ಒಂದು ಮನೋಹರವಾದ ಕಥೆಯನ್ನು ಹೇಳಿದನು. ಅದೇನೆಂದರೆ—

ಬಸ್ರಾ ಪಟ್ಟಣದಲ್ಲಿ ಒಂದು ಮತ್ತು ಮೋಸಲ ಪಟ್ಟಣದಲ್ಲಿ ಒಂದು, ಹೀಗೆ ಎರಡು ಗೂಗೆಗಳಿದ್ದವು. ಬಸ್ರಾ ಗೂಗೆಯು ಮೋಸಲ ಗೂಗೆಗೆ ಅವಳ ಮಗಳನ್ನು ತನ್ನ ಮಗನಿಗೆ ಮದುವೆ ಮಾಡಿಕೊಡು ಎಂದು ಕೇಳಿತು.

ಮೋಸಲ ಗೂಗೆಯು ನೀನು ಒಂದು ನೂರು ಹಾಳಾದ ಹಳ್ಳಿಗಳನ್ನು ನನ್ನ ಮಗಳ ಕನ್ಯಾದಕ್ಷಿಣೆಯೆಂದು ಕೊಡಲು ಒಪ್ಪಿದರೆ ನಾನು ಸಿದ್ಧನೆಂದು ಹೇಳಿತು.

ಬಸ್ರಾ ಗೂಗೆಯು ನಾನು ಈಗಲೇ ಏನನ್ನೂ ಹೇಳಲಾರೆ. ದೇವರು ಇನ್ನೊಂದು ವರ್ಷದ ವರೆಗೆ ನನ್ನ ಅರಸನನ್ನು ಉಳಿಸಿದರೆ ಆಗ ನಾನು ನೀನು ಹೇಳಿದ್ದೆಲ್ಲವನ್ನೂ ಮಾಡಲು ಒಪ್ಪುವೆನು ಎಂದು ನುಡಿಯಿತು.



## ೧. ಕರ್ನಾಟಕದ ಸಿರಿ

[ ಕರ್ನಾಟಕ ದೇಶವನ್ನು ಹಲವಾರು ಕನ್ನಡ ಕವಿಗಳು ವರ್ಣಿಸಿದ್ದಾರೆ. ನೃಪತುಂಗ, ಪಂಪ ಕವಿಗಳಂತೂ— ಮನಸಾರೆ ಮೆಚ್ಚಿ ಕನ್ನಡ ದೇಶವನ್ನು ವರ್ಣಿಸಿರುವರು. ಕವಿ ಆಂಡಯ್ಯನೂ ಅಂತೆಯೇ ಕವಿ ನಂಜುಂಡಯ್ಯನೂ ಕನ್ನಡ ದೇಶದ ಹೆಮ್ಮೆಯನ್ನು ಹೊಗಳಿದ್ದಾರೆ. ಇಲ್ಲಿ ಕವಿ ನಂಜುಂಡಯ್ಯನ ಕರ್ನಾಟಕ ದೇಶದ ವರ್ಣನೆಯನ್ನು ನೀವು ಓದುವಿರಿ. ಆಗಿನ ಕಾಲದ ಕನ್ನಡ ದೇಶದ ಸೊಬಗನ್ನು ಕೇಳಿ ನೀವು ಹರ್ಷ ಪಡಬಹುದು. ]

● ●

ಕಾವೇರಿಯಿಂದ ಗೋದಾವರಿವರೆಗಮು । ರ್ವೀವಸುಧಾತಳದೊಳಯು
ಭಾವಿಸೆ ಕರ್ನಾಟಕ ಜನಪದ ವಪ । ನಾವನೊಲಿದು ಬಣ್ಣಿಸುವನು

ಭೂರಮೆಯುಟ್ಟಿಲ್ಲವಿಟ್ಟ ದುಕೂಲದ । ಸೀರೆಗಳಂತೆ ಕರ್ಣಾಟದ
ಭೂರಿನದಿಗಳಾಕರ್ಣಾಟಭೂಮಿಯೊ । ಳೋರಂತೆ ಪರಿದೆಸೆದಿರುವುದು ॥೧॥

ಸುರಗಿ–ಸಂಪಗೆ ಸುರಹೊನ್ನೆಗಳಲರ್ವುಡಿ । ವೆರಸಿ ನಲವಿನಿಂದ ಪರಿವ
ಪರಿಕಾಲ್ಗಳಾವಪೊನಲಲ್ಲಿ ಕುಂಕುಮರಸ । ಲೆರವೆನಂದಿಹುದು ನೋಳ್ಪರಿಗೆ ॥೩॥

ನಾರಿಕೇಳಾಮ್ರಪನಸ ಕದಳಿ ಖ । ರ್ಜೂರ ಚಂಪಕ ಚಂದನಗಳ
ಆರಾಮದಿಂದ ರಂಜಿಸುತೀವುದು ಕಣ್ಗೆ । ಪಾರಣೆಯ ಸುಪಾಂಥಜನದ ॥೪॥

ನಡೆವಕ್ಕಿ–ನುಡಿವಕ್ಕಿ–ಪೊಳವಕ್ಕಿ–ಪೊಣರ್ವಕ್ಕಿ । ಪಡಿಯರವಕ್ಕಿ ಕೇಳಿಸುವ
ಗೆಡೆವಕ್ಕಿ–ಗರಿಗಣ್ವಕ್ಕಿಗಳಾನೆಲ । ದೆಡೆಯ ಬನದೊಳಿರುತಿಹುದು ॥೫॥

ಆಡುವರಿಲ್ಲನೃತವನಾಜಿರಂಗದೊ । ಳೋಡುವರಿಲ್ಲೆರೆದುದನು
ಕೂಡೆ ಕೊಡದರಿಲ್ಲಾ ನಾಡ ಮನುಜರ । ಗಾಡಿಯನೇನ ಬಣ್ಣಿಪೆನು ॥೬॥

—ನಂಜುಂಡಕವಿ

**ಶಬ್ದಾರ್ಥ:**

ವಸುಧಾ – ಭೂಮಿ; ಜನಪದ – ಜನಾಂಗ; ದುಕೂಲದ – ರೇಶಿಮೆಯ; ಭೂರಿ – ದೊಡ್ಡ; ಕಾಲ್ – ಕಾಲುವೆ; ಅಲರ್ – ಹೂ; ಆರಾಮ – ತೋಟ; ಪಾರಣೆ– ಊಟ; ಅನೃತ – ಸುಳ್ಳು, ಅಸತ್ಯ; ಎರೆ – ಬೇಡು; ಗಾಡಿ – ಸೊಬಗು.

**ಪ್ರಶ್ನೆ:**

೧. ಕರ್ನಾಟಕವು ಎಲ್ಲಿಂದ ಎಲ್ಲಿಯ ವರೆಗೆ ಹಬ್ಬಿತ್ತು ?
೨. ಅಲ್ಲಿಯ ನದಿಗಳು ಹೇಗೆ ಕಾಣುತ್ತಿದ್ದವು ?
೩. ಕರ್ನಾಟಕದಲ್ಲಿ ಹರಿಯುವ ಕಾಲುವೆಗಳನ್ನು ಕವಿಯು ಹೇಗೆ ವರ್ಣಿಸಿದ್ದಾನೆ ?
೪. ಈ ಕರ್ನಾಟಕ ದೇಶದಲ್ಲಿ ಯಾವ ಯಾವ ಗಿಡಗಳು ಶೋಭಿಸುತ್ತಿದ್ದವು ?
೫. ಅಲ್ಲಿ ಯಾವ ಯಾವ ಹಕ್ಕಿಗಳು ವಾಸವಾಗಿದ್ದವು ?
೬. ಕರ್ನಾಟಕ ದೇಶದ ಸೌಂದರ್ಯವನ್ನು ವರ್ಣಿಸು.

**ಬರೆಹ:**

೧. ನಿಮ್ಮೂರ ಹಳ್ಳದ ದಂಡೆಯ ಶೋಭೆಯನ್ನು ಕುರಿತು ಬರೆಯಿರಿ.
೨. ನೀವು ನೋಡಿದ ಉದ್ಯಾನದ ವರ್ಣನೆ ಮಾಡಿರಿ.



# ೨. ವಸಂತ ಮುಖ

[ ವಸಂತ, ಋತುಗಳ ರಾಜ ಎಂದು ಹೆಸರು ಪಡೆದಿರುವನು. ವಸಂತಮಾಸದಲ್ಲಿ ಸೃಷ್ಟಿ ನವಯುವತಿಯಾಗುತ್ತಾಳೆ. ಬಣ್ಣ ಬಣ್ಣದ ಸೀರೆ ಕುಪ್ಪಸ ತೊಟ್ಟುಕೊಂಡು, ಹೊಸ ಆಭರಣಗಳನ್ನು ಇಟ್ಟುಕೊಂಡು ಕುಣಿಯುತ್ತ ಬರುತ್ತಾಳೆ. ಆ ಸೃಷ್ಟಿಯ ಸೊಬಗನ್ನು ನಾವೆಲ್ಲ ಕಣ್ಣಾರೆ ಕಂಡಿದ್ದೇವೆ. ಆದರೂ ಕವಿಯ ಕಣ್ಣಿನಲ್ಲಿ ಅದೇ ಚೆಲುವು, ಹೊಸ ಜೀವ ಪಡೆಯುತ್ತದೆ. ದ. ರಾ. ಬೇಂದ್ರೆಯವರು (ಕಾವ್ಯನಾಮ ಅಂಬಿಕಾತನಯದತ್ತ) ಕವಿವರ್ಯರು. ವಸಂತಮಾಸದಲ್ಲಿ ಅವರ ಅಂತರಾಳದಲ್ಲಿ ಉಕ್ಕಿಬಂದ ಆನಂದ ಈ ಕವನದಲ್ಲಿ ಒಡಮೂಡಿದೆ. ಆನಂದಕ್ಕೆ ತಕ್ಕಂತೆ ಭಾವಗೀತೆಯಲ್ಲಿ ಸಾಲುಗಳ ಓಟವಿದೆ. ಅಂತೆಯೇ ಈ ಗೀತೆಯನ್ನು ಸರಾಗವಾಗಿ ಹಾಡಬಹುದು; ಹಾಡಿ ಕುಣಿಯಬಹುದು. ]

ಉದಿತ ದಿನ ! ಮುದಿತ ವನ
ವಿಧವಿಧ ವಿಹಗಸ್ವನ
ಇದುವೆ ಜೀವ, ಇದು ಜೀವನ
ಪವನದಂತೆ ಪಾವನ

ಏನೊ ವಿಧ ! ಏನೊ ಹದ
ಗಾಳಿಗೊಡೆದ ಬುದ್ಬುದ
ಬೆಳಕೆ ಬದುಕು ಎಂಬ ಮುದ
ಜೀವಹೊಮ್ಮಿ ಚಿಮ್ಮಿದ

ನೂರು ಮರ ! ನೂರು ಸ್ವರ
ಒಂದೊಂದು ಅತಿ ಮಧುರ
ಬಂಧವಿರದ ಬಂಧುರ
ಸ್ವಚ್ಛಂದ—ಸುಂದರ

—ಅಂಬಿಕಾತನಯದತ್ತ

**ಶಬ್ದಾರ್ಥ:**

ವಿಹಗ - ಪಕ್ಷಿ; ಪವನ – ಗಾಳಿ; ಹದ – ಪೂರ್ಣತೆ ಪಡೆದದ್ದು; ಬುದ್ಬುದ - ತರಂಗ; ಹೊಮ್ಮಿ – ಹೊರಚಿಮ್ಮಿ ; ಬಂಧುರ – ಚೆಲುವು.

**ಪ್ರಶ್ನೆ:**

೧. ದಿನವು ಉದಯವಾದ ಕೂಡಲೇ ಏನು ಕಾಣುವುದು ?
ಜೀವನವು ಹೇಗೆ ಪಾವನವಾಗಿದೆ ?

೩. ಎಲ್ಲೆಡೆಗೂ ಹೊಮ್ಮಿ ಬಂದ ಬೆಳಕನ್ನು ಕವಿ ಹೇಗೆ ವರ್ಣಿಸಿದ್ದಾನೆ ?
೪. ನೋಟವು ಬಂಧುರ ಹೇಗೆ ಆಗಿದೆ ?
೫. 'ವಸಂತಮುಖ' ಎಂದು ಕವನಕ್ಕೆ ಏಕೆ ಹೆಸರು ಕೊಟ್ಟಿದೆ.

**ಬರೆಹ:**

೧. ಕೆಳಗಿನ ವಾಕ್ಯಗಳಲ್ಲಿಯ ವಿಚಾರಗಳನ್ನು ಸ್ಪಷ್ಟವಾಗಿ ತಿಳಿದುಕೊಂಡು, ನಿಮ್ಮ ಮಾತುಗಳಲ್ಲಿ ಬರೆಯಿರಿ.
(ಅ) ಪವನದಂತೆ ಪಾವನ
(ಬ) ಗಾಳಿಗೊಡೆದ ಬುದ್ಬುದ
೨. ವಸಂತ ಋತುವಿನ ವರ್ಣನೆಯನ್ನು ನಿಮ್ಮ ವಾಕ್ಯಗಳಲ್ಲಿ ಬರೆಯಿರಿ.



# ೩. ಚಂಡಿ ಕಲ್ಲಾದಳು

[ ಕರ್ನಾಟಕ ಕವಿಚೂತ ವನ ಚೈತ್ರನೆಂದು ಕರೆಯಿಸಿಕೊಳ್ಳುವ ಲಕ್ಷ್ಮೀಶನ ಜೈಮಿನಿ ಭಾರತವನ್ನು ಓದದವರು ವಿರಳ, ಕೇಳದವರಂತೂ ತೀರ ವಿರಳ ಎಂದೇ ಹೇಳಬಹುದು. ಲಕ್ಷ್ಮೀಶನು ನಾದಲೋಲ. ಆತನ ಷಟ್ಪದಿಯ ಝೇಂಕಾರ ಅಷ್ಟು ಮನಸ್ಸನ್ನಾಕರ್ಷಿಸಿಕೊಳ್ಳುವಂತಹದು. ಆತನು ಹಾಸ್ಯಗಾರನೂ ಅಹುದು. ಇಲ್ಲಿ ಚಂಡಿಯ ಕತೆಯಲ್ಲಿ ಬ್ರಾಹ್ಮಣನ ಸಂಕಟವನ್ನು— ಚಂಡಿಯ ಚಂಡಿತನವನ್ನು ಓದಿ, ನಕ್ಕು ವಿಷಾದಪಡದವರುಂಟೆ ?

• • •

ಆಲಿಸರ್ಜುನ ಮುನ್ನ ವಿಪ್ರನುಂಟೊರ್ವನು
ದ್ದಾಲಕಾಖ್ಯಂ ತಿಳಿದನಖಿಳ ಶಾಸ್ತ್ರಂಗಳಂ
ಮೇಲೆ ವೈವಾಹದೊಳ್ವಧುವಾದಳಾತಂಗೆ ಚಂಡಿಯೆಂಬಾಕೆ ಬಳಿಕ |
ಕಾಲಕಾಲದ ಜಪಾನುಷ್ಠಾನ ಪೂಜೆಗಳಿ
ಗಾಲಸ್ಯಮಂ ಮಾಡದೆನ್ನ ಪರಿಚರ್ಯೆಗನು
ಕೂಲೆಯಾಗಿರ್ದು ಮನೆವಾಳ್ತೆಯಂ ಸಾಗಿಪುದು
ನೀನೆಂದೊಡಿಂತೆಂದಳು ||೧||

ಎಳ್ಳಿನಿತು ನಿನ್ನ ಮಾತಂ ಕೇಳ್ವಳೆಂದೆಣಿಕೆ
ಗೊಳ್ಳದಿರ್ ಪರಿಚರ್ಯೆ ಮನೆವಾಳ್ತೆಯೆಂದೆಂಬ
ತಳ್ಳಿಯವಳಲ್ಲ ನೀನೆಂದುದಂ ಮಾಡೆನೆಂದಾ ಚಂಡಿ ಚಂಡಿದೋರೆ |
ಮುಳ್ಳಿಡಿದ ಮರನೇರಿದಂತಾದುದಿಹ ಪರಕೆ
ದೊಳ್ಳಿತಾದಪುದೆ ಬಂದುದು ತಪೋಹಾನಿಯೆಂ
ದಳ್ಳೆಯೊಳ್ಕೋಲ್ಗೊಂಡ ತೆರದೊಳುದ್ದಾಲಕಂ ಚಿಂತಿಪಂ ಪ್ರತಿದಿನದೊಳು ||೨||

ಇಂತಿರುತಿರಲ್ಕೆ ಕೌಂಡಿಣ್ಯನೆಂಬೊರ್ವ ಮುನಿ
ಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ
ಚಿಂತೆವೆತ್ತಿರಲವನಿದೇನೆಂದು ಬೆಸಗೊಂಡೊಡವಳ ಪ್ರತಿಕೂಲತೆಯನು
ಅಂತರಿಸದೆಲ್ಲಮಂ ಪೇಳ್ದೊಡವನಿದಕೆ ನೀಂ
ಮುಂತೆ ವಿಪರೀತಮಂ ಮಾಡಲಾದಪುದೆಂದು
ಸಂತಾಪಮಂ ಬಿಡಿಸಿ ಬೀಳ್ಕೊಂಡವಂ ತೀರ್ಥಯಾತ್ರೆಗೈದಿದನಿತ್ತಲು



ಉದ್ದಾಲಕಂ ಬಳಿಕ ತನ್ನ ಮಂದಿರದೊಳಿರು
ತಿಪ್ಪ ಸಮಯಕೆ ಪಿತೃಶ್ರಾದ್ಧದಿವಸಂ ಬಂದೊ
ದೆದ್ದು ಚಂಡಿಯೊಳಿಲಿಗೆ ನಾಳೆ ಪೈತೃಕಮದಂ ನಾಡಿದಲ್ಲದೆ ಮಾಡೆನು ।
ಕದ್ದು ತಹೆನಧಮಧಾನ್ಯವ್ರೀಹಿ ಶಾಕಮಂ
ಪೊದ್ದಲೀಯೆಂ ಶುದ್ಧವಸ್ತುಗಳನೊಂದುಮಂ
ತದ್ದಿನಕೆ ಮರುದಿವಸದೊಳ್ಪೇಳ್ದು ಬಹೆನಪಾತ್ರಂಗೆಂದೊಡಿತೆಂದವಳು ॥೪॥

ನಾಳೆ ಮಾಡಿಸುವೆನಾಂ ಪೈತೃಕವನುತ್ತಮದ
ಶಾಲಿಧಾನ್ಯವ್ರೀಹಿಶಾಕಮಂ ಕೊಂಡುಬಹೆ
ನಾಲಯವನತಿಶುದ್ಧವಾದ ವಸ್ತುಗಳನಲ್ಲದೆ ಕೊಡೆನಕ್ಕಿಯಿಂದೆ ।
ಪೇಳಿಸುವೆನಂದಿನ ದಿನದ ಮೊದಲ ರಾತ್ರಿಯೆ ವಿ
ಶಾಲಗುಣಸಂಪನ್ನ ವೇದಪಾರಂಗತ ಸು
ಶೀಲರಹ ಸತ್ಪಾತ್ರದವನಿಯಮರರ್ಗೆನಲ್ ಚಂಡಿಗವನಿಂತೆಂದನು ॥೫॥

ಆದೊಡೆ ಕುತುಪಕಾಲಮಂ ಬಿಡುವೆನರ್ಜನೆಯೊ
ಳಾದರಿಸೆನಾಂ ಬಂದ ವಿಪ್ರರಂ ಪಾಕದ ನ
ವೋದನಸುಪಾಯಸಗುಡಾಜ್ಯಮಧು ತೈಲ ಮೃದು ಭಕ್ಷ್ಯಭೋಜ್ಯಾದಿಗಳನು |
ಸ್ವಾದುಫಲ ಶರ್ಕರೆ ವಿನುತಶಾಕ ನಿರ್ಮಲ ಪ
ಯೋಪಧಿಗಳಂ ನಕುತ್ಸಿತಮಾಗದಂತೆ ಸಂ
ಪಾದಿಸಿ ಪಿತೃಶ್ರಾದ್ಧಮಂ ಮಾಡಿ ವಸ್ತ್ರದಕ್ಷಿಣೆಗಳಂ ಕೊಡೆನೆಂದನು ||೬||

ಎಂದೊಡೆ ಕುತುಪಕಾಲಮಂ ಮೀರಲೀಯೆನಾಂ
ಬಂದ ವಿಪ್ರರನಾದರಿಸಿ ಪೂಜೆಗೈಯದಿರೆ
ನಿಂದೊಲ್ಲೆನೆಂದು ಪೊಕ್ಕಣಿಸಿದನಿತೆಲ್ಲಮಂ ಸಂಪಾದಿಸಿದೆ ನೋಡೆನು |
ತಂಪಮಲವಸ್ತ್ರ ತಾಂಬೂಲ ವರದಕ್ಷಿಣೆಗ
ಳಿಂದೆ ಸತ್ಕರಿಸಿ ಕಳುಹಿಸದೆ ಬಿಡೆನೆನುತ ನಲ
ವಿಂದೊದವಿಸಿರ್ದಖಿಳಸದ್ದ್ರವ್ಯಮಂ ಬಳಿಕ ಚಂಡಿ ಪಾಕಂಗೈದಳು ||೭||

ಕಂಡನೀ ತೆರನನುದ್ದಾಲಕಂ ಸಂತಸಂ
ಗೊಂಡು ಮನದೊಳ್ ಪೊರಗೆ ತಾನೊಪ್ಪದವನಾಗಿ
ಚಂಡಿಪೇಳಿದವೊಲಾ ಶ್ರಾದ್ಧಮಂ ಮಾಡಿ ಸಂಪ್ರೀತಿಯಿಂ ವಿಪರೀತದ |
ತೊಂಡುತೊಳಸಂ ಮರೆದು ಕರ್ಮಾಂಗಮಾಗಿರ್ದ
ಪಿಂಡಮಂ ತೆಗೆದು ಮಡುವಿನೊಳಿ ಹಾಯ್ಕೆಂದೊಡು
ದ್ದಂಡದಿಂದೆತ್ತಿ ಬೀದಿಗೆ ಬಿಸುಡಲಾ ದ್ವಿಜಂ ರೋಷಭೀಷಣನಾದನು ||೮||

ಎಲೆಗೆ ನಿನ್ನೊಡನೆ ನಾನೇಂ ಪರಿಯ ಹೋರುವೆಂ
ಛಲತನಕಲಸಿದೆ ನೀನರೆಯಾಗಿ ಹೋಗೆಂದು
ಸಲೆ ಮುಳಿದು ಶಾಪಮಂ ಕೊಟ್ಟು ಕಾರುಣ್ಯದಿಂದಾ ದ್ವಿಜಂ ಕೂಡೆ ತಿಳಿದು |
ಕೆಲವು ಕಾಲಕೆ ನಿನ್ನೊಳಧ್ವರಹಯಂ ಬಂದು
ನಿಲಲರ್ಜುನಂ ಬಿಡಿಸಿದೊಡೆ ಮೋಕ್ಷಮಹುದೆಂದು
ತೊಲಗಿದಂ ಸನ್ಯಾಸಕವನತ್ತಲವನಿಯೊಳ್ಕಲ್ಲಾದಳಿವಳಿತ್ತಲ್

—ಲಕ್ಷ್ಮೀಶ

**ಶಬ್ದಾರ್ಥ:**

ಮುನ್ನ–ಮೊದಲು; ವಿಪ್ರ–ಬ್ರಾಹ್ಮಣ; ಧರಣಿ ಭೂಮಿ; ಪರಿಚರ್ಯೆ–ಸೇವೆ; ಅಳ್ಕೆ–ಪಕ್ಕೆ; ಕುತುಪಕಾಲ–ಶ್ರಾದ್ಧದ ವೇಳೆ; ಅಂತರಿಸದೆ–ಮುಂದೂಡದೆ; ವಿಪರೀತ–ವಿರುದ್ಧ; ಬೀಳ್ಕೊಳ್ಳು–ಕಳಿಸು; ವ್ರೀಹಿ–ಬತ್ತ; ತೊಳಸು–ತೊಡಕು; ಹೋರು–ಬಡಿದಾಡು; ಅಲಸು–ಬೇಸರು; ಅಧ್ವರ–ಯಜ್ಞ.

ಪ್ರಶ್ನೆ:

೧. ಉದ್ದಾಲಕನು ಎಂಥ ಬ್ರಾಹ್ಮಣನು ?
೨. ಮದುವೆಯಾದಮೇಲೆ ಆತನು ತನ್ನ ಹೆಂಡತಿಗೆ ಏನು ಮಾಡಲು ಹೇಳುತ್ತಾನೆ ?
೩. ಚಂಡಿಯು ಅವನಿಗೆ ಉತ್ತರ ಹೇಗೆ ಕೊಡುತ್ತಾಳೆ ?
೪. ಉದ್ದಾಲಕನು ಯಾಕೆ ಚಿಂತಿಸುತ್ತಾನೆ ?
೫. ಕೌಂಡಿಣ್ಯ ಋಷಿಯು ಉದ್ದಾಲಕನಿಗೆ ಏನು ಹೇಳಿಕೊಡುತ್ತಾನೆ ?
೬. ತಂದೆಯ ಶ್ರಾದ್ಧದ ದಿನ ಉದ್ದಾಲಕನು ಚಂಡಿಯಕಡೆಯಿಂದ ಕೆಲಸ ಹೇಗೆ ಹೇಗೆ ಮಾಡಿಸುತ್ತಾನೆ ? ಕೊನೆಗೆ ಉದ್ದಾಲಕನು ಯಾಕೆ ಶಾಪ ಕೊಡುತ್ತಾನೆ ?

ಬರೆಹ:

೧. ' ಹಟಮಾರಿತನವು ಕೆಟ್ಟದ್ದು ' ಎಂಬ ವಿಚಾರವನ್ನು ಹದಿನೈದು ಸಾಲುಗಳಲ್ಲಿ ಬರೆಯಿರಿ.
೨. ಚಂಡಿಯ ಕಥೆ ಬರೆಯಿರಿ.



# ೪. ದಿವ್ಯಜ್ಯೋತಿ

[ ಮಹಾತ್ಮಾ ಗಾಂಧಿಯವರು ಜಗತ್ತಿನಲ್ಲಿಯ ಮಹಾಪುರುಷರು; ದೇವರ ಅವತಾರವನ್ನು ತಾಳಿದಂಥವರು. ಮಾನವನ ಕಲ್ಯಾಣಕ್ಕಾಗಿ ಹಗಲು ರಾತ್ರಿ ಹೋರಾಡಿದಂಥವರು. ಅವರ ಜೀವನವೆಂದರೆ ಬೆಳಕು; ದಿವ್ಯವಾದ ಬೆಳಕು ! ಆ ದಿವ್ಯ ಬೆಳಕು ನಮಗಿನ್ನೂ ದಾರಿ ತೋರುತ್ತಿದೆ. ಎಳೆಯ ಮಕ್ಕಳು ಅಂಥ ದಿವ್ಯ ಬೆಳಕಿನಲ್ಲಿ ತಮ್ಮ ಮುಂದಿನ ಬಾಳನ್ನು ರೂಪಿಸಿಕೊಳ್ಳಲಿ ]

ತಿಳಿ ನೀಲದಲ್ಲಿ ತಾ ಲೀನವಾಗಿ ಅವ ಹೋದ ದೂರ ದೂರ
ಬೆಳಗಿಹುದು ಇಲ್ಲಿ ಅವ ಬಿಟ್ಟ ಬೆಳಕು; ಇನ್ನೊಮ್ಮೆ ಏಕೆ ಬಾರ ?

ಅಂದು ಸಂಜೆ ಪ್ರಾರ್ಥನೆಗೆ ದೇವಮಂದಿರದ ದಾರಿಯಲ್ಲಿ
ಆಚೆ ಈಚೆ ಮೊಮ್ಮಕ್ಕಳಿಬ್ಬರಲಿ ಮೈಯ ಭಾರ ಚೆಲ್ಲಿ
ಜಗದ ಕರುಣೆ ನಡೆವಂತೆ ನಡೆದು ಮಂದಿರದ ಪೀಠವೇರಿ
ನಿಂದನಿಲ್ಲೊ ! — ಜಡವುಳಿದು ಜೀವವೊಂದಾಯ್ತು ದೇವನಲ್ಲಿ.

ಎಸೆದ ಗುಂಡಿಗಾ ಕುಸಿದ ದೇಹದಲಿ ವಿಮಲ ರಕ್ತ ಚೆಲ್ಲಿ
ಮೀಯಿಸಿತ್ತು ಈ ಜಗದ ಮನವನೇ ಶೋಕಜಲಧಿಯಲ್ಲಿ
ಮುಗಿದ ಕೈಯು ಮುಗಿದಂತೆ ಇತ್ತು! ನೆಲಸಿತ್ತು ಕ್ಷಮೆಯು ಮೊಗದಿ
ಎದೆಯೊಳೆಂಥ ತಿಳಿಭಾವವಿತ್ತು ! ಅದನಾವಬಲ್ಲ ಜಗದಿ

ಹೋದ ಹೋದನವ ತ್ಯಾಗಜೀವನದ ತುತ್ತ ತುದಿಯನೇರಿ
ಏರಿ ಏರಿದೊಲು ಅಂತರಂಗದೈಸಿರಿಯು ಜಗಕೆ ತೂರಿ
ಸತ್ಯ ಪ್ರೇಮಗಳ ನತ್ವವನ್ನೆ ಕಣ್ಣೆದುರು ಎತ್ತಿ ತೋರಿ
ಬೇರೆ ಲೋಕದನುಭಾವ ಬೀರಿ ಅವ ಹೋದನಾವ ದಾರಿ ?
ಎನಿತು ಸರಳ ನುಡಿ, ಎಷ್ಟು ಸಹಜ ನಡೆ, ಮನದ ಮಹತಿಯೇನು !
ಅವನ ಎದೆಯ ಉನ್ನತಿಯ ನಿಲುಕುವುದು ಯಾವ ಗಿರಿಯ ಸಾನು ?
ಇಹುದೆ ಅವನ ಕರುಣೆಯನು ಧರೆಗೆ ಕರೆವಂಥ ಕಾಮಧೇನು ?
ಅವನು ಗೈದ ಲೀಲೆಯಲಿ ಲಯಿಸಿತೆಂಥವರ "ನಾನು-ನಾನು".
ತಿಳಿದಿಹುದು ಚಿತ್ತ, ಹರಿದಿಹುದು ನೋಟ ಮೇಲಕ್ಕೆ ಬಾನಿನೆಡೆಗೆ
ಆ ಜಾಡ ಹಿಡಿದು ಇಳಿದಂತೆ ಇಹುದು ಬೆಳಕೊಂದು ಕೆಳಗೆ ಇಳೆಗೆ
'ಏನೆಷ್ಟು ಭ್ರಾಂತಿ? ಕಾಣದೆಯೆ ಜ್ಯೋತಿ?' ಎಂಬರಹು ಮೂಡಲೊಡನೆ
ಆ ಬೆಳಕ ನಂಬಿ ನಿಂದಿಹನು ಧೀರ ಎದೆ ತೆರೆದು ನಾವ ಕರೆಗೆ.

—ದಿ. ಎಸ್. ಕರ್ಕಿ

**ಶಬ್ದಾರ್ಥ:**

ಜಡವಳಿದು– ದೇಹವು ನಾಶವಾಗಿ; ಎಸೆ– ಒಗೆ; ವಿಮಲ– ಪವಿತ್ರ; ಮೀಯು– ಸ್ನಾನಮಾಡು; ಐಸಿರಿ– ವೈಭವ; ಮಹತಿ– ಘನತೆ; ಲಯಿಸು– ನಾಶವಾಗು, ಇಲ್ಲದಾಗು.

**ಪ್ರಶ್ನೆ:**

೧. ಮೊದಲಿನೆರಡು ಸಾಲುಗಳಲ್ಲಿ ಕವಿಯು ಏನು ಹೇಳುತ್ತಾನೆ ?
೨. ಪ್ರಾರ್ಥನೆಗೆ ಗಾಂಧೀಜಿಯವರು ಹೇಗೆ ಹೊರಟಿದ್ದರು ?
೩. ಗಾಂಧೀಜಿಯವರು ಮೃತರಾದ ಕೂಡಲೆ ಜಗತ್ತಿನ ಸ್ಥಿತಿ ಹೇಗಾಯಿತು ?
೪. ಮೃತರಾದಾಗಲೂ ಗಾಂಧೀಜಿಯವರು ಹೇಗೆ ಕಂಡರು ?
೫. ಗಾಂಧೀಜಿಯವರ ಘನತೆಯನ್ನು ವರ್ಣಿಸಿರಿ.
೬. ದಿವ್ಯಜ್ಯೋತಿ ಹೇಗೆ ಕಾಣುವದು ?

**ಬರೆಹ:**

'ಮಕ್ಕಳ ಗಾಂಧೀಜಿ' ಎಂಬ ವಿಷಯಕ್ಕೆ ೧೫ ಸಾಲು ಬರೆಯಿರಿ.



# ೫. ಮಾಯೆ ಮೆರೆದಳು ಬಾಲಲೀಲೆಯಲಿ

[ಚಾಮರಸನು ಒಳ್ಳೇ ಶ್ರೇಷ್ಠ ಕನ್ನಡ ಕವಿಗಳಲ್ಲೊಬ್ಬ. ಈತನು ಪ್ರಭುಲಿಂಗ ಲೀಲೆಯನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿದ್ದಾನೆ. ಕಥೆಯು ಕಾವ್ಯದ ರಭಸದಲ್ಲಿ ಸಿಕ್ಕು, 'ಪ್ರಭುವಿನ ಲೀಲೆಯನ್ನು' ಇನ್ನೂ ಹೆಚ್ಚಿಸುತ್ತದೆ! ವೀರಶೈವ ಅನುಭಾವಿಗಳಲ್ಲಿ ಪ್ರಭುವಿಗೆ ದೊಡ್ಡ ಸ್ಥಾನವಿದೆ. ಆತನು ಶಿವನ ಸ್ವರೂಪನೆಂದೇ ಹೇಳುವರು. ಈ ಭಾಗದಲ್ಲಿ ಮಾಯಾದೇವಿಯು ಮೃತ್ಯುಲೋಕದಲ್ಲಿ ಬೆಳೆಯುತ್ತಿರುವ ಕಥೆಯು ಬಂದಿದೆ. ಅವಳ ಲೀಲೆಯನ್ನು ನೀವು ಇಲ್ಲಿ ಕಾಣುವಿರಿ.]

ಶಿಶುವ ನೋಡಿದ ಕಣ್ಗೆ ಮಾಯುವೆ
ಮುಸುಕುವದು ಮನ ಮೆಚ್ಚುವುದು ಮೋ
ಹಿಸುವುದೀ ಪರಿ ಜನನಿ ಜನಕಾದ್ಯರುಗಳೆಲ್ಲರಿಗೆ।
ವಸುಮತೀ ಪತಿ ಬಳಿಕ ಲತಿ ಸಂ
ತಸದೊಳಾತ್ಮಜೆಗಖಿಳ ವಿಭವದಿ
ಹೆಸರನಿಟ್ಟನು ಮಾಯೆಯೆಂಬ ನವೀನ ನಾಮವನು ॥೧॥

ಹಲಗೆ ಮಾಣಿಕದೊಟ್ಟಲಲಿ ಮ
ಗ್ಗುಲಿಸಿ ಮಲಗಿ ನಿರೀಕ್ಷಿಸುತ ಮಾ
ರ್ಪೊಳೆವ ತನ್ನನೆ ಕಂಡು ನಲಿವುತ ನಗುತ ಕೈದುಡುಕಿ।
ಸೆಳೆಮು ತೆಗೆದೆಡೆ ಬಾರದಿರಲಾ
ನೆಳಲನೊದೆವುತ ಕಾಲಗೆಜ್ಜೆಗ
ಳುಲುಹನಾಲಿಪ ಮಾಯೆ ಮೆರೆದಳು ಬಾಲ ಲೀಲೆಯಲಿ ॥೨॥

ಆಡಿಸುವ ದಾದಿಯರ ಸೈಗೆಯು
ಲಾಡಿ ಪರಿದಪ್ಪಪ್ಪೆನುತ್ತಲಿ
ಓಡಿ ಬಂದಮರ್ದಪ್ಪಿ ಮೇಲುದ ಸೆರಗಿನೊಳಗಡಗಿ।
ನೋಡುತಲಿ ದಾ ಎನುತ ಕೈಮು
ಟ್ಟಾಡಿ ಮುಂದಲೆ ವಿಡಿದು ಕುಣಿ ಕುಣಿ
ದಾಡಿ ಸೌಖ್ಯವನೀವುತಿರ್ದಳು ಮಾಯೆ ಮೋಹಿನಿಗೆ ॥೩॥

ಒಮ್ಮೆ ಪುಮುಕಾರಾವನೀಪನ
ನೊಮ್ಮೆ ಮೋಹಿನಿ ದೇವಿಯನು ಮ
ತ್ತೊಮ್ಮೆ ತನ್ನವ ನಾಡಿಸುವ ತರುಣಿಯರ ತಂಡವನು।

ಹೆಮ್ಮೆಗೊಳಿಸುತ ಸುಖ ಮುಖವ ಹೊರ
ಹೊಮ್ಮಿಸುತ ನೆರೆ ಬಾಲಲೀಲೆಯ
ಸೊಮ್ಮು ಸೂರೆಯ ಕೊಡುತಲಿರ್ದಳು ಮಾಯೆ ಮೋಹಿನಿಗೆ ||೪||

ಹಿಡಿ ಹಿಡಿದು ಕೊಂಡರ್ತಿಯಲಿ ಬೆಂ
ಬಿಡದೆ ಶಿಕ್ಷಾಚಾರ್ಯತನದಲಿ
ಜಡಿದು ಝುಂಕಿಸಿ ಮುದ್ದುತನ ಮಿಗೆ ಮಾಯೆ ತನ್ನಂತೆ |
ನಡೆಯ ಕಲಿಸಿದಳಂಚೆ ವಿಂಡೆಗೆ
ನುಡಿಯ ಕಲಿಸಿದಳರಗಿಳಿಗೆ ಸರ
ವಿಡಲು ಕಲಿಸಿದಳಾಕೆ ತನ್ನರಮನೆಯ ಕೋಗಿಲೆಗೆ ||೫||

ಬೀರುತಿರ್ದಳು ಮುದ್ದುತನವನು
ಹೇರುತಿರ್ದಳು ಸಕಲ ಚೆಲುವನು
ತೋರುತಿರ್ದಳು ಜಗದ ಜಂಗುಳಿಗಾಡುವೊಲನಾಗಿ |
ಸಾರುತಿರ್ದಳು ಸಕಲ ಸೊಬಗನು
ಮೀರುತಿರ್ದಳು ದಿನ ದಿನಕೆ ಕಳೆ
ಯೇರುತಿರ್ದಳು ಮಾಯೆ ವಿವಿಧ ವಿಲಾಸ ವೃತ್ತಿಯಲಿ || ೬ ||

—ಚಾಮರಸ

**ಶಬ್ದಾರ್ಥ:**

ಮುಸುಕು – ಮುಚ್ಚು; ಪರಿ – ರೀತಿ; ವಸುಮತಿ – ಭೂಮಿ; ಸೊಮ್ಮು – ಆನಂದ; ಬೀರು – ಹರಡು; ವಿಲಾಸ – ಸುಖ.

**ಪ್ರಶ್ನೆ:**

೧. ಶಿಶುವನ್ನು ಕಂಡೊಡನೆ ಏನಾಗುತ್ತಿತ್ತು ?
೨. ಅರಸನು ಆ ಮಗುವಿಗೆ ಹೇಗೆ ನಾಮಕರಣ ಮಾಡಿದನು ?
೩. ಮಾಯೆಯು ಬಾಲಲೀಲೆಯಲ್ಲಿ ಹೇಗೆ ಮೆರೆದಳು ?
೪. ಮೋಹಿನಿಗೆ ಮಾಯೆಯು ಹೇಗೆ ಸುಖಕೊಡುತ್ತಿದ್ದಳು ?
೫. ಮಾಯೆಯು ಅಂಚೆಗೆ, ಗಿಳಿಗೆ, ಕೋಗಿಲಿಗೆ— ಏನು ಏನು ಕಲಿಸಿದಳು ? ಯಾಕೆ ?

**ಬರೆಹ:**

೧. ಮಾಯಾದೇವಿಯ ಬಾಲಲೀಲೆಯನ್ನು ಸಂಗ್ರಹಿಸಿರಿ.
೨. 'ಸಣ್ಣ ಮಕ್ಕಳ ಆಟ' ಎಂಬ ವಿಷಯಕ್ಕೆ ಹದಿನೈದು ಸಾಲುಗಳನ್ನು ಬರೆಯಿರಿ.



# ೬. ಬೆಳುದಿಂಗಳು

[ ಬೆಳುದಿಂಗಳನ್ನು ಕಾಣದವರು ಯಾರಿರುವರು ? ದೇವನ ಸುಂದರ ಸೃಷ್ಟಿಯಲ್ಲಿಯ ಒಂದು ಸುಂದರ ವಸ್ತುವೆಂದರೆ ಬೆಳುದಿಂಗಳು ಎಂದು ಹೇಳಬಹುದು. ಇಂಥ ಮೋಹಕವಾದ ಬೆಳುದಿಂಗಳನ್ನು ಬಣ್ಣಿಸದ ಕವಿಗಳೇ ಇಲ್ಲವೆನ್ನಬಹುದು. ಬೆಳುದಿಂಗಳಲ್ಲಿ ದೇವನು ಯಾವುದೋ ಒಂದು ಮಾಯೆಯನ್ನಿಟ್ಟಿದ್ದಾನೆ. ಅದ್ದರಿಂದಲೇ ಬೆಳುದಿಂಗಳನ್ನು ನೋಡಿ ಕವಿಗಳು, ರಸಿಕರು, ಕಲಾವಿದರು ಈ ಜಗತ್ತನ್ನು ಮರೆತು ಕಲ್ಪನಾ ಲೋಕದಲ್ಲಿ ಸಂಚರಿಸತೊಡಗುತ್ತಾರೆ. ಹೀಗೆ ಆಧುನಿಕ ತರುಣ ಕನ್ನಡ ಕವಿಗಳೊಬ್ಬರು ಕಲ್ಪನಾ ಲೋಕದಿಂದ ಕಂಡ ಬೆಳುದಿಂಗಳ ವರ್ಣನೆ ಇಲ್ಲಿದೆ.]

ಬೆಳುದಿಂಗಳು ಬಂದಿದೆಯಿದೊ ಚಿತ್ತ ಕೊರವೆ !
ಮುಗಿದ ಮೊಗವ ಅರಳಿಸು ನೀ ಹೃದಯ ಕುಮುದವೆ ! ॥ ೧ ॥

ಬಾಂದೇವಿಯ ಮಣಿಮುಕುಟದ ಬೆಳಕಿನಂತಿದೆ
ರಾತ್ರಿ ರಮಣಿ ಜವನಿಕೆಯನು ಧರಿಸಿದಂತಿದೆ ॥ ೨ ॥

ಸೃಷ್ಟಿದೇವಿ ಪಾಲ್ಗಡಲೊಳು ಮಿಂದ ಹಾಗಿದೆ,
ಶಾಂತಿ ರಸದ ಮಳೆಯು ಜಗದಿ ಸುರಿದ ಹಾಗಿದೆ. ॥ ೩ ॥

ಮಾನವತೆಯ ಪುಣ್ಯಗಂಗೆ ಹರಿವಂತಿಹುದು
ಮಂಗಲತೆಯ ಹಿಮವು ಕರಗಿ ಹನಿವಂತಿಹುದು ॥ ೪ ॥

ಆನಂದದ ಕಡಲು ಉಕ್ಕಿ ಚಲ್ಲಿದಂತಿದೆ
ಸೌಂದರ್ಯದ ಬುಗ್ಗೆಯೊಡೆದು ಚಿಮ್ಮಿದಂತಿದೆ ॥ ೫ ॥

ಭೂಮಾತೆಯು ನಕ್ಕಂತಿದೆ ಪರಮಾತ್ಮನ ದಯದಂತಿದೆ
ಅಮರ ಸುಧೆಯ ಹರಿಸಿದೆ ಇರುವಿಕೆಯನೆ ಮರೆಸಿದೆ ॥ ೬ ॥

ಬೆಳದಿಂಗಳು ಬಂದಿದೆ ನಲಿ ! ಚಿತ್ತ ಕೋರವೆ !
ಮೊಗವರಳಿಸಿ ನಗೆ ಹರಿಯಿಸು ! ಹೃದಯ ಕುಮುದವೆ ! ॥ ೭ ॥

—ಚಿದಾನಂದ

**ಶಬ್ದಾರ್ಥ:**

ಚಿತ್ತಕೋರ – ಮನಸ್ಸೆಂಬ ಚಕೋರಪಕ್ಷಿ; ಮುಗಿದ – ಮುಚ್ಚಿದ, ಬಾಡಿದ; ಕುಮುದ–ರಾತ್ರಿ ಅರಳುವ ಕಮಲ; ಜವನಿಕೆ – ಮೈಮೇಲೆ ಹೊದ್ದುಕೊಳ್ಳುವ ವಸ್ತ್ರ; ಹನಿ – ಹನಿ ಹನಿಯಾಗಿ ಬೀಳು; ಬುಗ್ಗೆ – ಕಾರಂಜಿ; ಸುಧೆ – ಅಮೃತ;

**ಪ್ರಶ್ನೆ:**

೧. ಬೆಳುದಿಂಗಳು ಬಂದಿದೆ ಎಂದೂ ಮೊಗವನ್ನು ಅರಳಿಸು ಎಂದೂ ಕವಿಯು ಯಾರಿಗೆ ಹೇಳುತ್ತಾನೆ ? ಯಾಕೆ ?

೨. ಕವಿ ಬೆಳುದಿಂಗಳನ್ನು ಯಾವ ಯಾವ ರೀತಿಯಿಂದ ಬಣ್ಣಿಸಿದ್ದಾನೆ ?

೩. ಬೆಳುದಿಂಗಳನ್ನು ಯಾವ ವಸ್ತುಗಳಿಗೆ ಹೋಲಿಸಿದ್ದಾನೆ ?

**ಬರೆಹ:**

ನೀವು ಕಂಡ ಬೆಳುದಿಂಗಳನ್ನು ೧೫ ವಾಕ್ಯಗಳಲ್ಲಿ ಬಣ್ಣಿಸಿರಿ.

## ೭. ಆರ ಕಾಣೆನು

[ಮುಪ್ಪಿನ ಷಡಕ್ಷರಿಗಳು ಜ್ಞಾನಿಗಳು. ಅವರು ಹೇಳುವ ಮಾತುಗಳು ಬಹಳ ಮಾರ್ಮಿಕವಾಗಿರುತ್ತವೆ. ಮನಸ್ಸು ಬಹಳ ಚಂಚಲ. ಅದು ದೇವರನ್ನು ನೆನೆಯದೆ ಅನ್ಯ ವಿಚಾರಗಳಲ್ಲಿಯೇ ತೊಡಗಿರುತ್ತದೆ ಆದುದರಿಂದ ಅನ್ಯ ವಿಚಾರಗಳನ್ನು ಬಿಟ್ಟು ದೇವರ ಕಡೆಗೆ ಮನ ತಿರುಗಿಸಬೇಕಾದರೆ ಮನಸ್ಸನ್ನು ಶಿಕ್ಷಿಸಬೇಕು. ಅದನ್ನು ದೇವರೇ ಮಾಡಬೇಕೆಂಬ ಭಾವವು ಇಲ್ಲಿ ಬಹಳ ಸುಲಭವಾಣಿಯಲ್ಲಿ ವ್ಯಕ್ತವಾಗಿದೆ.]

• • •

ಏನು ಮಾಡಲಯ್ಯ ! ಎನ್ನ ಹೀನಮನದ ಅವಯವಗಳ
ಜ್ಞಾನಖಡ್ಗದಿಂದ ಕಡಿವರಾರ' ಕಾಣೆನು ||ಪಲ್ಲ||

ಹಿಡಿಯುವುದನೆ ಹಿಡಿಯದಯ್ಯ, ಹಿಡಿಯದುದನೆ ಹಿಡಿವುದಯ್ಯ
ಕೆಡುವ ನಡೆಯ ನಡೆಸಿ ಎನ್ನ ಭವಕೆ ಬರಿಸಿತು
ಬಡವ ನಾನು ಕಾಡುತಿಹುದು ಹಿಡಿಯುವವರನಾರಕಾಣೆ
ಕಡಿದು ಕಡಿದು ಹಾಕುವವರನಾರ ಕಾಣೆನು ||೧||

ನಾನು ನಿನ್ನ ನೆನೆವೆನೆನಲು ತಾನು ನಿನ್ನ ನೆನೆಯದಯ್ಯ
ಶ್ವಾನನಂತೆ ಹಲವು ಕಡೆಗೆ ಹರಿಯುತಿರ್ಪುದು
ಧ್ಯಾನ–ಮೌನ–ಜಪದೊಳಿಂದು ನಾನು ಇದರ ಸಂಗದಿಂದೆ
ಜ್ಞಾನಹೀನನಾಗಿ ಹೋದೆನಕ್ಕಟಕ್ಕಟಾ ||೨||

ಅಂಗ ಗುಣದ ನಡೆಗಳೆನಲು ಹಿಂಗಿಸುತ್ತ ಬರುತಲಿಹುದು
ಅಂಗ ನೆನಹು ಎನಲೆಲ್ಲಿಯೊ ನುಸುಳಿಪೋಪುದು
ಮಂಗಳಾತ್ಮ ಷಡಕ್ಷರೀಯ ಲಿಂಗ ನಿನ್ನ ನೆನೆಯದಿರ್ಪ
ಕೊಂಗಿಮನವ ಶಿಕ್ಷಿಸೆನ್ನ ಆಳಲು ಪೋಗಲಿ

—ಮುಪ್ಪಿನ ಷಡಕ್ಷರಿ

**ಶಬ್ದಾರ್ಥ:**

ಭವ – ಸಂಸಾರ; ಶ್ವಾನ – ನಾಯಿ; ಅಂಗಗುಣ – ಶರೀರದ ಸ್ವಭಾವ; ನುಸುಳು – ತಪ್ಪಿಸಿಕೊಳ್ಳು, ಜಾರು; ಕೊಂಗಿಮನ – ಕೊಂಕುಬುದ್ಧಿ, ಕೆಟ್ಟಮನಸ್ಸು.

**ಪ್ರಶ್ನೆ:**

೧. ಕವಿಯು ಮನಸ್ಸಿನ ಬಗ್ಗೆ ಯಾವ ಮಾತುಗಳನ್ನು ಹೇಳುತ್ತಾನೆ ?
೨. ಮನಸ್ಸು ಹೇಗೆ ಹರಿಯುತ್ತಿರುವದು ?
೩. ಮನಸ್ಸು ಚಂಚಲವಾದರೆ ಏನೂ ಮಾಡಲೂ ಸಾಧ್ಯವಾಗದು ?
೪. ಕೊನೆಗೆ ಕವಿಯು ಏನನ್ನು ಬೇಡಿಕೊಳ್ಳುತ್ತಾನೆ ?

**ಬರೆಹ:**

೧. "ಶ್ವಾನನಂತೆ ಹಲವು ಕಡೆಗೆ ಹರಿಯುತಿರ್ಪುದು" ಈ ಮಾತುಗಳನ್ನು ನಿಮ್ಮ ನುಡಿಯಲ್ಲಿ ವಿವರಿಸಿರಿ.
೨. ಕವಿಯ ಮುಖ್ಯಭಾವವನ್ನು ನಿಮ್ಮ ಭಾಷೆಯಲ್ಲಿ ಸಂಗ್ರಹಿಸಿರಿ.



# ೮. ಮಾಟಗಾರ

[ ಸೃಷ್ಟಿಯಲ್ಲಿ ನಾವು ತಿಳಿದು ನೋಡಿದರೆ ದೇವರ ಸ್ವರೂಪವೇ ಕಾಣುವದು. ಅಂತಹ ದೃಷ್ಟಿ ಮಾತ್ರ ನಮಗಿರಬೇಕು. ಕತ್ತಲೆಯ ರಾತ್ರಿಯಲ್ಲಿ ಅನಂತವಾದ ತಾರೆಗಳು ಬೆಳಗುತ್ತಿರುವಾಗ ನಾವು ಅವುಗಳನ್ನು ಕಂಡು ನಮ್ಮ ಕಿರಿತನಕ್ಕೆ ನಾಚಿ-ಕೊಳ್ಳಬಹುದಷ್ಟೇ ? 'ಮಾಟಗಾರ' ಪದ್ಯದಲ್ಲಿ ಶ್ರೀಮತಿ ಜಯದೇವಿ ತಾಯಿ ಲಿಗಾಡೆಯವರು ತಮ್ಮ ಅನುಭವದ ಮಾತುಗಳನ್ನೇ ಬಲು ಸುಲಭವಾದ ವಾಣಿಯಲ್ಲಿ ಹಾಡಿದ್ದಾರೆ. ನೀವು ಈ ಪದ್ಯ ಹಾಡಿ ನಲಿಯಬಹುದು. ]

■ ■ ■

ಕಾಳ ರಾತ್ರಿಯಿದು, ನಿಶೆಯ ನಿಶ್ಶಬ್ದದಲಿ
ನಿದ್ರೆ ಬಾರದ ಮುಹಡಿಯನೆ ಏರಿ ನಿಲ್ವೆ;
ನಿಶೆಯ ಬಾಂದಳದೊಡನೆ ಒಡನಾಡುವೆ
ಸ್ತಬ್ಧತೆಯಲಿ ಮೂಕಗೊಂಡಿಹುದು ಜಗವು—

ಗಗನ ಗಭೀರದೆಡೆಗೆ ನೆತ್ತಿ ಎತ್ತಿ ನೋಡುವೆ
ಹಾ ! ಮುರಿಯಲಾಗದು ಮೌನ ಮಾನಸ;
ಕೋಟಿ ತಾರೆಗಳೆಲ್ಲ ಮಿಣುಗುತಿವೆ, ಕಣ್ಣು—
ಮುಚ್ಚಿ ಮೆಚ್ಚಿ ಕಾಣುವೆ ಆ ! ಎಂಥ ದರ್ಶನ !—

ಅಜಕೋಟಿ ಮಿಣುಕುಗಳೆಲ್ಲ ನನ್ನ
ಚಿಕ್ಕ ಚಕ್ಷುಗಳಲಿ ಬಿಂಬಿಸುತಿವೆಯೆಲ್ಲ !
ಏನು ಸೋಜಿಗವಿದು ಮಾಟಗಾರ ! ನಿನ್ನ ಅನಂತವು
ಎನ್ನೊಳಡಗಿಹುದು ಚಕ್ಷುವಿನಲಿ ಬಿಂಬಿಸುವ ಬಾನಿನಂತೆ !

—ಜಯದೇವಿತಾಯಿ ಲಿಗಾಡೆ

**ಶಬ್ದಾರ್ಥ:**

ಒಡನಾಡು—ಕೂಡಿ ಆಟವಾಡು; ದರ್ಶನ—ನೋಟ, ಸ್ವರೂಪ; ಚಕ್ಷುಗಳು—ಕಣ್ಣುಗಳು; ಮಾಟಗಾರ—ದೇವರು; ಬಿಂಬಿಸು—ರೂಪಿಸು;

**ಪ್ರಶ್ನೆ:**

೧. ಕಾಳ ರಾತ್ರಿಯಲ್ಲಿ ಏನು ಆವರಿಸಿತ್ತು ?
೨. ಕಾಳ ರಾತ್ರಿಯು ಕವಿಯಿತ್ರಿಗೆ ಹೇಗೆ ಕಂಡಿತು ?
೩. ಕೊನೆಗೆ ಕವಿಯಿತ್ರಿಯು ಏನನ್ನು ಬಯಸುತ್ತಾಳೆ ?

**ಬರೆಹ:**

೧. 'ಸಾಯಂಕಾಲ'ದ ಶೋಭೆಯನ್ನು ಹದಿನೈದು ಸಾಲುಗಳಲ್ಲಿ ಬರೆಯಿರಿ.
೨. 'ಬೆಳದಿಂಗಳ ರಾತ್ರಿ' ಯನ್ನು ಕುರಿತು ನಿಬಂಧ ಬರೆಯಿರಿ.

---

# ೬. ದಮಯಂತಿ ಪೊಕ್ಕಳು ನಿಷಧ ಪಟ್ಟಣವ

[ ಕನಕದಾಸರು ಅನುಭಾವಿಗಳು. ಅವರ ಹಾಡುಗಳನ್ನು ನಾವು ಮನೆಮನೆಗಳಲ್ಲಿ ಕೇಳಬಹುದು. 'ಕನಕನ ಮುಂಡಿಗೆ' ಎಂದು ಕಠಿಣವಾದ ಮತ್ತು ಗಹನವಾದ ವಿಚಾರಗಳ ಮಾತು ತಲೆಯೆತ್ತಿದಾಗ, ನಾವು ನುಡಿಯುತ್ತೇವೆ. ಕನಕದಾಸರು ನಳನ ಚರಿತ್ರೆಯನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿದ್ದಾರೆ. ಭಾಷೆ ಸುಂದರವಾಗಿದೆ. ಕಥೆಯ ಓಟ ನೋಡುವಂಥಹದು; ದಮಯಂತಿಯನ್ನು ನಳನು ಕಾಡಿನಲ್ಲಿ ಬಿಟ್ಟು ಹೋಗುತ್ತಾನೆ. ದಮಯಂತಿಯು ನಳನನ್ನು ಹುಡುಕುತ್ತ ಶೋಕಿಸುತ್ತ ಹೊರಟಿರುವಾಗ, ನಿಷಧ ಪಟ್ಟಣವು ಹತ್ತುತ್ತದೆ. ಅಲ್ಲಿ ಅವಳು ಹೋಗುವಳು. ಮುಂದೆ ನಳನು ಸುಸ್ಥಿತಿಯನ್ನೈದಲು ನಿಜ ಸತಿಯನ್ನು ಕರೆಕಳುಹುವನು. ]

■ ■ ■

ಕೇಳಿ ಹರುಷಿತೆಯಾದಳವರಿಗೆ
ಪಾಲಿಸಿದಳಾಭರಣ ವಸ್ತ್ರವ
ಲೋಲಲೋಚನೆ ಬಂದು ತಂದೆಗೆ ನಮಿಸಿ ವಿನಯದಲಿ !
ನಾಳೆ ಪಯಣವ ನೋಡಿ ನಿಷಧನೃ
ಪಾಲನಲ್ಲಿಗೆ ತನ್ನ ಕಳುಹೆನೆ
ಬಾಲಕಿಯ ನುಡಿಗೇಳಿ ಬೆಸಸಿದನು ಭೀಮನೃಪ ॥೧॥

ತೆಗೆಸಿದನು ಭಂಡಾರದಲಿ ಬಗೆ
ಬಗೆಯ ವಸ್ತುವ ಸುಭಟರಿಗೆ ಝಗ
ಝಗಿಪ ಹೊನ್ನಾಯುಧವ ನವರತ್ನಗಳ ತೊಡಿಗೆಗಳ ।
ಸುಗುಣೆಯರು ಮೊದಲಾದ ಪರಿವಾ
ರಗಳಿಗಿತ್ತನು ಪಯಣದಲಿ ತೇ–
ರುಗಳ ಶೃಂಗರಿಸಿದನು ಬಿರುದಿನ ಸಿಂಧಗಳ ನೆಗಹಿ ॥೨॥

ಮಣಿರಥಂಗಳ ನಡುವೆ ಸುಳಿವಂ-
ದಣಿವ ರಾಯರ ಮಧ್ಯದಲಿಯುರ-
ವಣಿಪ ಮತ್ತಗಜಂಗಳಲಿ ಮಾವುತರ ಕಳಕಳದ ।
ಕುಣಿವ ತೇಜಿಯ ರಾವುತರ ಸಂ-
ದಣಿಗಳಲ್ಲಿ ಚತುರಂಗ ಬಲ ವಿ-
ಟ್ಟಣಿಸಿ ನಡೆದುದು ಸಾಲುಸತ್ತಿಗೆಗಳ ಪಿಡಾಯದಲ್ಲಿ ॥೩॥

ನಾರಿಯರ ಸಂದಣಿಯು ನೆರೆದುದು
ತೇರಿನಲಿ ಕೆಲರಂದಣದಿ ಕೆಲ-
ರೇರಿದರು ವಾಜಿಗಳ ಗಜಕಂಧರದ ಗದ್ದುಗೆಯ ।
ಸೇರಿ ನಡೆದರು ಮುಂದೆ ಘನಗಂ
ಭೀರ ಭೇರೀಪಣವ ವಾದ್ಯವು
ಭೋರಿಡಲು ಹೊರವಂಟಳಂಗನೆ ಸಕಲ ವಿಭವದಲಿ ॥೪॥

ಬಂದಳಾ ದಮಯಂತಿ ದೇವ ಮು
ಕುಂದ ರಕ್ಷಿಸು ಎನುತ ತನ್ನಯ
ನಂದನರ ಸಹಿತೇರಿದಳು ಮಣಿಮಯವರೂಥವನು ।
ಒಂದೆ ಮುಂದಿಕ್ಕೆಲದ ನಾರೀ-
ವೃಂದ ನಡೆಯಲು ಮನದ ಹರ್ಷಾ
ನಂದದಲಿ ನಡೆತಂದು ಹೊಕ್ಕಳು ನಿಷಧ ಪಟ್ಟಣವ ॥೫॥

— ಕನಕದಾಸ

**ಶಬ್ದಾರ್ಥ:**

ಲೋಲಲೋಚನೆ–ಹೊಳೆಯುವ ಕಣ್ಣುಳ್ಳವಳು; ಸಿಂಧ–ಧ್ವಜ; ಅಂದಣ–ಪಲ್ಲಕ್ಕಿ; ಸಂದಣಿ–ದಟ್ಟಣೆ; ಪಿಡಾಯ–ಸಡಗರ; ಇಕ್ಕೆಲ–ಎರಡೂ ಕಡೆಗೆ.

**ಪ್ರಶ್ನೆ:**

೧. ದಮಯಂತಿಯು ತಂದೆಗೆ ಏನೆಂದು ಹೇಳುತ್ತಾಳೆ ?
೨. ಭೀಮನೃಪನು ಆಗ್ಗೆ ಯಾವ ವ್ಯವಸ್ಥೆ ಮಾಡುತ್ತಾನೆ ?
೩. ದಮಯಂತಿಯು ಹೇಗೆ ಹೊರಟಳು ?
೪. ದಮಯಂತಿಯು ಹೊರಟ ರೀತಿಯನ್ನು ಸ್ವಲ್ಪದರಲ್ಲಿ ಹೇಳಿರಿ.

**ಬರೆಹ:**

೧. ನೀವು ನೋಡಿದ ರಥೋತ್ಸವದ ವರ್ಣನೆ ಮಾಡಿರಿ.
೨. ಸ್ವಾತಂತ್ರ್ಯ ದಿನದ ಮೆರವಣಿಗೆಯನ್ನು ಕುರಿತು ಬರೆಯಿರಿ.



# ೧೦. ಮೀನುಪೇಟೆ

[ ನಮ್ಮ ದೇಶದ ಕಡಲಕರೆಯ ಪ್ರದೇಶದಲ್ಲಿ ಮೀನುಗಳನ್ನು ಹಿಡಿದು ಅವುಗಳನ್ನು ಮಾರಿ ಎಷ್ಟೋ ಜನರು ಜೀವಿಸುತ್ತಾರೆ. ಗಂಡಸರು ಸಮುದ್ರದಲ್ಲಿ ಹೋಗಿ ಮೀನು ಹಿಡಿದು ತರುತ್ತಾರೆ. ಹೆಂಗಸರು ಪೇಟೆಗೆ ಹೋಗಿ ಅವುಗಳನ್ನು ಮಾರಿಕೊಂಡು ಬರುತ್ತಾರೆ. ಮೀನು ಹಿಡಿಯುವದೊಂದು ನಮ್ಮ ದೇಶದಲ್ಲೊಂದು ದೊಡ್ಡ ಉದ್ಯೋಗವಾಗಿದ್ದರೂ ಅದರಿಂದ ಜೀವಿಸುವ ಜನರು ಮಾತ್ರ ತಮ್ಮ ಬಾಳಿನಲ್ಲಿ ಹರುಷವನ್ನು ಕಂಡೇ ಇಲ್ಲ. ಇಂಥ ದುಃಖಿನಿಯರಾದ ಮೀನು ಮಾರುವ ಸ್ತ್ರೀಯರ ಚಿತ್ರವನ್ನು ಶ್ರೀ. ಸು. ರಂ. ಯಕ್ಕುಂಡಿಯವರು ಕರಳು ಕರಗುವಂತೆ ಚಿತ್ರಿಸಿದ್ದಾರೆ. ಕರುಣ ರಸವೇ ಮೀನ ಮಾರುವ ಸ್ತ್ರೀಯರ ರೂಪವಳೆದು ಸಜೀವವಾಗಿ ಇಲ್ಲಿಗೆ ಬಂದಿದೆ. ]

■ ■ ■

೧

ಕೊಳೆತು ನಾರುತಿರುವದಿಲ್ಲಿ
ಹಳಸಿ ಹೋದ ಮೀನವು
ಕುಳಿತು ಮಾರುತಿರುವದಿಲ್ಲಿ
ಜೀವ ದುಃಖ ಮ್ಲಾನವು
ದೈನ್ಯ ಸಾರುತಿರುವುದಿಲ್ಲಿ
ಬಂಡವಲಿನ ಬುಟ್ಟಿಯಲ್ಲಿ
ಜೀತವಾಗಿ ಹುಟ್ಟಿದಲ್ಲಿ
ಬದುಕು ನಿತ್ಯ ದೀನವು

ಬೆಳಗು ಬಂತು
ಸಂಜೆ ಬಂತು
ವರುಷ ವರುಷ ಕಳೆದರೂ
ಹರೆಯ ಮುಪ್ಪು ತಳೆದರೂ
ತೆಂಗಿನ ಸಸಿ ಬೆಳೆದರೂ
ಬುಟ್ಟಿ ಮೀನ ಕೊಳೆತರೂ
ಹರುಷ ಗಿರುಷ ದೊರೆಯಲಿಲ್ಲ
ಇವರ ಬಾಳ ಹಂತಕೆ
ಈ ಬದುಕಿನ ಪಂಥಕೆ



೨

ಇಲ್ಲಿ ಸಾಲು ಕುಳಿತ ಹೆಣ್ಣು
ಎಲ್ಲೊ ಮುಗಿಲಿನತ್ತ ಕಣ್ಣು
ಕುಳಿತರಿಲ್ಲಿ ಮತ್ಸ್ಯಗಂಧಿ
ಉಟ್ಟುಕೊಂಡು ಹರಕು ಚಿಂದಿ
ನೊಂದಜೀವ ನೂಲುತಿತ್ತು
ಸುಖ ಸ್ವಪ್ನ ದರ್ಶನ
ಬಯಸಿತದಸ್ಪರ್ಶನ
ಕಡಲಿನಾಚೆ ತೇಲುತ್ತಿತ್ತು
ಮಘವೆ ! ಹಾಯಿ ಹಿಗ್ಗಿಸಿ
ಹರೆಯ ಮುಪ್ಪು ತಗ್ಗಿಸಿ
ರಂಪಿಣಿ ಬಲೆ ಬೀಸಿವಲ್ಲಿ
ಒಡಲಿನನ್ನ ಕರೆಯುತು

ಗಾಳಿ ಕಡಲ ನೀಸಿವಲ್ಲಿ
ದುಃಖ ಲಿಪಿಯ ಬರೆಯುತು
ಬಂಡವಲಿನ ಬುಟ್ಟಿಯಲ್ಲಿ
ಜೀತವಾಗಿ ಹುಟ್ಟಿದಲ್ಲಿ
ಬಲೆಗೆ ಬಿದ್ದ ಮೀನವಂತೆ
ವಿಲಿವಿಲಿ ಮಣಿದಾಡಿದೆ
ಕೊಳೆತ ಬದುಕು ಬಾಡಿದೆ
ತಂದ ಮೀನ ಕೊಳೆತರೂ
ಬಾಲ್ಯ ಹರೆಯ ತಳೆದರೂ
ಹರುಷ ಗಿರುಷ ದೊರೆಯಲಿಲ್ಲ
ಇವರ ಬಾಳ ಹಂತಕೆ
ಈ ಬದುಕಿನ ಪಂಥಕೆ

—ಸು. ರಂ. ಯಕ್ಕುಂಡಿ

**ಶಬ್ದಾರ್ಥ:**

ಮ್ಲಾನ – ಬಾಡಿದ; ಕಳೆಗುಂದಿದ; ಹಂತ – ಸ್ಥಿತಿ; ಪಂಥ – ದಾರಿ; ರೀತಿ; ಮತ್ಸಗಂಧಿ – ಮೀನದ ವಾಸನೆಯುಳ್ಳವಳು; ನೂಲು – ಕಲ್ಪಿಸು; ಮಘವೆ – ದೋಣಿ; ಹಾಯಿ – ನಾವೆಗೆ ಕಟ್ಟಿದ ಗಾಳಿಯನ್ನು ಹಿಡಿಯುವ ಪಟ; ರಂಪಿಣಿ – ದೊಡ್ಡಜಾಳಿಗೆ; ಜೀತ – ಒಬ್ಬರ ಆಳಾಗಿ ದುಡಿಯುವವ.

**ಪ್ರಶ್ನೆ:**

೧. ಇಲ್ಲಿ ಯಾರು ಎಂಥ ಮೀನಗಳನ್ನು ಮಾರಲು ಕುಳಿತಿರುವರು ?

೨. ಬದುಕು ನಿತ್ಯ ದೀನವಾಗಿ ಯಾವಾಗ ಆಗುವದು ?

೩. ಕಾಲಚಕ್ರವು ಉರುಳಿದ್ದನ್ನು ಕವಿ ಇಲ್ಲಿ ಯಾವ ಸಂಗತಿಗಳಿಂದ ಸೂಚಿಸಿದ್ದಾನೆ?

೪. ಮತ್ಸ್ಯಗಂಧಿಯ ನೊಂದ ಜೀವ ಏನನ್ನು ನೂಲುತ್ತಿತ್ತು ?

೫. "ರಂಪಿಣ ಬಲೆ ಬೀಸಿದಲ್ಲಿ........ದುಃಖ ಲಿಪಿಯು ಬರೆಯಿತು" ಈ ನಾಲ್ಕು ಸಾಲುಗಳ ಅರ್ಥವನ್ನು ವಿವರಿಸಿ ಬರೆಯಿರಿ.

೬. ಕೊಳೆತ ಬದುಕು ಏಕೆ ಬಾಡಿದೆ ?

೭. ಈ ಬಾಳಿನ ಪಂಥಕೆ ಏನು ದೊರೆತಿಲ್ಲ ? ಏಕೆ ?

**ಬರೆಹ:**

'ಪಲ್ಲೆಯ ಪೇಟೆ' ಇದರ ಬಗ್ಗೆ ೧೫ ಸಾಲು ಬರೆಯಿರಿ.

# ೧೧. ಪ್ರಲ್ಹಾದನ ವಿದ್ಯೆ

[ ನರಹರಿ ಕವಿಯು ಭಾಮಿನಿ ಷಟ್ಪದಿಯಲ್ಲಿ ಪ್ರಲ್ಹಾದ ಚರಿತ್ರೆಯನ್ನು ಬರೆದಿದ್ದಾನೆ. ಪ್ರಲ್ಹಾದನು ವಿದ್ಯೆ ಕಲಿಯಲು-ಚಂಡಮಾರ್ಕ ಗುರುಗಳ ಹತ್ತಿರ ಹೋಗುತ್ತಾನೆ. ಗುರುಗಳು ಕಲಿಸುವ ಪಾಠಕ್ಕಿಂತ ಆತನಿಗೆ ಹರಿ ಭಜನೆಯೇ ಮೇಲು ಎಂದೆನಿಸುವದು. ಕೊನೆಗೆ ಹಿರಣ್ಯಕಶಿಪುವು ಮಗನನ್ನು ಕರೆಯಿಸಿ "ನೀನು ಏನು ವಿದ್ಯೆ ಕಲಿತಿರುವಿ ?" ಎಂದು ಕೇಳುತ್ತಾನೆ. ಆಗ ಪ್ರಲ್ಹಾದನು ಅನೇಕ ಮಾರ್ಮಿಕ ಮಾತುಗಳಿಂದ ತಂದೆಗೆ ಉತ್ತರ ಕೊಡುತ್ತಾನೆ. ಅದೇ ವಿಚಾರವು ಈ ಪದ್ಯಗಳಲ್ಲಿದೆ. ಭಾಮಿನಿ ಷಟ್ಪದಿಯಲ್ಲಿ ಬರೆದ ಈ ಕಾವ್ಯವು ಅತ್ಯುನ್ನವದಕ್ಕೂ ಸುಂದರವಾಗಿದೆ. ]

□ □ □

ವಿದ್ಯೆಗಳ ಕಲಿಯಂದೊಡೆಮಗವ
ಬುದ್ಧಿಗಳ ಹೇಳುವನು ಮಾತಿಲಿ
ಶಬ್ದಶಾಸ್ತ್ರ ಪುರಾಣವಲ್ಲದೆ ಬೇರೆ ಮತ್ತೊಂದು
ಹೊದ್ದದವಗುತ್ತರವ ಕೊಡುವೊಡೆ
ರುದ್ರಗರಿದಮರಾರಿ ನೀನೆ
ತಿದ್ದಿಕೋ ನಿನ್ನವನ ಬರೆಸುವುದಾಗದೆಮಗೆಂದ ॥೧॥

ಆಗಳದಕಮರಾರಿ ಕಡುಬೆರ
ಗಾಗಿ ಸುಯ್ದೊನೊಡನೆ ಮುಕುಟವ
ತೂಗಿ ಚಿಂತಿಸಿ ಕರೆ ಮಗನನಿನ್ನೊಂದು ವಚನವನು ।

ನಾಗಶಯನನ ಬಿಟ್ಟು ಬರೆ ಮರು
ಳಾಗ ಬೇಡೆಂದೊತ್ತಿ ಹೇಳುವೆ
ಬೇಗ ಹೋಗೆಂದಟ್ಟಿ ದೂತರ ಕರೆಸಿದನು ಮಗನ ॥೨॥

ಬರಲು ತನಯನು ಕೋಪಿಸದೆ ಸುರ
ಹರನು ನುಡಿಸಿದನೆಲೆ ಮಗನೆ ನೀಂ
ಗುರುಗಳಿಂದೇನೇನ ಕಲಿತೈ ವಿದ್ಯೆಗಳನೀಗ ।
ಬರೆದು ತೋರೆನಗೊಮ್ಮೆ ಬಾಯೆಂ-
ದೊರೆದೊರೆದು ಕೇಳಲ್ಕೆ ನುಡಿದನು
ಪರಮ ತತ್ತ್ವಶ್ರುತಿರಹಸ್ಯದ ವಚನಸಾರಗಳ ॥೩॥

ಬಾಯ ಪಾಠವ ಕಲಿತೊಡೇನದು
ಕಾಯಸಿದ್ಧಿಯ ಮಾಡುವುದೆ ಮಿಗೆ
ಬಾಯ ಬಿಟ್ಟೊರಲಿದೊಡೆ ಲೆಕ್ಕಗಳೀವುವೆ ವರವ ।
ನೋಯದಸುರಾಂತಕನ ನೆನೆದೀ
ಪ್ರಾಯದಲಿ ಮೋಕ್ಷವನು ಪಡೆಯದೆ
ನಾಯ ವಿದ್ಯೆಯನೇನ ಕಲಿ ಕಲಿಯಂಬೆ ನೀನೆಂದ ॥೪॥

ಹೊನ್ನ ತವಣೆಯಕೂಡಲಘವದು
ಬೆನ್ನ ಬಿಡುವುದೆ ಚೌಪದನನೇ
ನುನ್ನತಿಯಿನಭ್ಯಾಸಿಸಿದೊಡಾಯಿನವು ಹೆಚ್ಚುವುದೇ ।
ಬನ್ನಬಡಿಸಿದಿರಯ್ಯ ಬರೆಯಿರಿ
ದೆನ್ನಸಿನ್ನು ವೃಥಾಯು ಪೂರ್ವದ–
ಲೆನ್ನ ಹಸೆಯಲಿ ಬರೆಮದೇ ಸಾಕಿನ್ನು ಬೇಡೆಂದ ॥ ೫ ॥

—ನರಹರಿ ಕವಿ

**ಶಬ್ದಾರ್ಥ:**

ಅಮರಾರಿ – ರಾಕ್ಷಸ, ಹಿರಣ್ಯಕಶಿಪು; ನಾಗಶಯನ – ವಿಷ್ಣು, ಹರಿ; ತನಯ – ಮಗ; ಈ ಪ್ರಾಯದಲಿ – ಈ ವಯಸ್ಸಿನಲ್ಲಿ; ತವಣೆ – ಸ್ಥಳ; ಚೌಪದ– ಶಿಕ್ಷಕ; ಬನ್ನ – ದುಃಖ, ಅಘ – ಪಾಪ.

**ಪ್ರಶ್ನೆ:**

೧. ಪ್ರಲ್ಹಾದನಿಗೆ ವಿದ್ಯೆ ಕಲಿಸಲು ಸಾಧ್ಯವಿಲ್ಲೆಂದು ಗುರುಗಳು ಯಾಕೆ ಹೇಳಿದರು ?
೨. ಆಗ ಹಿರಣ್ಯಕಶಿಪು ಏನು ಮಾಡಿದನು ?
೩. ತಂದೆಯು ಬರೆದು ತೋರಿಸು ಎನ್ನಲು ಪ್ರಲ್ಹಾದನು ಏನು ಮಾಡಿದನು ?

**ಬರೆಹ:**

೧. ಪ್ರಲ್ಹಾದನ ಕಥೆ ಸ್ವಲ್ಪದರಲ್ಲಿ ಬರೆಯಿರಿ.
೨. ನಿಮ್ಮ ಶಾಲೆಯಲ್ಲಿ ಪ್ರಾರ್ಥನೆಯನ್ನು ಹೇಗೆ ಮಾಡುವಿರಿ ಎಂಬುದನ್ನು ಬರೆಯಿರಿ

# ೧೨. ದುಂಬಿ

[ ದುಂಬಿಯನ್ನು ವರ್ಣಿಸಿ ಬಹಳ ಕವಿಗಳು ಕವನಗಳನ್ನು ಕಟ್ಟಿರುವರು. ಹೂವಿನಿಂದ ಹೂವಿಗೆ ಹಾರುವ ದುಂಬಿ, ಕವಿಗಳ ಮನಸ್ಸನ್ನು ಅಷ್ಟು ಸೆಳೆದಿದೆ! ಪೇಜಾವರ ಸದಾಶಿವರಾಯರೂ ಒಂದು ವಿಶಿಷ್ಟವಾದ ರೀತಿಯಲ್ಲಿ ದುಂಬಿಯ ಕಾರ್ಯವನ್ನು ಬಣ್ಣಿಸಿ ಹೇಳಿದ್ದಾರೆ. ಚಿಕ್ಕ ಮಕ್ಕಳು ಈ ಕವನದಿಂದ ಕಲಿಯತಕ್ಕ ಉತ್ತಮವಾದ ಪಾಠವಿದೆ. ದಿವಂಗತ ಪೇಜಾವರ ಸದಾಶಿವರಾಯರು ಮಂಗಳೂರಿನವರು. ಅನೇಕ ಕವನ, ಕಥೆ, ನಾಟಕ ಮುಂತಾದವುಗಳನ್ನು ಬರೆದಿರುವರು. ಅವರಿನ್ನೂ ಕನ್ನಡಕ್ಕೆ ಸೇವೆ ಸಲ್ಲಿಸುವ ಕಾಲವಿರುವಾಗ, ಅಕಾಲ ಮೃತ್ಯುವು ಅವರಿಗೆ ಒದಗಿತು. ವಿದೇಶಕ್ಕೆ ಅಭ್ಯಾಸಕ್ಕೆಂದು ಹೋದಾಗ, ಇಟಲಿಯ ಮಿಲಾನದಲ್ಲಿ ಮಡಿದರು. ]

●

ದುಂಬಿಯ ಹಿಂಡದು ಕಾಣುತಿದೆ
ಪರಮಾನಂದದಿ ಓಡುತಿದೆ
ಹಾಡನು ಹಾಡುತ
ಕಾಂತಿಯು ಬೀರುತ
ಮಲೆಗಳ ಕಡೆಗೆಯೆ ಓಡುತಿದೆ ॥ ೧ ॥

ಮಳೆ ಚಳಿ ಬಿಸಿಲಿಗೆ ಭಯಪಡದೆ
ಅರಳಿದ ಹೂಗಳ ಮಧು ಬಿಡದೆ
ಸುಂದರ ದಿನದಲಿ
ಸುಂದರ ಬನದಲಿ
ಸತತವು ನಲಿವುದು ಎಡೆಗೆಡದೆ ॥ ೨ ॥

ಅಂಬರ ಚುಂಬಿತ ಗಿರಿಗಳಲಿ
ಸೊಂಪಿನ ವನನದಿ ಝರಿಗಳಲಿ
ಮುದದಲಿ ಹಾರುತ
ಮಧುವನು ಅರಸುತ
ಹಾರುತಲಿದೆಯತಿಲೀಲೆಯಲಿ ॥ ೩ ॥

ಕೆಲಸಕೆ ಹೇಸುವ ಸೋಮಾರಿ
ಬಯಲಿನ ಅಲರುಣಿ ಬಳಿಸೇರಿ
ಪಾಠವ ಪಠಿಸುತ
ಕೆಲಸವ ಕಲಿಯುತ
ತಿಳಿಯೋ ಸಗ್ಗದ ನಿಜದಾರಿ ||೪||

—ಪೇಜಾವರ ಸದಾಶಿವರಾಯರು

**ಶಬ್ದಾರ್ಥ:**

ಮಲೆ – ಪರ್ವತ; ಅಲರುಣಿ – ಗುಂಗೀಹುಳ; ಅಂಬರ – ಆಕಾಶ.

**ಪ್ರಶ್ನೆ:**

೧. ದುಂಬಿಯ ಹಿಂಡು ಎಲ್ಲಿಗೆ ಓಡುತ್ತಿದೆ ?
೨. ದುಂಬಿ ಎಲ್ಲೆಲ್ಲಿಗೆ ಓಡುತ್ತಿದೆ ? ಏತಕ್ಕಾಗಿ ಹಾರಾಡುತ್ತಿದೆ ?
೩. ಕೆಲಸವನ್ನು ಮಾಡುವಾಗ ದುಂಬಿಯ ಮನಸ್ಸು ಹೇಗೆ ಇದೆ ?
೪. ದುಂಬಿಯ ಉದಾಹರಣೆಯಿಂದ ನಾವು ಕಲಿಯತಕ್ಕ ಪಾಠವೇನು ?

**ಬರೆಹ:**

ಪಾತರಗಿತ್ತಿಯನ್ನು ವರ್ಣಿಸಿ ಹಲವು ವಾಕ್ಯ ಬರೆಯಿರಿ.

## ೧೩. ತ್ಯಾಗ

[ ಒಂದು ಮಹಾ ಅರಣ್ಯದಲ್ಲಿ ಒಬ್ಬ ಬೇಡನು ಕಪೋತ ಕಪೋತಿಯನ್ನು ನೆರೆ-ಹಿಡಿದಿರುತ್ತಾನೆ. ಕಪೋತ ಹಾರಿ ಹೋಗಿ ತಾನು ಗೂಡು ಕಟ್ಟಿದ ಮರದ ಮೇಲೆ ಕೂಡುವುದು. ಅಕಸ್ಮಾತ್ತಾಗಿ ಬೇಡನು ಅದೇ ಗಿಡದ ಬುಡಕ್ಕೆ ಬರುತ್ತಾನೆ. ಆಗ ವಿಪರೀತ ಚಳಿ. ಅತಿಥಿಯಾಗಿ ತಮ್ಮ ಮನೆಗೆ ಬಂದ ಆ ಬೇಡನಿಗುಂಟಾದ ಚಳಿ-ಯನ್ನು ಹೋಗಲಾಡಿಸಲು, ಸೆರೆಸಿಕ್ಕ ಕಪೋತಿಯ ಬಿನ್ನಹದ ಪ್ರಕಾರ ಕಪೋತವು ಒಣ ಕಡ್ಡಿಗಳನ್ನು ತಂದು ಬೆಂಕಿ ಮಾಡುತ್ತದೆ. ಬೇಡನಿಗೆ ಹಸಿವಾಗಿರುವಾಗ, ಅವೆರಡೂ ಪಾರಿವಾಳಗಳು ಆಹಾರಕ್ಕಾಗಿ ತಮ್ಮನ್ನೇ ಚಿತೆಯಲ್ಲಿ ಅರ್ಪಿಸಿಬಿಡುತ್ತವೆ. ಇದೇ ಕಪೋತಾಖ್ಯಾನದ ಉದಾತ್ತವಾದ ಕಥೆ. ನಂಜಕವಿ ಸಾಂಗತ್ಯದಲ್ಲಿ 'ಕಪೋತ ವಾಕ್ಯ' ಬರೆದಿರುವನು. ಸರಳವಾದ ಭಾಷೆಯಲ್ಲಿ ಕಥೆಯಿದೆ. 'ಕಪೋತವಾಕ್ಯ' ಗ್ರಂಥದಿಂದ ಕೆಳಗಿನ ಪದ್ಯವನ್ನು ಆಯ್ದುಕೊಂಡಿದೆ. ]

■ ■ ■

ಸಕ್ಕರೆ ಬಿಲ್ಲನ ರೂಪನೆ ಎನ್ನದೊ
ದಕ್ಕರ ಪತಿಯು ಸೀಸೀಗ
ದುಕ್ಕದಿ ಓಮುಗೊಂಡು ಬಳಲುವ ಬೇಡಗೆ
ತಕ್ಕ ಬುದ್ಧಿಯ ಮಾಡೋ ಪ್ರಭು ||೧||

ಅಕ್ಕರೆಯಾಗಿಹ ಸತಿಯಳ ಮರುಕದಿ
ದಿಕ್ಕೆಂಟ ನೋಡಿ ಕಪೋತ
ಕೊಕ್ಕಿಂದ ಕಚ್ಚಿ ತಂದಿತು ಕಾಡಕೊಳ್ಳಿಯ
ನಿಕ್ಕಿತು ಅಂಚಿನ ಗೂಡಿ ||೨||

ಪಕ್ಕದಿ ಬಿಸಿ ಪುಟವ ಮಾಡಿ ಬೆಂಕಿಯು
ಗಕ್ಕನೆ ತಾ ಹಾರಿ ಪೋಗೆ
ಸುಕ್ಕಿದ ಬೇಡನು ಸುಖಿಯಾಗಿ ಕಾಸಿ ತಾ
ದುಕ್ಕವಾದನು ಮನದೊಳಗೆ ||೩||

ಹುಟ್ಟಿದೆ ತಾಯಿ ಯವ್ವನಕೆ ಕೊಡಲಿಯಾಗಿ
ಕಟ್ಟಿ ಬಾಧಿಸಿದೆ ನಾ ಪರರ
ಮುಟ್ಟಿ ಕೈ ಧರ್ಮವ ಮಾಡಲಿಲ್ಲವು ಎಂದು
ಬಿಟ್ಟ ಕಲ್ಲಿಯ ಪಕ್ಷಿಗಳನು ||೪||

ವಿಪರೀತವಾಗಿ ಹಾರಿದ ಪಕ್ಷಿಗಳ ಕಂಡು
ಉಪಮೆಯು ಬೇಡ ನೋಡಿದನು
ಕಪಟಬುದ್ಧಿಯ ಬಿಟ್ಟ ಕಾಡ ಬೇಡನು ಕಂಡ
ಸ್ವಪ್ನದಿ ಜ್ಞಾನ ಬಂದಂತೆ ||೫||

ಎನ್ನವಗುಣವ ನೋಡದೆ ಬೆಂಕಿಯು ತಂದು
ಚನ್ನಾಗಿ ನೀವು ಕಾಸಿದಿರಿ
ಇನ್ನೊಂದು ಬೇಡುವೆ ಎಲೆಪಕ್ಷಿ ಹಸಿದೆನು
ಅನ್ನವ ಕಾಣಿಸಬೇಕು ||೬||

ಎಂದ ಮಾತನು ಕೇಳಿ ನಿಂದು ಕಪೋತಕಿ
ಬಂದಳಾಗವನ ಅಶನಕ್ಕೆ
ಬಂದಾಗ ತಿಳುಹಿದೆನೆಂದು ಕಪೋತಿಯು
ನಿಂದಿರದೆ ಕಿಚ್ಚ ಬೀಳೆ ||೭||

ಕಂಡು ಬೇಗದಿ ಬಂದು ಗಂಡು ಪಕ್ಷಿಯು ಬೀಳೆ
ಕೆಂಡಪ ಪುಟಮಾಡಿ ಶಬರ
ಗಂಡೆ ಹೆಂಡಿರು ಎನಗಾಗಿ ಮಡಿದರು ಎಂದು
ಕೊಂಡದೆ ಬಿದ್ದನು ಶಬರ ||೮||

ಕಿಚ್ಚಿಗೆ ಬಿದ್ದಂತ ಅಚ್ಚರಿಯನು ಕಂಡು
ಮೆಚ್ಚುತ ಶಿವನು ಪಾರ್ವತಿಯು
ಮೆಚ್ಚಿ ಪ್ರಾಣವ ಕೊಡೆ ಹರುಷದಿಂದಲಿ ಬಂದು
ಉತ್ಸಾಹದಲಿ ಪಾದಕ್ಕೆರಗಿ ||೯||

ಎರಗಿದವರನೆತ್ತಿ ಹರಸು ಪುಷ್ಪದಿ ಕು
ಳ್ಳಿರಿಸಿ ಕೈಲಾಸಪುರಕ್ಕೆ
ಹರುಷದಿ ಕರತಂದು ತನ್ನ ಸನ್ನಿಧಿಯೊಳು
ಯಿರಿಸಿದ ನಾನೇನ ಪೇಳ್ವೆ ||೧೦||

—ನಂಜಕವಿ

**ಶಬ್ದಾರ್ಥ:**

ಅಕ್ಕರ – ಪ್ರೀತಿ; ಮರುಕ – ಕರುಣೆ; ಕೊಕ್ಕು – ಚುಂಚು; ಪಕ್ಷ – ಬದಿ; ಕಲ್ಲಿ – ಬಲೆ; ಅಶನ – ಅನ್ನ, ಆಹಾರ; ಎರಗು – ಬಾಗು, ನಮಸ್ಕರಿಸು.

**ಪ್ರಶ್ನೆ:**

೧. ಗಂಡು ಕಪೋತವು ಏನು ಮಾಡಿತು ?
೨. ಬೇಡನು ಯಾಕೆ ದುಃಖಿಸಿದನು ?
೩. ಬೇಡನು ತನ್ನ ಬಲೆಯಲ್ಲಿಯ ಪಕ್ಷಿಗಳನ್ನು ಯಾಕೆ ಬಿಟ್ಟನು ?
೪. ಬೇಡನು ಪಕ್ಷಿಗಳಿಗೆ ಏನೆಂದು ಕೇಳುತ್ತಾನೆ ?
೫. ಕಪೋತಗಳು ಬೆಂಕಿಯಲ್ಲಿ ಯಾಕೆ ಬೀಳುತ್ತವೆ ?
೬. ಬೇಡನು ಬೆಂಕಿಯಲ್ಲಿ ಯಾಕೆ ಬೀಳುತ್ತಾನೆ ?
೭. ಶಿವ–ಪಾರ್ವತಿಯರು ಅಲ್ಲಿಗೆ ಯಾಕೆ ಬರುತ್ತಾರೆ ?

**ಬರೆಹ:**

೧. ಕಪೋತದ ಕಥೆ ಬರೆಯಿರಿ.
೨. 'ಹಾರಾಡುವ ಹಕ್ಕಿಗಳು' ಎಂಬ ವಿಷಯವಾಗಿ ನಾಲ್ಕು ಮಾತುಗಳನ್ನು ಬರೆಯಿರಿ.

# ೧೪. ದಾರಿ

[ ನಮ್ಮ ಜೀವನದ ದಾರಿ ಸುಗಮವಿರುವದಿಲ್ಲ. ದಾರಿಯಲ್ಲಿ ಅನೇಕ ಅಡಚಣಿ, ತೊಂದರೆ, ಗಂಡಾಂತರ ಪ್ರಸಂಗಗಳು ಬರುತ್ತವೆ. ಅವುಗಳನ್ನು ದಾಟಿ ಹೇಗೆ ಮುಂದೆ ಸಾಗಬೇಕೋ ಎಲ್ಲೆಲ್ಲಿಯೂ ಮಬ್ಬುಗತ್ತಲೆ. ಇಂಥ ಒಂದು ಪ್ರಸಂಗದಲ್ಲಿ ನಮ್ಮ ನಾಡಿನ ಸುಪ್ರಸಿದ್ಧ ಕವಿಗಳಾದ ಪಾಂಡೇಶ್ವರ ಗಣಪತರಾಯರು ದಾರಿ ತೋರುವ ತಾರೆಯನ್ನು ಕುರಿತು ಈ ಕವನ ರಚಿಸಿದ್ದಾರೆ. ಅವರ ಉತ್ಕಟವಾದ ಭಾವನೆಯನ್ನು ನಾವಿಲ್ಲಿ ಕಾಣಬಹುದು. ರಾಗ ಶಹನ, ಝಂಪೆ ತಾಳದಲ್ಲಿ ಈ ಹಾಡನ್ನು ಬಹಳ ಅಂದವಾಗಿ ಹಾಡಲು ಬರುತ್ತದೆ. ]

ತಂದೆ ನಾ ನಡೆನಡೆದು ಬಲು ಬಳಲಿದೆನು, ದಾರಿ
ಇನಿತೊಂದು ಕಠಿನವೆಂದರಿಯದಾದೆ
ಹಿಂದಕಡಿಯಿಡಲಾರೆ, ದಾರಿದೋರುವ ತಾರೆ,
ಮುಂದರಿಯೆ, ಮಬ್ಬಿನಲ್ಲಿ ಕಾಣದಾದೆ ||೧||

ಕಲ್ಲುಂಟು ಮುಳ್ಳುಂಟು ತಗ್ಗುದಿನ್ನೆಗಳುಂಟು
ಮೆಲ್ಲಡಿಯ ಮನುಜಗಿದು ಸಲ್ವದುಂಟೆ ?
ಎಲ್ಲ ದಾರಿಗಳಂತೆ ಈ ಲೋಕದೊಳಗಂತೆ
ಸೊಲ್ಲಿಸಿದರಲ್ತೆ ಬಲ್ಲವರು ಮುಂತೆ ! ||೨||

ವಕ್ರವಾಗಿದೆ ದಾರಿಯೆಂದದನು ದೂರುವೆನೆ ?
ಆದನಳೆಯುವೆನ್ನಡಿಯ ಹಳಿಯದಿಹನೆ ?
ಶಕ್ರ ಸೂರ್ಯರ ಶುದ್ಧ ಪಾದವಾದೊಡೆಮೇನೊ
ಹುಡಿಯುಂಟದೇ ಹಾದಿನಡೆಯಲಹುದೆ ? ||೩||

ಕೈ ದೀವಿಗೆಯೇ ? ಮೆಯ್ಯ ಸುಡುವಗ್ನಿ ಜ್ವಾಲೆಯೆ ?
ಬೀದಿಯೇ ? ಬಾಯ್ದೆರೆದ ನಕ್ರ ಮುಖವೆ ?
ಹೊಗಳಿಕೆಯೆ ? ತೆಗಳಿಕೆಯೆ ? ಹೂವೆ ? ಹಾವಿನ ಹೆಡೆಯೆ ?
ನಗೆಯೆ ? ಬಗೆಯಿರಿವ ಹಗೆಗಳ ಕೋರೆಯೇ ? ||೪||

ಅವನಂಟನು ನೆಚ್ಚಿ ನಡೆಯಲಾನೊಲ್ಲೆ ! ನೀ
ನೊಬ್ಬನೇ ಕೈಗೊಡುವ ಬಂಧುವೆನೆಗೆ
ಭಾವ ಭಾವದಿ ಬಂದು ಕನಸನೆನಿತನೊ ತಂದು
ತಂದೆ ! ನೀ ಮುನ್ನೆನಿತುಪರಿ ಸಲಹಿದೆ ||೫||

—ಗಣಪತರಾವ ಪಾಂಡೇಶ್ವರ

**ಶಬ್ದಾರ್ಥ:**

ಶಕ್ರ–ಇಂದ್ರ; ನಕ್ರ–ಮೊಸಳೆ; ಕೈಗೊಡು–ನೆರವಾಗು.

**ಪ್ರಶ್ನೆ:**

೧. ದಾರಿಯಲ್ಲಿ ಬಲು ಬಳಲಿದ ಕಾರಣವೇನು ?

೨. ದಾರಿಯಲ್ಲಿ ಏನೇನು ಇವೆ ?

೩. ಕವಿ ತಾನು ನಡೆಯುವುದರ ಬಗ್ಗೆ ಮತ್ತು ಶಕ್ರ ಸೂರ್ಯರು ನಡೆಯುವುದರ ಬಗ್ಗೆ ಯಾವ ಯಾವ ಮಾತು ಹೇಳಿರುವನು ?

೪. ದಾರಿಯಲ್ಲಿ ಏನೇನು ಬರಬಹುದೆಂದು ಹೇಳಿದೆ ?

೫. ಕವಿ ಯಾರನ್ನು ನೆಚ್ಚಿ ಹೊರಟಿರುವನು ? ಏಕೆ ?

**ಬರೆಹ:**

ಈ ಕವನದಲ್ಲಿ ವರ್ಣಿಸಿರುವ 'ದಾರಿ'ಯ ವಿಚಾರಗಳನ್ನು ವಿವರಿಸಿ ಒಂದು ಚಿಕ್ಕ ನಿಬಂಧ ಬರೆಯಿರಿ.

---

# ೧೫. ಸಂಕ್ರಾಂತಿ

[ ಸಂಕ್ರಮಣ ಹಬ್ಬದ ದಿನ ನಮ್ಮ ಬಂಧು-ಬಳಗದವರನ್ನು ಭೆಟ್ಟಿಯಾಗುತ್ತೇವೆ. ಬಂಧು ಬಳಗದವರಿಗೆ ಎಳ್ಳು–ಬೆಲ್ಲ ಅಥವಾ ಕುಸರೆಳ್ಳು ಕೊಟ್ಟು 'ಸವಿಮಾತನಾಡಿರಿ' ಎಂದು ಕುಲಕುಲನೆ ನಗುತ್ತ ಹೇಳುತ್ತೇವೆ. ಹಬ್ಬವು ಒಂದೇ ದಿನವಾದರೂ, ಸವಿ ಮಾತನಾಡುವುದು ಯಾವಾಗಲೂ ಇರಬೇಕೆಂದು ಬಯಸುತ್ತೇವೆ. ಇಷ್ಟು ಸಂಕ್ರಮಣದ ಹಬ್ಬದಲ್ಲಿ ನಾವು ಈ ಅರ್ಥ ತಿಳಿದುಕೊಂಡೆವು. ಆದರೆ ಕವಿ ಇನ್ನು ಅನೇಕ ಅರ್ಥಗಳನ್ನು ಭಾವಯುತವಾಗಿ ಹೇಳುತ್ತಾನೆ. ವಿವಿಧ ದೃಷ್ಟಿಯಿಂದ ಸಂಕ್ರಮಣ ಹಬ್ಬವು ನಿಜವಾಗಿಯೂ ಸಂಕ್ರಾಂತಿಯಾಗಿದೆ. ಅದು ಹೇಗೆ ಎಂಬುದನ್ನು ಕೀರ್ತಿವೆತ್ತ ಕವಿಗಳಾದ ಆನಂದಕಂದರ ಈ ಭಾವಗೀತೆಯನ್ನು ನೋಡಬಹುದು. ]

● ● ●

ಕಳೆದು ಭ್ರಾಂತಿ ತುಳಿದ ಶಾಂತಿ
  ಹೊಳೆಯಿತು ಸಂಕ್ರಾಂತಿ !
ಇಳೆಯೊಡೆದ ಕುಳಿರನಳಿದು
  ಬಲಿಯಲು ಹೊಸಕಾಂತಿ ! ||ಪಲ್ಲ||

ಮೂಡುಗಾಳಿ ಬೀಸಿ ಬೀಸಿ,
ನಾಡ ಬೆಳೆಯ ಕಸುಕ ಸೋಸಿ,
ಮಾಡಿ ವಿವಿಧ ಧಾನ್ಯ ರಾಶಿ,

ಹಸಿವೆಗೀಯೆ ಶಾಂತಿ........
ಕಳೆದು ಭ್ರಾಂತಿ ತುಳಿದ ಶಾಂತಿ
ಹೊಳೆಯಿತು ಸಂಕ್ರಾಂತಿ । ॥೧॥

ಕುಡಿಯೊಡಿದಿದೆ ಬರಲುಮಾವು,
ಗಿಡಗಿಡದ ಕಾಡೆಲ್ಲ ಹೂವು,
ಹುಡುಕುತಲಿದೆ ಜೇನ್ಗೆ ಠಾವು
ಜೇನ್ನೊಣಗಳ ಹಂತಿ !
ಕಳೆದು ಭ್ರಾಂತಿ ತುಳಿದ ಶಾಂತಿ
ಹೊಳೆಯಿತು ಸಂಕ್ರಾಂತಿ ! ॥೨॥

ಬಿಸುಪ ಕಳೆದುಕೊಂಡ ರವಿ,
ಎಸೆವನಿದೋ ತೀವಿ ಭವಿ,
ಹೊಸ ಹಬ್ಬವಿದೆನೀರ ಸವಿ !
ಬುವಿಯು ಭಾಗ್ಯವಂತಿ........
ಕಳೆದು ಭ್ರಾಂತಿ ತುಳಿದ ಶಾಂತಿ
ಹೊಳೆಯಿತು ಸಂಕ್ರಾಂತಿ ! ॥೩॥

ಒಲವಮ್ಮನ ಜಾತ್ರೆಗೆಂದು
ಚೆಲುವಿನ ಗುಡಿಯೆತ್ತಿ ನಿಂದು
ನಲಿಯುತಲಿದೆ ಹೆಣ್ಣು–ಗಂಡು,
ಇಲ್ಲದೆ ವಿಶ್ರಾಂತಿ........
ಕಳೆದು ಭ್ರಾಂತಿ ತುಳಿದ ಶಾಂತಿ
ಹೊಳೆಯಿತು ಸಂಕ್ರಾಂತಿ ! ॥೪॥

ಎಳ್ಳು-ಬೆಲ್ಲ ಚಿಗುಳಿ ಹದ
ಒಲ್ದಾಯಿಗೆ ಶ್ರೀ ಪ್ರಸಾದ,
ಸಲ್ಲಿಸಿ ಸೆಳೆಯುವರು ಮುದ
ಏನಿದೇನು ಶಾಂತಿ........
ಕಳೆದು ಭ್ರಾಂತಿ ತುಳಿದ ಶಾಂತಿ
ಹೊಳೆಯಿತು ಸಂಕ್ರಾಂತಿ ! ॥೫॥

ಎಳ್ಳನೀರು ಎದೆಯೊಳಾಯ್ತು,
ಬೆಲ್ಲದ ಸಿಹಿ ಸೊಲ್ಲೊಳಾಯ್ತು,
ಎಲ್ಲಿಯು ಸಮರಸದ ಗುರುತು
ಶಾಂತಿ ಶಾಂತಿ ಶಾಂತಿ !
ಕಳೆದು ಭ್ರಾಂತಿ ತುಳಿದ ಶಾಂತಿ
ಹೊಳೆಯಿತು ಸಂಕ್ರಾಂತಿ ॥೬॥

—ಆನಂದಕಂದ

**ಶಬ್ದಾರ್ಥ:**

ಕುಳಿರು – ಚಳಿ; ಹಂತಿ – ಸಾಲು; ಗುಡಿ – ಧ್ವಜ;

**ಪ್ರಶ್ನೆ:**

೧. ಸಂಕ್ರಾಂತಿ ಹೊಸ ಕಾಂತಿಯನ್ನು ಹೇಗೆ ತರುತ್ತದೆ ?
೨. ಸಂಕ್ರಾಂತಿ ಹಸಿವಿಗೆ ಶಾಂತಿಯನ್ನು ಹೇಗೆ ಕೊಡುತ್ತಿದೆ ?
೩. ಜೇನ್ನೊಣಗಳು ಯಾವ ಕಾರ್ಯ ಮಾಡುತ್ತಿವೆ ?
೪. ಬುವಿಯು ಭಾಗ್ಯವಂತಿ ಎಂದು ಏಕೆ ಹೇಳಬೇಕು ?
೫. ಹೆಣ್ಣು–ಗಂಡು ಯಾವ ರೀತಿ ನಲಿಯುತ್ತಿದ್ದಾರೆ ?
೬. ಸಂಕ್ರಾಂತಿಯಲ್ಲಿ ಎಳ್ಳು-ಬೆಲ್ಲ ಕೊಡುವ ರೂಢಿಗೆ, ಈ ಕವನದಲ್ಲಿ ಹೇಗೆ ಅರ್ಥ ಮಾಡಿ ಹೇಳಿದೆ ?
೭. ಸಂಕ್ರಾಂತಿ ಮುಖ್ಯವಾಗಿ ಯಾವ ಮಾತನ್ನು ಬೀರುತ್ತ ಬರುತ್ತಿದೆ ?

**ಬರೆಹ:**

ನಿಮ್ಮ ಮನೆಯಲ್ಲಿ ಆಚರಿಸಿದ ಸಂಕ್ರಾಂತಿಯ ಹಬ್ಬದ ಆನಂದವನ್ನು ವಿವರಿಸಿ ನಿಮ್ಮ ಅಕ್ಕನಿಗೆ ಒಂದು ಪತ್ರ ಬರೆಯಿರಿ.



# ೧೬. ತೊಟ್ಟಿಲದ ಹಾಡು

[ ಮನೆ ಮನೆಗಳಲ್ಲಿ ಜೋಗುಳದ ಧ್ವನಿಯನ್ನು ನೀವು ಕೇಳಿರಬಹುದು. 'ಲಾಲಿ' ಪದ್ಯಗಳಂತೂ ಕನ್ನಡಿಗರಿಗೆ ಹೊಸದಾದವುಗಳಲ್ಲ, ಇಲ್ಲಿ 'ತೊಟ್ಟಿಲಿನ ಹಾಡು' ಎಂಬ ಕವನದಲ್ಲಿ ತಾಯಿಯ ತಿಳಿಹೃದಯವನ್ನು ಮುದ್ದು ಮಗುವಿನ ಮುದ್ದಾದ ಆಟವನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಕವಿತೆ ಅನುಭವಕ್ಕೆ ಸರಸವಾಗಿದೆ. ಜೋಗುಳದ ಧ್ವನಿಯು ನಮಗೂ ನಿದ್ದೆ ತರುವದು ! ]

■ ■ ■

ಅತ್ತಿತ್ತ ನೋಡದಿರು, ಅತ್ತು ಹೊರಳಾಡದಿರು
ನಿದ್ದೆ ಬರುವಳು ಹೊದ್ದು ಮಲಗು, ಮಗುವೆ;
ಸುತ್ತಿ ಹೊರಳಾಡದಿರು, ಮತ್ತೆ ಹಟ ಹೂಡದಿರು,
ನಿದ್ದೆ ಬರುವಳು, ಕದ್ದು ಮಲಗು ಮಗುವೆ ‖ ೧ ‖

ಮಲಗು ಚೆಲ್ವಿನ ತೆರೆಯೆ, ಮಲಗು ಒಲ್ಮೆಯ ಸೆರೆಯೆ,
ಮಲಗು ತೊಟ್ಟಿಲ ಸಿರಿಯೆ, ದೇವರಂತೆ;
ಮಲಗು ಮುದ್ದಿನ ಗಿಣಿಯೆ, ಮಲಗು ಮುತ್ತಿನ ಮಣಿಯೆ,
ಮಲಗು, ಚಂದಿರನೂರ ಹೋಗುವೆಯಂತೆ

ಜೋ, ಜೋ, ಜೋ–ಎಂದು ತೊಟ್ಟಿಲನು
ತೂಗುವೆನು ಮಲಗೆನ್ನ ತುಂಟ ಮಗುವೆ;
ಜೋ. ಜೋ, ಜೋ– ಎಂದು ತೊಟ್ಟಿಲನು
ತೂಗುವೆನು ಮಲಗೆನ್ನ ಜಾಣ ಮಗುವೆ ॥ ೩ ॥

ತಾರೆಗಳ ಜರತಾರಿಯಂಗಿ ತೊಡಿಸುವರಂತೆ
ಚಂದಿರನ ತಂಗಿಯರು ನಿನ್ನ ಕರೆದು;
ಹೂವ ಮುಡಿಸುವರಂತೆ, ಹಾಲು ಕುಡಿಸುವರಂತೆ,
ವೀಣೆ ನುಡಿಸುವರಂತೆ, ಸುತ್ತ ನೆರೆದು ॥ ೪ ॥

ಮಕ್ಕಳಿಲ್ಲದ ಅಕ್ಕತಂಗಿಯರ ನಗುವಾಗಿ
ಚಕ್ಕಂದವಾಡಿ ಬಾ ಚಿಕ್ಕ ಮಗುವೆ;
ದೂರ ದೂರಿನ ಬಸದ ಹೂದಡವ ಕೊಳಗಳಲಿ
ನೀರಾಟವಾಡಿ ಬಾ ಧೀರ ಮಗುವೆ ॥ ೫ ॥

ಜೋ, ಜೋ, ಜೋ– ಎಂದು ತೊಟ್ಟಿಲನು
ತೂಗುವೆನು ಮಲಗೆನ್ನ ತುಂಟ ಮಗುವೆ.
ಜೋ, ಜೋ, ಜೋ– ಎಂದು ತೊಟ್ಟಿಲನು
ತೂಗುವೆನು ಮಲಗೆನ್ನ ಜಾಣ ಮಗುವೆ ॥ ೬ ॥

ಬಣ್ಣ ಬಣ್ಣದ ಕನಸು ಕರಗುವುದು ಬಲು ಬೇಗ;
ಹಗಲು ಬರುವನು ಬೆಳ್ಳಿ ಮುಗಿಲ ನಡುವೆ,—
ಚಿನ್ನದಂಬಾರಿಯಲಿ ನಿನ್ನ ಕಳುಹುವರಾಗ
ಪಟ್ಟದಾನೆಯ ಮೇಲೆ ಪುಟ್ಟ ಮಗುವೆ ॥ ೭ ॥

ಬೆಳಗಾಗ ನಿನ್ನ ಬಳಿ ಬಂದು 'ಕಂದಾ' ಎಂದು
ಕೂಗುವೆನು ಪಚ್ಚೆಕಣ್ದೆರೆವೆಯಂತೆ;
ನಿನ್ನ ನುಡಿಯಲಿ ನೀನೆ ಕಂಡ ಕನಸೆಲ್ಲವನು
ಅವರ ಕಿವಿಗಿಂಪಾಗಿ ನುಡಿವೆಯಂತೆ ॥ ೮ ॥

ಜೋ, ಜೋ, ಜೋ– ಎಂದು ತೊಟ್ಟಿಲನು
ತೂಗುವೆನು ಮಲಗೆನ್ನ ತುಂಟ ಮಗುವೆ.
ಜೋ, ಜೋ, ಜೋ– ಎಂದು ತೊಟ್ಟಿಲನು
ತೂಗುವೆನು ಮಲಗೆನ್ನ ಜಾಣ ಮಗುವೆ ॥ ೯ ॥

—ಕೆ. ಎಸ್. ನರಸಿಂಹಸ್ವಾಮಿ

**ಶಬ್ದಾರ್ಥ:**

ಒಲ್ಮೆ – ಪ್ರೀತಿ; ಸಿರಿ – ಸಂಪತ್ತು, ವೈಭವ, ಕೊಳ – ಸರೋವರ; ಚಕ್ಕಂದ – ಮನಸ್ಸಿಗೆ ಬಂದಂತೆ, ಸರಸ.

**ಪ್ರಶ್ನೆ:**

೧. ಮೊದಲನೆಯ ಪದ್ಯದಲ್ಲಿ ತಾಯಿ ಮಗುವಿಗೆ ಏನು ಹೇಳುತ್ತಾಳೆ ?
೨. ತಾಯಿಯು ಮಗುವನ್ನು ಹೇಗೆ ಮುದ್ದಿಸಿ ಕರೆಯುತ್ತಾಳೆ ?
೩. ಕನಸಿನಲ್ಲಿ ಮಗುವು ಏನೇನು ಕಾಣುವದು ?
೪. ಜೋಗಾದ ಮೇಲೆ ಮಗುವಿಗೆ ಏನು ಮಾಡಲು ತಾಯಿ ಹೇಳುತ್ತಾಳೆ ?

**ಬರೆಹ:**

೧. 'ಮಕ್ಕಳ ಆಟ' ಈ ವಿಷಯಕ್ಕೆ ನಾಲ್ಕು ಮಾತುಗಳನ್ನು ಬರೆಯಿರಿ.
೨. ಕವಿಯ ಭಾವವನ್ನು ಸಂಗ್ರಹಿಸಿ ಬರೆಯಿರಿ.

# ೧೭. ಜೋಗದ ಝೋಕ್

[ ಜೋಗದ ಜಲಪಾತ ತನ್ನ ಸೃಷ್ಟಿ ಸೌಂದರ್ಯದಿಂದ, ಅದ್ಭುತವಾದ ಶಕ್ತಿಯಿಂದ ಜಗತ್ತಿನ ಜನರನ್ನೇ ಆಕರ್ಷಿಸಿದೆ. ಆ ಆಕರ್ಷಣ ಶಕ್ತಿಯನ್ನು ವರ್ಣಿಸಿದ ಒಂದು ಜಾನಪದ ಗೀತೆಯೇ ಜೋಗದ ಝೋಕ್. ಇದನ್ನು ಶ್ರೀ ಮೂಗೂರು ಮಲ್ಲಪ್ಪನವರು ಕಟ್ಟಿರುವರು. ಅವರು ಬರೆದ ಕವನದಲ್ಲಿಯ ಹಲವು ನುಡಿಗಳನ್ನು ಸಂಗ್ರಹಿಸಿ ಇಲ್ಲಿ ಪ್ರಕಟಿಸಲಾಗಿದೆ. ]

• ○ •

ಮಾನವನಾಗಿ ಹುಟ್ಟಿದ ಮ್ಯಾಲೆ ಏನೇನ ಕಂಡಿ ।
ಸಾಯೋತನಕಾ ಸಂಸಾರದೊಳಗೆ ಗಂಡಾಗುಂಡಿ ।
ಹೇರಿಕೊಂಡು ಹೋಗೋದಿಲ್ಲ ಸತ್ತಾಗಬಂಡಿ ।
ಇರೋದರೊಳಗೆ ನೋಡು ಒಮ್ಮೆ ಜೋಗದ ಗುಂಡಿ ॥ ೧ ॥

ನಾಡಿನೊಳಗೆ ನಾಡು ಚೆಲುವುಕನ್ನಡ ನಾಡು ।
ಬೆಳ್ಳಿ, ಭಂಗಾರ ಬೆಳೆಯುತಾವೆ ಬೆಟ್ಟಕಾಡು ।
ಭೂಮಿತಾಯಿ ಮುಡಿದು ನಿಂತಾಳ್ ಬಾಸಿಂಗ್ ಜೋಡು ।
ಬಾಣಾವತಿ ಬೆಡಗಿನಿಂದ ಬರ್‍ತಾಳ್ ನೋಡು ॥ ೨ ॥

ಹೆಸರು ಮರ್‍ತಿ ಶರಾವತಿ ಅದೇನ್ ಕಷ್ಟ ।
ಕಡೆದ ಕಲ್ಲ ಕಂಬದ ಮ್ಯಾಲೆ ಪೂಲಿನ ಕಟ್ಟ ।
ಎಷ್ಟು ಮಂದಿ ಎದೆಯ ಮುರಿದು ಪಡುತಾರೆ ಕಷ್ಟ ।
ಸಣ್ಣದರಿಂದ ದೊಡ್ಡದಾಗಿ ಕಾಣೋದ್ ಬೆಟ್ಟ ॥ ೩ ॥

ಬುತ್ತಿ ಉಣುತಿದ್ರುಣ್ಣು ಇಲ್ಲಿ ಸೊಂಪಾಗಿದೆ ।
ಸೊಂಪು ಇಂಪು ಸೇರಿ ಮನಸು ಕಂಪಾಗ್ತದೆ ।
ಕಂಪಿನಿಂದ ಜೀವಕ್ಕೊಂದು ತಂಪಾಗ್ತದೆ ।
ತಂಪಿನೊಳಗೆ ಮತ್ತೊಂದೇನೊ ಕಾಣಿಸ್ತದೆ ॥ ೪ ॥

ಅಡ್ಡಬದಿ ಒಡ್ಡು ನಿಲ್ಲಿಸಿ ನೀರಿನ ಮಿತಿ ।
ಇದರ ಒಳಗೆ ಇನ್ನು ಒಂದು ಹುನ್ನಾರೈತಿ ।
ನೀರ ಕೆಡವಿ ರಾಟೆ ತಿರುವಿ ಮಿಂಚಿನ ಶಕ್ತಿ ।
ನಾಡಿಗೆಲ್ಲ ಕೊಡ್ತಾರಂತೆ ದೀಪದ ತಂತಿ ॥ ೫ ॥

ಶಿಸ್ತುಗಾರ ಶಿವಪ್ಪನಾಯಿಕ ಕೆಳದಿಯ ನಗರ ।
ಚಿಕ್ಕದೇವ ದೊಡ್ಡದೇವ ಮೈಸೂರಿನವರ ।
ಹಿಂದಕ್ಕಿಲ್ಲಿ ಬಂದಿದ್ರಂತೆ ಶ್ರೀರಾಮರ ।
ಎಲ್ಲ ಕತೆ ಹೇಳುತದೆ ಕಲ್ಪಾಂತರ ॥ ೬ ॥

ರಾಜಾ, ರಾಕೇಟ್, ರೋರರ್, ಲೇಡಿ, ಚತುರ್ಮುಖ ।
ಜೋಡಿಗೂಡಿ ಹಾಡುತಾವೆ ಹಿಂದಿನ ಸುಖ ।
ತಾನು ಬಿದ್ರೆ ಆದಿತೇಳು ತಾಯಿಗೆ ಬೆಳಕ ।
ಮುಂದಿನವರು ಕಂಡರೆ ಸಾಕು ಸ್ವಂತ ಸುಖ ॥ ೭ ॥

ಒಂದು ಎರಡು, ಮೂರು, ನಾಲ್ಕು ಆದಾವ ಮತ ।
ಹಿಂದಿನಿಂದ ಹರಿದು ಬಂದದ್ದೊಂದೇ ಮತ ।
ಗುಂಡಿ ಬಿದ್ದು ಹಾಳಾಗಲಿಕ್ಕೆ ಸಾವಿರ ಮತ ।
ಮುಂದೆ ಹೋಗಿ ಸೇರುವಲ್ಲಿಗೊಂದೇ ಮತ । ॥ ೮ ॥

ಶಹಜಹಾನ ತಾಜಮಹಲು ಕೊಹಿನೂರ್ ಮಣಿ ।
ಸಾವಿರಿದ್ರು ಸಲ್ಲವಿದಕೆ ಚೆಲುವಿನ ಕಣಿ ।
ಜೀವಂತ ಶರಾವತಿಗಿನ್ನಾವ್‌ದೆಣಿ ।
ಹೊಟ್ಟೆಕಿಚ್ಚಿಗಾಡಿಕೊಂಡ್ರೆ ಅದಕಾರ್ ಹೊಣಿ ॥ ೯ ॥

ಶರಾವತಿ ಕನ್ನಡನಾಡ ಭಾಗೀರಥಿ ।
ಪುಣ್ಯವಂತ್ರು ಬರ್ತಾರಿಲ್ಲಿ ದಿನಂಪ್ರತಿ ।
ಸಾವು ನೋವು ಸುಳಿಯದಿಲ್ಲಿಯ ಕರಾಮತಿ ।
ಮಲ್ಲೇಶನ ನೆನೆಯುತಿದ್ರೆ ಜೀವನ್ಮುಕ್ತಿ ॥ ೧೦ ॥

**ಶಬ್ದಾರ್ಥ:**

ಗಂಡಾಗುಂಡಿ – ತಾಪತ್ರಯ, ಅಡಚಣೆ; ಹುನ್ನಾರ – ಯುಕ್ತಿ; ಚಾತುರ್ಯ; ಕರಾಮತಿ – ಅದ್ಭುತ; ಚಮತ್ಕಾರ;

**ಪ್ರಶ್ನೆ:**

೧. ಪಶ್ಚಿಮದ ಬೆಟ್ಟವನ್ನು ವರ್ಣಿಸುವ ಒಂದು ಸುಂದರವಾದ ವಾಕ್ಯವನ್ನು ಹೇಳಿರಿ.

೨. ಸೃಷ್ಟಿಯ ಆ ಸೊಂಪಿನಲ್ಲಿ ಏನು ಸುಖವಿದೆ ?

೩. ಅಲ್ಲಿ ಹುನ್ನಾರು ಏನು ಇದೆ ?

೪. ಜೋಗದ ಜಲಪಾತ ಯಾವ ಯಾವ ಕಲ್ಪಾಂತರದ ಕಥೆಯನ್ನು ಹೇಳುತ್ತದೆ?

೫. ಶರಾವತಿ ಜಲಪಾತದಲ್ಲಿರುವ ಚತುರ್ಮುಖಗಳು ಯಾವು ? ಅವು ಏನನ್ನು ಹಾಡುತ್ತಿವೆ ?

೬. ಯಾವ ಉದ್ದೇಶದಿಂದ ನೀರು ಬೀಳುತ್ತದೆಯೆಂದು ಕವಿತೆಯಲ್ಲಿ ಹೇಳಿದೆ ?

೭. ಜೋಗದ ಝೋಕ್ ಚೆಲುವಿನ ಕಣಿಯೆಂದು ಹೇಗೆ ಹೇಳಿದೆ ?

೮. ಶರಾವತಿ ಕನ್ನಡನಾಡಿನ ಭಾಗೀರಥಿ ಯಾಕೆ ?

**ಬರೆಹ:**

೧. ಕೆಳಗಿನ ವಾಕ್ಯಗಳ ಅರ್ಥದ ಸ್ವಾರಸ್ಯವನ್ನು ತಿಳಿದುಕೊಂಡು ಕೆಲವು ಮಾತು ಬರೆಯಿರಿ.

(ಅ) ಭೂಮಿತಾಯಿ ಮುಡಿದು ನಿಂತಾಳ್ ಬಾಸಿಂಗ ಜೋಡು.

(ಬ) ಗುಂಡಿ ಬಿದ್ದು ಹಾಳಾಗಲಿಕ್ಕೆ ಸಾವಿರ ಮತ.

೨. (ಅ) ಸೊಂಪು, ತಂಪು, ಕಂಪು, ಇಂಪು ಈ ಎಲ್ಲ ಶಬ್ದಗಳನ್ನು ಉಪಯೋಗಿಸಿ ಅರ್ಥ ಸರಿಯಾಗುವಂತೆ ಒಂದು ವಾಕ್ಯ ಬರೆಯಿರಿ.

(ಬ) ಎದೆಮುರಿ, ಗಂಡಾಗುಂಡಿ ಇವುಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿ ಬರೆಯಿರಿ.



# ೧೮. ರೇಡಿಯೊ

[ ಇದು ತೀರ ಹೊಸ ರೀತಿಯ ಕವನ ಈಗ ವಿಜ್ಞಾನಯುಗ. ಹೊಸ ಹೊಸ ಯಂತ್ರಗಳು ಹೊರಟಿವೆ. ಹೂ, ಬೆಳದಿಂಗಳು, ತಾರೆ ಇವುಗಳನ್ನಷ್ಟೆ ನೋಡಿ, ಬೆರಗಾಗಿ ಕವಿ ಕವನ ಕಟ್ಟಬೇಕಾಗಿಲ್ಲ. ಯಂತ್ರಗಳ ಬಗ್ಗೆಯೂ ಕವನ ಬರೆಯಬಹುದು. ಶ್ರೀ ವಿ. ಕೃ. ಗೋಕಾಕ (ವಿನಾಯಕ) ಅವರು ನವ್ಯ ಕವನಗಳು ಮತ್ತು ಹಿಗ್ಗು ಈ ಹೊತ್ತಗೆಗಳಲ್ಲಿ ಇಂಥ ಎಷ್ಟೋ ಕವನಗಳನ್ನು ಬರೆದಿರುವರು. 'ನವ್ಯಕವನ'ದಲ್ಲಿ ಪ್ರಕಟವಾದ 'ರೇಡಿಯೊ' ಕವನವನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ]

■ ■ ■

— ೧ —

ಕಾಡಿಯೋ, ಬೇಡಿಯೋ
ತಂದೆ ನಿನ್ನ, ರೇಡಿಯೋ;
ಮನೆತುಂಬಿಸಿಕೊಂಡ ಸೊಸೆ
ಇಲ್ಲಿದೆ ಬಾ ಹೀಗೆ ಹಸೆ
ಹೇಳು ನಿನ್ನ ಕಥೆಯ ಹೇಳು
ರಸಮಯವಾಗಿರಲಿ ಬಾಳು
ಮನೆಗದೊಂದು ಹೊಸತು ಹೊಗರು
ಎದೆಬಳ್ಳಿಗೆ ಹೊಸತು ಚಿಗುರು
ಕಿರಿಯರ ಹುರಿದುಂಬಿಸು
ನಮ್ಮೆದೆ ಮನ ತುಂಬಿಸು
ಅಲೆಯಂಚೆಯ ಕಾಸಾರ
ಹೊಸರಕುತದ ಸಂಸಾರ
ನಂದಾದೀಪವಾದ ಮಿಂಚೆ
ಕರ್ಣಾಮೃತದೊಳಸಂಚೆ

— ೨ —

ಯಾವ ಗಾನ, ಯಾವ ತಾನ
ಸೊನೆ ಸುರಿವುದು ಸುಸಮ್ಮಾನ !
ಪಾಕ, ಪೇಟೆ, ಆಟ ನೋಟ
ಕ್ರಿಕೆಟ್ ಪಟುವು ಓಡಿದೋಟ
ಇನ್ನು ರಾಜ ಕಾರಣ
ಅದುವೆ ನಿನಗೆ ಹೂರಣ,
ಲೆಕ್ಕವಿಲ್ಲದನಿತು ಸಲ
ಮಾತನಾಡುತಿರುವೆಯಲ
ಎಲ್ಲ ಬಲ್ಲ ಯುವತಿ ನೀನು
ನಿನಗೆ ತಿಳಿಯದಿಹುದದೇನು
ಓ ವಿಜ್ಞಾನಿಯ ಕುವರಿ
ರಸಿಕ ಜ್ಞಾನಿಗಳ ಗೌರಿ.

—ವಿ. ಕೃ. ಗೋಕಾಕ

**ಶಬ್ದಾರ್ಥ:**

ಹಸೆ–ಹಾಸಿಗೆ; ಹೊಗರು–ಕಾಂತಿ; ಅಲೆಯಂಚೆ–ವಿದ್ಯುತ್ ಶಕ್ತಿ; ಕಾಸಾರ–ಸರೋವರ; ಸಮ್ಮಾನ–ಆನಂದ;

**ಪ್ರಶ್ನೆ:**

೧. ರೇಡಿಯೊ ಯಾರೆಂದು ಕವಿ ಹೇಳಿದ್ದಾನೆ ?
೨. ರೇಡಿಯೊದಿಂದ ಬಾಳಿಗೆ ಏನು ಸುಖವಿದೆ ?
೩. ರೇಡಿಯೊ ಏನು ಮಾಡಬೇಕೆಂದು ಕವಿ ಕೇಳಿಕೊಳ್ಳುತ್ತಾನೆ ?
೪. ರೇಡಿಯೊಕ್ಕೆ ' ಅಲೆಯಂಚೆಯ ಕಾಸಾರ ' ಎಂದು ಕರೆದಂತೆ, ಮತ್ತೆ ಏನೆಂದು ಕವಿ ಸಂಬೋಧಿಸಿರುವನು ?
೫. ರೇಡಿಯೊದಲ್ಲಿ ಕೇಳುವ ಹಾಡಿನ ಬಗ್ಗೆ ಏನು ಹೇಳಿದೆ ?
೬. " ಲೆಕ್ಕವಿಲ್ಲದನಿತುಸಲ, ಮಾತುನಾಡುತಿರುವೆಯಲ ! "
ರೇಡಿಯೊ ಮುಖ್ಯವಾಗಿ ಏನು ಮಾಡುವುದು ?
೭. ' ವಿಜ್ಞಾನಿಯ ಕುವರಿ ' ಎಂದು ರೇಡಿಯೊವನ್ನು ಏಕೆ ಕರೆದಿವೆ ?

**ಬರೆಹ:**

(ಅ) ಕೆಳಗಿನ ವಾಕ್ಯಗಳ ಸ್ವಾರಸ್ಯವನ್ನು ಬರೆಯಿರಿ.

೧. ಎದೆಬಳ್ಳಿಗೆ ಹೊಸತು ಚಿಗುರು.
೨. ಇನ್ನು ರಾಜಕಾರಣ
ಅದುವೆ ನಿನಗೆ ಹೂರಣ.

(ಬ) ಬಾನುಲಿ (ರೇಡಿಯೊ) ಕೇಂದ್ರಕ್ಕೆ ನೀವು ಭೆಟ್ಟಿ ಕೊಟ್ಟಿರುವಿರೆಂದು ತಿಳಿಯಿರಿ. ನೀವು ಭೆಟ್ಟಿಕೊಟ್ಟ ಬಾನುಲಿ ಕೇಂದ್ರದ ಬಗ್ಗೆ ನಿಮ್ಮ ಅಕ್ಕನಿಗೆ ಒಂದು ಪತ್ರ ಬರೆಯಿರಿ.




